# 'ಕೀಟ ಜಗತ್ತು'

ಡಾ॥ ಕೃಷ್ಣಾನಂದ ಕಾಮತ್

ಸಮರ್ಥ

ಬೆಂಗಳೂರು-79

'**KEETA JAGATTHU**' a treatise in Kannada about insects written by Dr. Krishnananda Kamath and Published by SAMARTHA PRAKASHANA, 635, 2nd Block, 3rd Stage, West of Chord Road, Bangalore-560 079. Phone : 353842



ಮುಖಪುಟ : ಸೂರಿ

**1992**

**ಬೆಲೆ 30/-**

# ಕೀಟ ಜಗತ್ತು

## ಪರಿವಿಡಿ

### ಭಾಗ 1 : ಕೀಟ ಕೋಟಿ

## ಭಾಗ 2 : ಇರುವೆಯ ಇರುವು

# ಮೊದಲ ಮಾತು

ಕೀಟಕೋಟಿಗಳಲ್ಲಿ ಕೆಲವುಗಳನ್ನು ಬಿಟ್ಟರೆ, ಉಳಿದವುಗಳ ಪರಿಚಯವೇ ನಮಗಿಲ್ಲ. ಅಂತೆಯೇ ಅವುಗಳನ್ನು ಹೆಸರಿಸುವ ಗೋಜಿಗೂ ಹೋಗದೆ, ಕೇವಲ ಹುಳಗಳು, ಹುಪ್ಪಡಿ, ಜೀವಿಗಳೆಂದೇ ಗುರುತಿಸುತ್ತೇನೆ. ಪಟ್ಟಾದಿಗಳ ಬಗ್ಗೆ ನಮಗಿರುವ ಹೇಸಿಗೆ, ಹೆದರಿಕೆ, ವಾಕರಿಕೆ, ಅಜ್ಞಾನಗಳೇ ಈ ಅಸಡ್ಡೆಗಳಿಗೆ ಮುಖ್ಯ ಕಾರಣ. ಆದ್ದರಿಂದ ಸದಾಕಾಲ ಅವುಗಳಿಂದ ಹರದಾರಿ ದೂರ ಇರಲು ಬಯಸುವುದಲ್ಲದೇ, ಸಾಧ್ಯವಿದ್ದ ಸಾಧನಗಳಿಂದ ಅವುಗಳನ್ನು ಸಾಯಿಸಲು ಎಂದೂ ಹಿಂದೆ ಮುಂದೆ ನೋಡುವುದೇ ಇಲ್ಲ. ಹಾವು, ಸರ್ಪಗಳಂತೆ ಇವೂ ನಮ್ಮ ಸಹಜೀವಿಗಳು, ಅವುಗಳಿಗೂ ಈ ಭೂಲೋಕದಲ್ಲಿ ಬಾಳಿ ಬದುಕುವ ಅವಕಾಶ ಕೊಡಬೇಕೆಂಬ ನ್ಯಾಯಬುದ್ಧಿ ಬಹುಸಂಖ್ಯಾತರಲ್ಲಿ ಜಾಗ್ರುತವಾಗುವುದೇ ಇಲ್ಲ.

ಕೀಟಗಳ ಜೀವನ ಕ್ರಮವನ್ನು ವೈಜ್ಞಾನಿಕ ಮನೋಭಾವನೆಯಿಂದ ಅರಿತುಕೊಂಡಾಗಲೇ, ಒಳಿತು ಮಾಡುವವನನ್ನು ರಕ್ಷಿಸಿ, ಕೆಡಕು ಮಾಡುವವನನ್ನು ಶಿಕ್ಷಿಸಲು ಸಾಧ್ಯ. ಈ ಉದ್ದೇಶದಿಂದ ಜನಸಾಮಾನ್ಯರಿಗೆ ರುಚಿಸುವಂತಹ ಲೇಖನಗಳನ್ನು 'ಕರ್ಮವೀರ', 'ಕಸ್ತೂರಿ', 'ಸುಧಾ', 'ಮಲ್ಲಿಗೆ' ಪತ್ರಿಕೆಗಳಲ್ಲಿ ಪ್ರಕಟಿಸಿದೆ. ಬೆಂಗಳೂರು ಆಕಾಶವಾಣಿ ಒಂದು ಭಾಷಣ ಬಿತ್ತರಿಸಿತು. ಇವುಗಳನ್ನೆಲ್ಲ ಒಟ್ಟಾಗಿ ಗ್ರಂಥ ರೂಪದಲ್ಲಿ ಪ್ರಕಟಿಸಬೇಕು ಎಂದಾಗ ಇನ್ನಷ್ಟು ಲೇಖನಗಳು ಇದ್ದರೆ ಚೆನ್ನಾಗಿರುತ್ತದೆ ಅನಿಸಿತು. ಇರುವೆಗಳು ವಿವಿಧ ಕಾರಣಗಳಿಗಾಗಿ ಸಕಲರಿಗೂ ಆಸಕ್ತಿ ಕೆರಳಿಸುವುದರಿಂದ, ಪಶ್ಚಿಮ ಬಂಗಾಲದ ಪ್ಲಾಸಿಯಲ್ಲಿ ಕಾಣಸಿಗುವ ಅಸಂಖ್ಯಾತ ಇರುವೆಗಳನ್ನು ಕುರಿತು ಎಂಟು ಅಧ್ಯಾಯಗಳನ್ನು ಬರೆದು ದ್ವಿತೀಯ ಭಾಗವಾಗಿ ಜೋಡಿಸಿದ್ದೇನೆ.

II

ತರುಣ ಗೆಳೆಯರಾದ ಶ್ರೀ ಭರತಾದ್ರಿಯವರು ಈ ಹಸ್ತಪ್ರತಿಯಲ್ಲಿ ಆಸಕ್ತಿವಹಿಸಿ ತಮ್ಮ ಆಪ್ತ ಗೆಳೆಯರಾದ ಶ್ರೀ ದಿನೇಶರಿಗೆ ಪ್ರಕಾಶನದ ಜವಾಬ್ದಾರಿ ಒಪ್ಪಿಸಿದರು. ಅಂದವಾಗಿ ಮುದ್ರಿಸಿದ ಬಸವೇಶ್ವರ ನಗರದ ಚಂದನ ಮುದ್ರಕರಿಗೂ, ಶೀಘ್ರದಲ್ಲಿ ಹೊರತಂದ 'ಸಮರ್ಥ ಪ್ರಕಾಶನ' ದವರಿಗೂ, ಶ್ರೀ ಭರತಾದ್ರಿ ಮತ್ತು ಶ್ರೀ ದಿನೇಶರಿಗೂ ಕೃತಜ್ಞನಾಗಿದ್ದೇನೆ. ಈ ಲೇಖನಗಳನ್ನು ಬರೆಯುವಂತೆ ಪ್ರೋತ್ಸಾಹಿಸಿ ಪ್ರಕಟಿಸಿದ ವಿವಿಧ ಪತ್ರಿಕೆಗಳ ಸಂಪಾದಕರಿಗೂ, ಆಕಾಶವಾಣಿಗೂ ಉಪಕೃತನಾಗಿದ್ದೇನೆ.

**ಕೃಷ್ಣಾನಂದ ಕಾಮತ,**

110, ಶಶಿಕಿರಣ, 18ನೆ ಅಡ್ಡರಸ್ತೆ,

ಮಲ್ಲೇಶ್ವರ, ಬೆಂಗಳೂರು–560 055

# ಕೀಟ ಜಗತ್ತು

## 1. ಸೌಂದರ್ಯಭರಿತ ಪಾತರಗಿತ್ತಿಗಳು

ನಮ್ಮ ಧಾರ್ಮಿಕ ಬೋಧನೆಯ ಪರಿಣಾಮವೋ ಏನೋ ನಾವೆಲ್ಲ ಪರಿಸರದಲ್ಲಿ ಪ್ರತಿನಿತ್ಯ ಕಂಡು ಬರುವ ನೂರಾರು ಕ್ರಿಮಿಕೀಟಗಳತ್ತ ಯಾವ ಲಕ್ಷ್ಯವನ್ನೂ ಪೂರೈಸುವುದಿಲ್ಲ. ಪಾಶ್ಚಿಮಾತ್ಯರಿಗೆ ನಿಸರ್ಗದ ವೈಶಿಷ್ಟ್ಯ ಕುತೂಹಲ ಕೆರಳಿಸುವಂತಹದಾದರೆ ನಮಗೆ ಅದು ಬರಡೆನಿಸುವದು. ಅಂತೆಯೇ ಮಕ್ಕಳು ಕಾಗೆ-ಕಪ್ಪೆಗಳ ಹಿಂದೆ ಓಡಿದರೆ ಇಲ್ಲವೇ ಕೀಟಗಳನ್ನು ಹಿಡಿದರೆ ಅವರನ್ನು, ಬೈದು, ಹೊಡೆದು ಅವುಗಳ, ಪಾಪವನ್ನು ಕಟ್ಟಿಕೊಳ್ಳ ದಂತೆ ಎಚ್ಚರ ಪಡುತ್ತೇವೆ. ಬಾಲ್ಯದಲ್ಲಿಯೇ ಚರಾಚರ ವಸ್ತುಗಳ ಬಗ್ಗೆ ಜಿಗುಪ್ಸೆ ಹುಟ್ಟುವಂತೆ ಮಾಡಿದ್ದರಿಂದ ಬಹುಸಂಖ್ಯಾತ ಹುಡುಗರು ತಮ್ಮೊಡನೆ ಬಾಳಿ ಬದುಕುವ ಇಂಥ ಜೀವಿಗಳ ಬಗ್ಗೆ ಪ್ರೀತಿಯನ್ನಾಗಲೀ, ಆಸಕ್ತಿಯಾಗಲೀ ತಳೆಯುವುದೇ ಇಲ್ಲ. ಕೀಟಲೆ ಮಾಡುವ (ಕಾಟ ಕೊಡುವ) ಕೀಟಗಳಲ್ಲದೆ, ಸೌಂದರ್ಯಭರಿತವಾದ, ಸ್ವಾರಸ್ಯಮಯವಾದ ಕೀಟಗಳು ಸಾವಿರಾರು ಇರುವವು. ಪಾತರಗಿತ್ತಿಗಳು ಅವುಗಳಲ್ಲಿ ಒಂದು ಗುಂಪುಮಾತ್ರ.

ಪ್ರತಿನಿತ್ಯ ನೋಡುವ ಪಾತರಗಿತ್ತಿಗಳಲ್ಲಿ ಎರಡು ವಿಧ. ಮೊದಲನೆ ಯದು ಬಡಕಲು ದೇಹದ, ತರತರದ ಮೀಸೆಯ, ಆಕರ್ಷಕ ಬಣ್ಣ

ಗಳನ್ನು ತಳೆದ ಸೂರ್ಯ ವಂಶಿಗಳು. ಅಂತೆಯೇ ಅವು ಹಗಲೆಲ್ಲ ಆ ಗಿಡದಿಂದ ಈ ಗಿಡಕ್ಕೆ ಹಾರುತ್ತ, ಅಲ್ಲಲ್ಲಿಯ ಹೂಗಳ ಮಧುವನ್ನು ಹೀರುತ್ತ ಜೀವನ ಕಳೆಯುವವು. ಎರಡನೆಯ ಪ್ರಕಾರದ ಚಿಟ್ಟೆಗಳು ಜಟ್ಟಿಯಂತೆ ಸದೃಢಕಾಯವುಳ್ಳವುಗಳು. ದಪ್ಪ ಮೀಸೆಯ ಜಡಭರತನಂಥವು. ಅವು ನಿಶಾಚರವಿರುವದರಿಂದ ಬಣ್ಣಗಳ ಬೆಡಗು ಇವಕ್ಕೆ ಇರುವದಿಲ್ಲ. ಸೂರ್ಯವಂಶಿಗಳು ರಾತ್ರಿಯಲ್ಲಿ ವಿಶ್ರಮಿಸಿದರೆ ಈ ನಿಶಾಚರ ಕೀಟಗಳು ಹಗಲಿನಲ್ಲಿ ವಿಶ್ರಮಿಸುವವು. ಇಷ್ಟಾದರೂ ಅವುಗಳ ಬಾಳು ಬದುಕುಗಳಲ್ಲಿ ಬಹುಮಟ್ಟಿಗೆ ಹೋಲಿಕೆಯಿದೆ. ಎರಡೂ ಜಾತಿಗಳಿಗೆ ಚಲಿಸಲು ಆರು ಕಾಲುಗಳು, ಹಾರಲು ಇಜ್ಜೋಡು ರೆಕ್ಕೆಗಳು, ಗಂಡು, ಹೆಣ್ಣೆಂಬ ಬೇಧವಿಲ್ಲದೇ ಇರುವ ಜೋಡಿ ಸ್ಪರ್ಶ ಮೀಸೆಗಳು, ಅಲ್ಲದೇ ಮಧುವನ್ನು ಹೂವಿನಿಂದ ಹೀರಲು ಉದ್ದವಾದ ಬಾಯಿ ಇವೆ. ಅಲ್ಲಿ ಇಲ್ಲಿ ಎಲ್ಲ ಕಡೆಗೆ ಹಾರಾಡಿ ತಮಗೆ ಬೇಕಾದ ಹೂ ಕಂಡು ಬರಲು ತಮ್ಮ ಷಟ್‌ಪಾದಗಳಿಂದ ಹೂವನ್ನು ಭದ್ರವಾಗಿ ಹಿಡಿದು ವಿಶ್ರಾಂತಿಸುವವು. ಸೂರ್ಯಪ್ರಿಯರು ತಮ್ಮ ಪಕ್ಕಗಳನ್ನು ಕೈಮುಗಿಯುವಂತೆ ಜೋಡಿಸಿ ಮಂಡಿಸಿದರೆ, ನಿಶಾಚರರು ಅವುಗಳನ್ನು ವಿಮಾನದ ರೆಕ್ಕೆಗಳಂತೆ ಸದಾ ಕಾಲವು ಪಸರಿಸಿ ಹಿಡಿದಿರುವವು. ಕೊಳವೆಯಂತಿದ್ದ ಬಾಯಿಯನ್ನು ಮುಂದೆ ಚಾಚಿ ಡಾಕ್ಟರರು ಮದ್ದನ್ನು ಇಂಜೆಕ್ಷನ್ ಟ್ಯೂಬಿನಲ್ಲಿ ಹೀರಿಕೊಳ್ಳುವಂತೆ ಹೀರುವವು. ಹೆಣ್ಣು ಚಿಟ್ಟೆಗಿಂತ ಗಂಡು ಚಿಟ್ಟೆಯೇ ಹೆಚ್ಚು ಆಕರ್ಷಕವಿರುತ್ತದೆ. ಆದರೆ (ಮಾನವರಂತೆಯೇ) ಗಂಡು ಚಿಟ್ಟೆ ಹೆಣ್ಣು ಚಿಟ್ಟೆಯನ್ನರಸಿ ಹೊರಟಿರುತ್ತದೆ. ಹೆಣ್ಣು ಕೀಟದ ಮೈಯಿಂದ ಹೊರ ಹೊಮ್ಮುವ ಗಂಧವೇ ಇದಕ್ಕೆ ಕಾರಣ. ಪತ್ನಿ ಪಾತರಗಿತ್ತಿ ತನ್ನ ಪತಿ ಪಾತರಗಿತ್ತಿಗಿಂತ ಎತ್ತರವಾಗಿಯೂ, ದಪ್ಪವಾಗಿಯೂ ಇರುವುದು ವಾಡಿಕೆ. ಅದು ಧರಿಸಿರುವ (ಹೊತ್ತಿರುವ) ಬಹುಸಂಖ್ಯಾಕ ತತ್ತಿಗಳೇ ಇದಕ್ಕೆ ಕಾರಣ. ಪಾತರಗಿತ್ತಿಗಳಲ್ಲಿ ನೂರಾರು ಜಾತಿ, ವೈವಿಧ್ಯಗಳಿದ್ದರೂ ಅವೆಂದೂ ಅಂತರ್ಜಾತೀಯವಾಗಿ ಬೆರೆಯುವದಿಲ್ಲ. ಆದರೂ ಆಗೊಮ್ಮೆ ಈಗೊಮ್ಮೆ ಸಂತಾನ ತೀರ ಭಿನ್ನವಾಗಿರುವದುಂಟು. ಅರೆಗಂಡು, ಅರೆಹೆಣ್ಣು ಚಿಟ್ಟೆ ಹುಟ್ಟುವುದು ಹೆಚ್ಚು. ಇವುಗಳಲ್ಲಿ ಕೆಲವು ತಂದೆಯ ಹಾಗಿದ್ದರೆ ಇನ್ನು

ಕೆಲವು ತಾಯಿಯುಂತಿರುವವು. ಸುದೈವಕ್ಕೆ ಇಂಥ ಕೀಟಗಳು ಸಂತತಿ ಧಾರಣೆ ಮಾಡುವುದಿಲ್ಲ. ಇಲ್ಲದಿದ್ದರೆ ಇಂಥವುಗಳ ಸಂತಾನ ಹೇಗಾಗುತ್ತಿದ್ದವೆಂದು ಊಹೆಗೆ ಮೀರಿದ ಮಾತು.

ಇವುಗಳೆಲ್ಲ ತಮ್ಮ ಜೀವನವನ್ನು ತತ್ತಿ ರೂಪದಿಂದಲೇ ಪ್ರಾರಂಭಿಸುತ್ತವೆ. ತತ್ತಿ ಬಿಟ್ಟು ಹುಳುಗಳ ರೂಪದಲ್ಲಿ ಹೊರ ಬಂದೊಡನೆ ಶಾಖಾಹಾರಿಗಳಂತೆ ಎಲೆಗಳನ್ನು ಜಗಿದು ಬೆಳೆಯುವುದು. ಕೀಟ (ಹುಳ) ಗಳ ಹೊರ ಕವಚ ನಿರ್ಜೀವವಾಗಿರುವುದರಿಂದ ಅವು ಕೀಟಗಳೊಡವೆ ಬೆಳೆಯಲಾರವು. ಆದ್ದರಿಂದ ಆಗೊಮ್ಮೆ ಈಗೊಮ್ಮೆ ಈ ಹೊರ ಕವಚಗಳನ್ನು ಕಿತ್ತೊಗೆಯುವವು. ಹೀಗೆ ಐದಾರು ಬಾರಿ ಕವಚಗಳನ್ನು ಕಳೆಯುದರಲ್ಲಿ ಅವುಗಳ ಹಸಿವು ನೀಗಿ ಅವು ವಿಶ್ರಾಂತಿಗಾಗಿ ಏಕಾಂತವನ್ನು ಹುಡುಕಿ ಅಲ್ಲಿ ತನ್ನ ರೂಪವನ್ನೇ ಬದಲಿಸಿ ಸಂಪೂರ್ಣ ನಿದ್ರೆಯಲ್ಲಿ ತೊಡಗುವವು. ಈ ಅವಸ್ಥೆಯಲ್ಲಿ ಅವುಗಳ ಆಂತರಿಕ ಬದಲಾವಣೆಯಾಗಿ ಮೀಸೆ, ರೆಕ್ಕೆ ಮತ್ತು ಉಳಿದ ಅಂಗಾಂಗಗಳು ರೂಪಿತಗೊಳ್ಳುವವು. ಒಮ್ಮೆ ಅವುಗಳ ಬೆಳವಣಿಗೆ ಪೂರ್ತಿಯಾಯಿತೆಂದರೆ ಅವು ವಿಶ್ರಾಂತಿ ಕವಚವನ್ನು ತೊರೆದು ಪ್ರೌಢ ಪತಂಗಗಳಾಗಿ ಸ್ವಚ್ಛಂದವಾಗಿ ಹಾರಾಡಲಾರಂಭಿಸುವವು. ಕೀಟಾವಸ್ಥೆಯ ಹುಳಕ್ಕೂ ರೆಕ್ಕೆಯ ಪತಂಗಕ್ಕೂ ಯಾವ ಸಾಮ್ಯವೂ ಇಲ್ಲದ್ದರಿಂದ ಅವು ಒಂದೇ ಜೀವಿಯ ಎರಡು ರೂಪಗಳೆಂದರೆ ಎಷ್ಟು ಜನ ನಂಬಿಯಾರು?

ಪಾತರಗಿತ್ತಿಗಳನ್ನು ಸಾಕುವುದು ಕಿರಿಯರಿಗೆ ಒಂದು ಕುತೂಹಲಕಾರಿಯಾದ ಅನುಭವವಾಗಬಹುದು. ಹೂದೋಟದಲ್ಲಿ ಇಲ್ಲವೇ ಹೊಲದಲ್ಲಿ ಎಲೆಗಳನ್ನು ತಿನ್ನುತ್ತಿರುವ ಇದರ ಹುಳಗಳನ್ನು ತಂದು ಹವೆಯಾಡುವ ಪೆಟ್ಟಿಗೆಯೊಂದರಲ್ಲಿ ಇಡಬೇಕು. ಅವುಗಳ ಆಹಾರಕ್ಕೆಂದು ಎಲೆಗಳನ್ನು ಹಾಕುತ್ತಿರಬೇಕು. ಪ್ರತಿದಿನ ಹುಳುವಿನಲ್ಲಿ ಆಗುವ ಬದಲಾವಣೆಗಳನ್ನು ಹಾಳೆಯೊಂದರಲ್ಲಿ ಬರೆದಿಡಬೇಕು. ಹುಳ, ಪತಂಗವಾದಾಗ ಅದನ್ನು ಹಾರಲು ಬಿಟ್ಟು ಸ್ವಾತಂತ್ರ್ಯ ದಾನ ಮಾಡಿ ಆನಂದ ಪಡಬಹುದು. ಇಲ್ಲವೇ ಅದನ್ನು ಶಾಶ್ವತವಾಗಿ ಮನೆಯಲ್ಲಿ ಇಡಬೇಕೆಂದಿದ್ದರೆ ಅದರ ಬಣ್ಣ ಕಳೆಗುಂದುವ ಮೊದಲೇ ವಿಷಕಾರಿ ವಸ್ತುವಿನಿಂದ ಅದರ ಸಮಾಪ್ತಿಗೊಳಿಸಿ,

ಅದರ ನಡುವಿನಿಂದ ಟಾಚಣಿಯನ್ನು ಹಾಯಿಸಿ ರೆಕ್ಕೆಗಳನ್ನು ರಟ್ಟಿನ ಮೇಲೆ ಹರಡಿ ಇರುವೆಗಳಿಲ್ಲದ ಸ್ಥಳದಲ್ಲಿಟ್ಟು ಬಿಸಿಲಲ್ಲಿ ಒಣಗಿಸಬೇಕು. ಒಣಗಿದ ಚಿಟ್ಟೆಗಳನ್ನು ಹಬೆಯಾಡದ ಪೆಟ್ಟಿಗೆಯಲ್ಲಿಟ್ಟು ದಾಂಬರಿನ ಗುಳಿಗೆಗಳನ್ನು ಸೇರಿಸಿದರೆ ಅವು 20–30 ವರ್ಷಗಳಾದರೂ ಹಾಳಾಗದೇ ಇರುವವು.

ಕೆಲವು ಪತಂಗಗಳ ಮೈ ಕಪ್ಪು ಬಣ್ಣದ್ದು ಇದ್ದು ಅವುಗಳ ಮೇಲೆ ಬಿಳಿ ಬಣ್ಣದ ಚುಕ್ಕಿಗಳಿರುವವು. ಒಂದು ಗುಂಪಿನ ರೆಕ್ಕೆಗಳು ಮೊನಚಾಗಿದ್ದರೆ ಇನ್ನೊಂದು ಗುಂಪಿನ ರೆಕ್ಕೆಗಳು ಯಾರೋ ಹಿಡಿದು ಎಳೆದಂತೆ ಉದ್ದವಾಗಿರುವವು. ಹೊಂಬಣ್ಣದ ಪಾತರಗಿತ್ತಿಗಳು ತುಂಬ ಆಕರ್ಷಕವಾಗಿರುತ್ತವೆ. ಇನ್ನು ಕೆಲವು ಪತಂಗಗಳ ಮೇಲೆ ಸುಂದರ ನಕ್ಷೆಗಳಿರುವವು. ಕೆಲವೊಮ್ಮೆ ಕಪ್ಪಿನ ಬದಲಾಗಿ ಕೆಲವು ಹಸಿರು ಬಣ್ಣದವೂ ಇರುವುದುಂಟು. ಈ ಬಣ್ಣಗಳ ಮೇಲೆ ವಿವಿಧ ಪತಂಗಗಳನ್ನು ವರ್ಗೀಕರಿಸುತ್ತಾರೆ. ಹಳದಿ ವರ್ಣದ ಮೇಲೆ ಕಿಟಕಿಗಳಂತೆ ಕಂಡಿಯುಳ್ಳ ಪತಂಗಗಳೂ ಆಗೊಮ್ಮೆ ಈಗೊಮ್ಮೆ ಕಣ್ಣಿಗೆ ಬೀಳುವದುಂಟು. ಇಂಥ ಪತಂಗಗಳ ರೆಕ್ಕೆಯ ಮೇಲ್ ಬಣ್ಣಗಳಿಗಿಂತ ರೆಕ್ಕೆಯ ಒಳ ಬಣ್ಣ ಹೆಚ್ಚು ಆಕರ್ಷಕವಾಗಿರುತ್ತದೆ. ಇನ್ನು ಕೆಲವು ಪತಂಗಗಳ ಮೇಲೆ ಕಪ್ಪು ಕಣ್ಣಿಗೆ ಹೋಲುವಂತಹ ಚಿಟ್ಟೆಗಳು ಇದ್ದು ಪತಂಗಗಳ ಕಣ್ಣುಗಳು ತೀರ ಚಿಕ್ಕವಿರುವುದರಿಂದ ಇವನ್ನೇ ದೂರದಿಂದ ಕಣ್ಣುಗಳೆಂದು ಭಾವಿಸಲು ಸಾಧ್ಯವಿದೆ. ನಿಶಾಪತಂಗಗಳು ಕೆಲವು ವಿಮಾನದಂತೆ ತೋರುವುದುಂಟು. ಇಂತಹ ಪತಂಗಗಳು ಆಹಾರ ಸೇವನೆಯ ವೇಳೆಗೆ ವಿಶ್ರಾಂತಿ ಪಡೆಯದೇ ಹಾರುತ್ತಲೇ ಮಧುವನ್ನು ಹೀರುವವು. ಮನೆಯಲ್ಲಿ 'ರಾತ-ರಾನಿ' ('ರಾತ್ರಿ-ರಾಣಿ')ಯಂತಹ ರಾತ್ರೆ ಅರಳುವ ಹೂವಿನ ಗಿಡಗಳಿದ್ದರೆ ಬೆಳದಿಂಗಳ ರಾತ್ರಿಯಲ್ಲಿ ಒಂದೆಡೆ ನಿಂತು ನೋಡಿದರೆ ಆಕಾಶ ಬಾಣಗಳಂತೆ ಈ ಪತಂಗಗಳು ನಾಲ್ಕೂ ನಿಟ್ಟಿನಿಂದ ಹಾರಿ ಬಂದು ಆಹಾರ ಸೇವನೆ ಮಾಡುವುದನ್ನು ತಪ್ಪದೇ ಕಾಣಬಹುದು.

ಪತಂಗಗಳು ಮನೋರಂಜನೆಯ ಕೀಟಗಳಿರುವಂತೆ ಧನಸಂಗ್ರಹಕ್ಕೂ ಸಹಾಯ ಮಾಡುವಂತೆ ಇವೆ. ಅತ್ಯುತ್ತಮ ಚಿಟ್ಟೆಗಳನ್ನು ಸಂಗ್ರಹಿಸುವವ

ರಿಗೆ ಪಾಶ್ಚಾತ್ಯ ಕೀಟ ಸಂಸ್ಥೆಗಳು ಇಂಥ ಸಂಗ್ರಹಕ್ಕಾಗಿಯೇ ಹಣ ಪೂರೈಸಿ, ಹಿಮಾಲಯದ ಪ್ರದೇಶಗಳಲ್ಲೋ, ಅಮೆಝೋನ್ ನದಿಯ ಕೊಳ್ಳಕ್ಕೋ ಕಳಿಸುವದುಂಟು. ಎಷ್ಟೋ ಜನರು ಇದನ್ನು ಜೀವನೋಪಾಯ ವೃತ್ತಿಯೆಂದೇ ಪಾಲಿಸುವರು. ಇವರಷ್ಟೇ ಅಲ್ಲದೇ ವಿನೋದಕ್ಕಾಗಿ ಪತಂಗ ಸಂಗ್ರಹ ಮಾಡಿ ಒಳ್ಳೇ ಬೆಲೆ ಬಂದರೆ ಮಾರಿ ಬಿಡುವವರೂ ಇದ್ದಾರೆ. ಒಂದು ದೇಶದ ಪತಂಗಗಳನ್ನು ಇನ್ನೊಂದು ದೇಶದ ಪತಂಗಗಳೊಡನೆ ವಿನಿಮಯ ಮಾಡಿಕೊಳ್ಳುವವರಿದ್ದಾರೆ. ಕೆಲವು ದೇಶಗಳು ತಮ್ಮ ದೇಶದಲ್ಲಿ ಸಿಗುವ ಎಲ್ಲ ಪ್ರಕಾರದ ಪಾತರಗಿತ್ತಿಗಳ ಚಿತ್ರಗಳಿಂದ ತಮ್ಮ ಅಂಚೆಚೀಟಿಗಳನ್ನು ಅಲಂಕರಿಸುತ್ತಾರೆ. ಇಂಥ ಟಿಕೇಟುಗಳಿಗೆ ಕೀಟ ಪ್ರೇಮಿಗಳಿಂದ ಹೆಚ್ಚಿನ ಬೇಡಿಕೆ ಇರುವದರಿಂದ ಈ ದೇಶಗಳು ಹೆಚ್ಚಿನ ಲಾಭ ಮಾಡಿಕೊಳ್ಳುತ್ತವೆ.

ಇಷ್ಟಾದರೂ ಪಾತರಗಿತ್ತಿಗಳು ಸುಲಭವಾಗಿ ಕೈಗೆ ಸಿಗುವದೆಂದು ಯಾರೂ ಭಾವಿಸಬಾರದು. ಅಂತೆಯೇ ಕೈಗೆ ಸಿಗದ ಚಂಚಲ ಸ್ತ್ರೀಗೆ ಪಾತರಗಿತ್ತಿಯೆಂದು ಕರೆಯುವರು. ಚಿಟ್ಟೆಗಳನ್ನು ಹಿಡಿಯುವವರು ಕಲ್ಲು ಮುಳ್ಳುಗಳನ್ನು ಲೆಕ್ಕಿಸದೇ ಅವುಗಳ ಬೆನ್ನಟ್ಟಿ ಹೋಗಬೇಕಾಗುವದು. ಒಂದು ಕ್ಷಣ ಅದು ಗಿಡದ ಮೇಲೆ ಕೂತರೆ ಅದನ್ನು ಹಿಡಿಯಲೆತ್ನಿಸುವದರೊಳಗೆ ಅದು ಹಾರಿ ಹೋಗುತ್ತದೆ. ಬಹಳಷ್ಟು ಕಷ್ಟಪಟ್ಟು ಕೊನೆಗೊಮ್ಮೆ ಒಂದು ಪತಂಗ ಹಿಡಿದಾಗ ಅದು ತನ್ನ ಬಣ್ಣ, ರೆಕ್ಕೆಗಳನ್ನು ಕಳೆದುಕೊಂಡು ಸೆರೆಯಾಳಾಗುವದು ಉಂಟು. ದೊಡ್ಡ ದೊಡ್ಡ ಪತಂಗಗಳನ್ನು ಹಿಡಿಯುವದು ತುಂಬ ಪ್ರಯಾಸದ ಕೆಲಸ. ಏಕೆಂದರೆ ಅವು ಒಂದೆಡೆ ಕೂಡ್ರುವದೇ ಅತಿ ವಿರಳ. ಹಾರಲು ಪ್ರಾರಂಭಿಸಿದವೆಂದರೆ ಸತತವಾಗಿ ಹಾರುತ್ತಲೇ ಇರುವವು. ಈ ಎಲ್ಲ ಗೋಳು ತಪ್ಪಿಸಿಕೊಳ್ಳಲು ಪತಂಗ ಸಂಗ್ರಹ ಮಾಡುವವರು ಅವುಗಳನ್ನು ಹುಳುವಿದ್ದಾಗಲೇ ಸುಲಭವಾಗಿ ಹಿಡಿದು ಅದು ಪ್ರೌಢಾವಸ್ಥೆಗೆ ಬರುವ ತನಕ ಸಾಕಿ, ನಂತರ ಅದು ತನ್ನ ಸೌಂದರ್ಯ ಕಳೆದುಕೊಳ್ಳುವ ಮೊದಲೇ ಅದನ್ನು ಯಮಲೋಕಕ್ಕೆ ಕಳಿಸಿ ನಂತರ ತಮ್ಮ ಸಂಗ್ರಹದಲ್ಲಿ ಸೇರಿಸುವರು. ಬಾಲಕರು ಪತಂಗ ಹಿಡಿಯಲು ನೂಲಿನ ಬಲೆ

ಯನ್ನು ತಯಾರಿಸಬಹುದು. ನೆಟ್ ಹರಿದ ಬ್ಯಾಡಮಿಂಟನ್ ರ್ಯಾಕೆಟ್ಟಿಗೆ ಅಪ್ಪನ ಧೋತರದ ತುಂಡೊಂದನ್ನು ತ್ರಿಕೋನಾಕಾರದ ಚೀಲ ಮಾಡಿ ಜೋಡಿಸಿದರೆ ಬಲೆಯಾಗುವುದು. ಈ ಬಲೆಯನ್ನು ಪತಂಗ ಹಾರುವ ವಿರುದ್ಧ ದಿಕ್ಕಿನಲ್ಲಿ ವೇಗವಾಗಿ ಬೀಸಿದರೆ ಪತಂಗ ಸಿಕ್ಕಿ ಬೀಳುವದು. ನಂತರ ಅದನ್ನು ಬಾಟ್ಲಿಯೊಂದಿಗೆ ಸ್ಥಳಾಂತರಿಸಿ ಅದನ್ನು ಹಿಡಿದಿಡಬಹುದು.

ಕುಮಾರಿಯರು, ಗೃಹಿಣಿಯರು ಪತಂಗಗಳನ್ನು ಸಂಗ್ರಹಿಸಿ, ಅವುಗಳನ್ನು ಮನೆಯ ಅಲಂಕಾರಕ್ಕಾಗಿ ಉಪಯೋಗಿಸಿದರೆ ರಸಿಕ ವರನಾಗಲೀ, ಪತಿಯಾಗಲೀ ಮನಸೋಲದೇ ಇರುವನೇ? ಸಿಂಪಿನ ಗೊಂಬೆಗಳನ್ನೂ ಆಟಿಕೆಗಳನ್ನೂ ತಯಾರಿಸುವಂತೆಯೇ ಬಣ್ಣಬಣ್ಣದ ಚಿಟ್ಟೆಗಳನ್ನು ಸಂಗ್ರಹಿಸಿ ಜೋಡಿಸಿ ಅಲಂಕಾರ ಸಾಧನಗಳನ್ನು ಮಾಡಬಹುದಾಗಿದೆ.

# ೧. ಕೀಟ ಜಗತ್ತಿನ ಪ್ರಣಯ ರಮ್ಯತೆ !

ಗರ್ಭವತಿ ಮದುಮಗಳನ್ನು ಗೃಹಿಣಿಯಾಗಿ ಸ್ವೀಕರಿಸಲು ಮಾನವ ಜಗತ್ತು ನಿರಾಕರಿಸಿದರೂ ಕೀಟ ಜಗತ್ತಿಗೆ ಇದರ ನಿರ್ಬಂಧವಿಲ್ಲ. ಅಂತೆಯೇ ಇಂತಹ ಸಂಗಾತಿಯನ್ನು ಪಡೆದ ಗಂಡು ಕೀಟ ಮುಂದಿನ ಸಂತತಿಗೆ ತಂದೆಯೆನಿಸಿಕೊಳ್ಳುವವು. ಬಹುಸಂಖ್ಯಾತ ಹೆಣ್ಣುಕೀಟಗಳು ಪ್ರೌಢಾವಸ್ಥೆ ತಾಳಿ ಈ ಭಾವೀ ಸಂತತಿಯನ್ನು ಹೊಟ್ಟೆಯಲ್ಲಿ ಗುಪ್ತವಾಗಿ ಹೊತ್ತುಕೊಂಡೇ ಈ ಭೂಮಿಯ ಮೇಲೆ ಉದಯಿಸುವವು. ಗಂಡುಕೀಟವಾದರೂ ತನ್ನ ಉದರ ನಿರ್ವಹಣೆಯ ಕುರಿತು ಯೋಚಿಸುವ ಮೊದಲೇ ಪ್ರೇಮ ಜೀವನ, ಸಂಗಾತಿ, ಸಂತತಿಗಾಗಿ ಪರಿತಪಿಸಿ, ತನಗಾಗಿ ನಿರ್ಮಿಸಿದ ಪ್ರಿಯತಮೆಯ ಶೋಧದಲ್ಲಿ ತೊಡಗುವದು. ಚಿಟ್ಟೆಗಳು ಸಿಳ್ಳು ಹಾಕಿ ಹೆಣ್ಣನ್ನು ಕರೆದರೆ, ಪತಂಗಗಳು ಹೆಣ್ಣಿನ ಸುಗಂಧಕ್ಕೆ ಮರುಳಾಗುವವು. ಕೀಟಕನ್ಯೆಯರು ಧಾರ್ಮಿಕರಾಗಿ ಪಾಲಿಗೆ ಬಂದದ್ದು ಪಂಚಾಮೃತವೆಂದು ಭಾವಿಸದೇ ಆಧುನಿಕ ವಿಚಾರಸರಣಿಗನುಸಾರವಾಗಿ ವೈಯ್ಯಾರದ ಕೊಡುಗೆಗಳನ್ನು ಅಪೇಕ್ಷಿಸುವವು. ಕೆಲವಕ್ಕೆ ಸ್ಪರ್ಶ ಸುಖ ಹಿತವಾದರೆ ಇನ್ನು ಕೆಲವಕ್ಕೆ ಆಹಾರ ಬೇಕು. ಇನ್ನು ಕೆಲವು ಕೀಟಗಳಿಗಾಗಿ ಶೌರ್ಯ ತೋರಬೇಕಾಗುವದು. ಒಪ್ಪದ ಕನ್ಯೆಯರನ್ನು ಹಿಂಬಾಲಿಸಿ ಹೋಗಿ ತನ್ನವಳನ್ನಾಗಿ ಮಾಡಿಕೊಳ್ಳುವ ಪರಿಪಾಠವಿದೆ. ವಿವಾಹವೆಂದರೆ ಬ್ರಹ್ಮ ಹಾಕಿದ ಗಂಟು ಎಂದು ನಂಬದೇ ತಮ್ಮ ಸುಖಕ್ಕಾಗಿ ಮಾಡಿಕೊಂಡ ವ್ಯವಸ್ಥೆ ಎಂದು

ವಂಬಿದ ಕೀಟಗಳು ವಿವಾಹವಾದ ಕೆಲವೇ ನಿಮಿಷಗಳಲ್ಲಿ ವಿವಾಹ ವಿಚ್ಛೇದನ ಮಾಡಿಕೊಂಡು ದ್ವಿತೀಯ ವಿವಾಹದ ಚಟುವಟಿಕೆಯಲ್ಲಿ ತೊಡಗಿರುವವು. ವಿವಾಹ ವಿಚ್ಛೇದನಕ್ಕೆ ಔಪಚಾರಿಕತೆಯಿಲ್ಲ. ಬಹುಸಂಖ್ಯಾತ ಕೀಟಗಳು ಜೀವನದಲ್ಲಿ ಒಮ್ಮೆಯೇ ಬೇಟೆ ನಡೆಸಿ ಅನೇಕ ಕೀಟಗಳ ತಾಯಿಯಾಗುವ ದುಂಟು. ಅನಂತರ ಉಂಡು ತಿಂದು ಸುಖವಾಗಿರುವುದಲ್ಲದೇ ತಪ್ಪಿ ಕೂಡ ಮತ್ತೆ ಗಂಡು ಕೀಟದತ್ತ ಹಾಯಲಾರದು. ಗಂಡು ಮಾತ್ರ ಬಹು ಪತ್ನಿತ್ವ ಪದ್ಧತಿಯಲ್ಲಿ ವಿಶ್ವಾಸವಿಟ್ಟಿರುತ್ತದೆ.

ಒಂದಿಲ್ಲೊಂದು ಷಟ್‌ಪಾದಿ ಪ್ರತಿಯೊಬ್ಬರ ಮನೆಯಲ್ಲಿ ಇದ್ದೇ ಇರು ವವು. ಇದ್ದ ಎರಡು ಕಣ್ಣುಗಳನ್ನು ಹತ್ತು ಮಾಡಿಕೊಂಡು ನೋಡಿದರೆ ಅದರ ಯಶಸ್ವೀ ಜೀವನದ ರಹಸ್ಯಗಳು ಗೋಚರಿಸುವವು. ಪ್ರೌಢ ಗಂಡು ರಂಭೆಯಂತೆ ಹೊರಟ ಯೌವ್ವನೆಯನ್ನು ನೋಡಿದಾಗ ತನ್ನ ರೆಕ್ಕೆಗಳನ್ನು ಮೇಲೆತ್ತಿ ಹಿಂಭಾಗವನ್ನು ಅವಳ ಮುಖದತ್ತ ತಿರುಗಿ ಸುಗಂಧ ಬೀರ ಲಾರಂಭಿಸುತ್ತದೆ. ಸುವಾಸನೆಗೆ ಆಕರ್ಷಿತವಾಗಿ ಹೆಣ್ಣು ಗಂಡನ್ನು ನೆಕ್ಕಿ ಸಹಕರಿಸುವದು. ಸಹಕರಿಸಿದ ಕನ್ಯೆಯ ಮೀಸೆ, ಪಾದ, ಧಡ, ಪಕ್ಕಗಳನ್ನು ಸ್ಪರ್ಶಿಸಿ ಮನವೊಲಿಸಬೇಕಾಗುವದು. ರಾಸಾಯನಿಕ ದ್ರವಗಳಿಂದ ಗಂಡು-ಹೆಣ್ಣು ಆಕರ್ಷಿತವಾಗುವದೆಂದು ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಕನ್ಯಾಮಣಿ ತನ್ನ ದೇಹದಿಂದ ಎಣ್ಣೆಯಂತಹ ಪದಾರ್ಥವನ್ನು ಹೊರಗೆಡು ವುದು. ಈ ದ್ರವವಿಲ್ಲದಿದ್ದರೆ, ಇಲ್ಲವೇ ತೆಗೆದು ಹಾಕಿದರೆ, ಗಂಡು ಎಂದೂ ಆಕರ್ಷಿತವಾಗುವುದಿಲ್ಲ, ಅಲ್ಲದೇ ಬ್ರಶ್ಶಿನಿಂದ ಈ ದ್ರವ್ಯವನ್ನು ಗಂಡಿಗೆ ಸವರಿದಾಗ ಅದನ್ನು ಹೆಣ್ಣೆಂದೇ ಭ್ರಮಿಸಿ ಶೃಂಗಾರ ಚೇಷ್ಟೆ ಪ್ರಾರಂಭಿಸು ವದು.

ಪ್ರಣಯದ ಪ್ರಥಮ ಅಂಗವಾಗಿ ಜೊಂಡಿಗ ದಂಪತಿಗಳು ನರ್ತಿಸು ವವು. ವೀಣೆಯ ತಂತಿಯಂತೆ ಮಿಡಿಯುವ ಗಂಡು ತನ್ನ ದೇಹವನ್ನು ನೆಲಕ್ಕೆ ಬಡಿದು ನಾದ ಹೊರಡಿಸಿ ಸುಮುಹೂರ್ತೇ ಸಾವಧಾನ! ಎನ್ನುವದು. ಚಿಮಟೆಯಂತಿದ್ದ ಅದರ ಜನನೇಂದ್ರಿಯ ಜಾಗೃತವಾಗುವದು. ಹೆಣ್ಣಿನ ಶಿರದ ವಿರುದ್ಧ ದಿಕ್ಕಿಗೆ ತನ್ನ ಶಿರ ಬರುವಂತೆ ಒಂದೇ ಸರಳ ರೇಖೆಯಲ್ಲಿದ್ದಾಗ

ಇವುಗಳ ಕೂಟವಾಗುವದು. ನಿಧಾನವಾಗಿ ಎಷ್ಟೋ ಹೊತ್ತು ಈ ಭಂಗಿಯಲ್ಲಿ ನಿಶ್ಚಲವಾಗಿರುವವು. ನಂತರ ಸಂತತಿ ನಿರ್ಮಾಣದ ಕಾರ್ಯ. ಹೆಣ್ಣು ಜೊಂಡಿಗ ಒಂದೊಂದೇ ತತ್ತಿಯನ್ನು ಇಡದೇ ಒಂದು ಕವಚವನ್ನೇ ಇಳಿಸುವದು. ಇಂತಹ ಕವಚ ಒಂದರಲ್ಲಿ 8ರಿಂದ 16 ತತ್ತಿಗಳಿರುವವು. ಜೀವಮಾನದಲ್ಲಿ ಇಂತಹ 7–8 ಕವಚಗಳು ಹೊರಬೀಳುವವು. ಜೊಂಡಿಗದ ಶರೀರದಿಂದ ಹೊರ ಬೀಳುವಾಗ ಇವುಗಳ ಬಣ್ಣ ಬಿಳುಪಾಗಿದ್ದರೂ ಪ್ರಾಣವಾಯುವಿನೊಡನೆ ಕೂಡಿದಾಗ ಅದು ಕಪ್ಪು ಬಣ್ಣಕ್ಕೆ ಪರಿವರ್ತನೆ ಹೊಂದುವದು. ಹೆಣ್ಣು ಈ ಕವಚವನ್ನು ಹೊತ್ತು ಸುರಕ್ಷಿತ ಸ್ಥಳದಲ್ಲಿ ಅದನ್ನು ಅಡಗಿಸಿ ಇಡಲು ಓಡಾಡುತ್ತಿರುವದು ಪ್ರತಿ ದಿನದ ದೃಶ್ಯ. ಕೆಲವು ಸಲ 3–4 ದಿನ ಆವು ಹೀಗೆ ಓಡಾಡುವದೂ ಉಂಟು. ಅನಂತರ ಅವುಗಳಿಂದ ಹೊರಬಂದ ಮರಿಗಳು ಒಮ್ಮೆಲೇ ಆಹಾರ ಭಕ್ಷಣೆಗೆ ತೊಡಗುವವು. ಬೆಳಕಿಗೆ ಹೆದರಿ ಕತ್ತಲೆಯಿದ್ದಲ್ಲೇ ಓಡಾಡಲು ಪ್ರಾರಂಭಿಸುವವು.

ಮನೆಯ ಸುತ್ತಲೂ ಹೂದೋಟಗಳಿದ್ದರೆ ಇಲ್ಲವೇ ಗಿಡಗಂಟೆಗಳಿದ್ದರೆ ಜೋಡಿಯಾಗಿರುವ ಹಲವು ಕೀಟಗಳನ್ನು ಕಾಣಬಹುದು. ಹುಲ್ಲು, ಕಬ್ಬು, ಜೋಳಗಳ ಎಲೆಗಳ ಮರೆಯಲ್ಲಿ ದಪ್ಪ ತೊಗಲಿನ ಕೀಟ, ಗಾತ್ರದಲ್ಲಿ ತನಗಿಂತ ದೊಡ್ಡದಾದ ಸ್ತ್ರೀ ಕೀಟದೊಡನೆ ಶೃಂಗಾರದಲ್ಲಿ ತೊಡಗಿರುತ್ತದೆ ಕೆಲವೊಮ್ಮೆ ಸಂಗಾತಿಗಾಗಿ ಕಾದಾಟವಾಗಬಹುದು. ಆಗ ಗಾಬರಿಯಿಂದ ಹೆಣ್ಣು ಕೀಟ ತುಂಬ ಓಡಾಡುವುದು ವಾಡಿಕೆ. ಇವುಗಳಿರುವ ಹೂಗಳಲ್ಲಿ ಬೇರೆಯೇ ದೃಶ್ಯ ಕಾಣಿಸುವದು. ದುರ್ನಾತಕ್ಕೆ ಕಾರಣವಾದ ಸಸ್ಯ ತಗಣೆ ಮಂದಮಾರುತನು ಬೀಸಿದಾಗ ತೂಗುತ್ತ ಹೂಮಂಚದ ಮೇಲೆ ವಿರಾಜಿಸುತ್ತ ಸಂತತಿ ನಿರ್ಮಾಣ ಕಾರ್ಯದಲ್ಲಿ ತೊಡಗಿರುವದು. ಇವು ಆಗಂತುಕರಿಗೆ ಅಳುಕದೇ ತಮ್ಮ ಲೋಕದಲ್ಲೇ ವಿಹರಿಸುವವು. ಹೂಗೊಂಚಲಿನಿಂದ ಅವನ್ನು ಕೆಡವಿದರೂ ಬೇರೆಯಾಗದಷ್ಟು ಆತ್ಮೀಯತೆ ಈ ಕೀಟ ಜೋಡಿಗಳಲ್ಲಿ ಕಾಣುವದು. ಗುಲಾಬಿ, ಜಾಲಿ ಗಿಡಗಳ ಮುಳ್ಳುಗಳ ಅಡಿಯಲ್ಲಿ ಮುಳ್ಳಿನಂತೆ ಕೋಡುಗಳುಳ್ಳ ಮೆಮರಾಸಿಡ್ (Membracedae) ಕೀಟಗಳು ತಮ್ಮ ಪ್ರಿಯೆಯನ್ನು ಮುದ್ದಿಸುವವು. ಪ್ರಿಯತಮೆ

ದೂರ ಸರಿದು ಟೊಂಗೆಯತ್ತ ಹೋದರೆ ಗಂಡು ಅನುಸರಿಸುವುದು. ಒಮ್ಮೆ ಪ್ರಿಯಳು ಸಿಕ್ಕಳೆಂದರೆ ಮತ್ತೆ ಬಿಡಿಸಿಕೊಳ್ಳದಂತೆ ಬಿಗಿದು ಬಿಡುವುದು. ಮುಳ್ಳುಹಂದಿಯಂತೆ ಮೈತುಂಬ ಮುಳ್ಳುಗಳಿದ್ದ ಹಿಸ್ಪಾ ಕೀಟಕ್ಕೆ ಆಲಿಂಗನದ ಸಮಸ್ಯೆ. ಆದ್ದರಿಂದ ಪಾರಿವಾಳದಂತೆ ಇದು ವಿಲಾಸದಲ್ಲಿ ಹೆಚ್ಚು ಸಮಯ ಕಳೆಯದೆ ಕುಕ್ಕುಟದಂತೆ ಅಲ್ಪ ಸಮಯದಲ್ಲೇ ತನ್ನ ಪ್ರೇಮ ವ್ಯವಹಾರವನ್ನು ಎರಡೇ ನಿಮಿಷದಲ್ಲಿ ಮುಗಿಸಿ ಮತ್ತೆ ಉದರ ನಿರ್ವಹಣೆಯಲ್ಲಿ ತೊಡಗುವವು. ಗಿಡಬಳ್ಳಿಗಳಿಂದ ರಸವನ್ನು ಹೀರಿ ಜೀವಿಸುವ ದುರ್ಗಂಧ ಬೀರುವ ಕೀಟಗಳು ಒಂದಾದಾಗ ಯಾವ ಮುಚ್ಚುಮರೆಯಿಲ್ಲದೇ ಬಹಿರಂಗವಾಗಿ ಪ್ರೇಮ ಚೇಷ್ಟೆಯಲ್ಲಿ ತೊಡಗಿರುವವು. ಅವುಗಳ ದುರ್ಗಂಧವೇ ವೈರಿಗಳಿಂದ ಅವಕ್ಕೆ ರಕ್ಷಣೆ ನೀಡುವದರಿಂದ ಅವು ಹೆದರುವುದಿಲ್ಲ. ಕೀಟಗಳಿಗೆ ಹೆಣ್ಣಿನ ಸೌಂದರ್ಯ ಮುಖ್ಯವಲ್ಲ, ಹೆಣ್ಣುತನವಿದ್ದರೆ ಆಯಿತು. ರೇಶಿಮೆ ಪತಂಗ ಈ ಜಾತಿಯದು. ಪಕ್ಕಗಳಿಲ್ಲದೇ ಅಂಗಹೀನವಾದ ಹೆಣ್ಣಿನೊಡನೆ ವಿವಾಹವಾಗಿ ಮರಿಗಳನ್ನು ಪಡೆಯುತ್ತದೆ.

ಜೇಡಿನ ಪ್ರಣಯವೇ ಬೇರೆ ವಿಧ. ಪತಿಯ ಸಹವಾಸದಲ್ಲಿ ಇರುವವರೆಗೆ ಅವನಂತಹ ಪುರುಷನು ಬೇರೊಬ್ಬನಿಲ್ಲ ಎಂಬಂತೆ ವರ್ತಿಸಿ ಒಮ್ಮೆ ಅವನ ಅವಶ್ಯಕತೆ ತನಗಿಲ್ಲ ಎಂದು ಕಂಡುಬಂದಾಗ ಅವನ ಕೊಲೆ ಮಾಡಿ ತನ್ನ ಹಸಿವನ್ನು ನಿವಾರಿಸಿಕೊಳ್ಳುವದು. ಈ ವಿಚಿತ್ರ ವರ್ತನೆಗಾಗಿ ಜೇಡದ ಜಾತಿಗೆ ವಿಧವಾ ಜೇಡವೆಂಬ ಹೆಸರು ಬಂದಿದೆ. ಇವು ವಿಧವೆಯಾಗದ ಹೊರತು ತಾಯಿಯಾಗುವದೇ ಇಲ್ಲ!

ತನ್ನ ಆಹಾರಕ್ಕಾಗಿ, ಗಿಡದ ಮೇಲೆ ದೇವರಿಗೆ ಮೊರೆ ಹೋಗುವಂತೆ ಕೂಡ್ರುವ ಶಿವನ ಕುದುರೆಯ ವರ್ತನೆಯೋ ಬೇರೆ. ತನ್ನ ಪ್ರಿಯನೆಂದು ಒಪ್ಪಿಕೊಂಡ ನಂತರ ಹೆಣ್ಣು ಗಂಡನ ರುಂಡವನ್ನೇ ಮೊದಲಿಗೆ ಭಕ್ಷಿಸುವದು. ನಂತರ ರುಂಡರಹಿತ ಗಂಡಿನೊಡನೆ ಕೂಡುವದು. ಪ್ರಾಣ ಕಳೆದುಕೊಳ್ಳುತ್ತ ಗಂಡು ಪ್ರೇಮದಲ್ಲಿ ತೊಡಗಿರುವ ಇಂತಹ ಉದಾಹರಣೆ ಕೀಟ ಜಗತ್ತಿನಲ್ಲಿ ಅತಿ ವಿರಳ. ಕೂಟ ಮುಗಿದ ಗಂಡು ಹೆಣ್ಣುಗಳು ತಮ್ಮ ಮೀಸೆ, ಮುಖ

ರೆಕ್ಕೆಗಳನ್ನು ಕಾಲುಗಳಿಂದ ಝಾಡಿಸುವದು ತೀರ ಸಾಮಾನ್ಯ. ನಂತರ ರೆಕ್ಕೆಗಳನ್ನು ಪಂಕದಂತೆ ತಿರುವಿಸುತ್ತ ಮೊಟ್ಟೆಗಳನ್ನು ಇಡಲೆಂದೂ, ಆಹಾರ ಸಂಶೋಧನೆಗೆಂದೂ ಹಾರಿ ಹೋಗುವವು.

ತನ್ನನ್ನು ವರಿಸುವ ಗಂಡು ಬಾರದಿದ್ದರೆ ಕೀಟಕನ್ಯೆ ಹೆದರಬೇಕಾಗಿಲ್ಲ. ಗಂಡಿನ ಸಂಪರ್ಕವಿಲ್ಲದೇ ಸಂತತಿ ಪಡೆಯುವ ಸಾಮರ್ಥ್ಯ ಎಷ್ಟೋ ಹೆಣ್ಣು ಕೀಟಗಳಲ್ಲಿದೆ. ಆದರೆ ಇಂಥ ಕೀಟಗಳು ಬರೇ ಹೆಣ್ಣಾಗಲೀ, ಗಂಡಾಗಲೀ ಸಂತತಿಯನ್ನು ಪಡೆಯುವವು. ವರ್ಣದ್ರವದ ಮೇಲೆ ಜೀವಿಸುವ ಎಫಿಡ್ (Aphid) ಗಳು ಇಪ್ಪತ್ತು ತಲೆಮಾರುಗಳವರೆಗೆ ಗಂಡು ಇಲ್ಲದೇ ಸಂತತಿಯ ನಿರ್ಮಾಣ ಮಾಡುವವು. ಆದರೆ ಅದರ ನಂತರಅದು ಅಸಾಧ್ಯ. ಇನ್ನು ಕೆಲವು ಕೀಟಗಳಲ್ಲಿ ಉತ್ಪನ್ನವಾದ ಒಂದೇ ಮೊಟ್ಟೆಯು ವಿಭಾಗವಾಗಿ ನೂರಾರು ಮರಿಗಳು ಹೊರಬೀಳುವದರಿಂದ ಬಲು ಬೇಗ ಅವುಗಳ ಸಂಖ್ಯೆ ಬೆಳೆಯುವದು. ಕೆಲವು ಪರಪುಷ್ಟ (Parasite) ಕೀಟಗಳ ಒಂದೇ ತತ್ತಿಯಿಂದ ಐದಾರು ಮರಿಗಳು ಹೊರಬೀಳುವವು. ಬಹುಸಂಖ್ಯಾತ ಕೀಟಗಳು ಮೊಟ್ಟೆಗಳನ್ನು ಇಟ್ಟರೆ, ಕೆಲವು ಮರಿಗಳಿಗೇ ಜನ್ಮ ನೀಡುವವು. ತತ್ತಿಗಳನ್ನು ತಾಯಿ ತನ್ನ ವಿಶಿಷ್ಟ ಚೀಲದಲ್ಲಿ ಹಿಡಿದಿಟ್ಟಿರುವುದರಿಂದ ಬೆಳವಣಿಗೆ ತಾಯಿಯ ಉದರದಲ್ಲಿಯೇ ಆದರೂ ಬೆಳೆಯುವ ಸಂತಾನದೊಂದಿಗೆ ಯಾವ ಸಂಬಂಧವನ್ನೂ ಅದು ಇಟ್ಟಿರುವದಿಲ್ಲ. ಕೆಲವು ಕೀಟಗಳು ಮೊಟ್ಟೆಗಳನ್ನು ಗುಂಪಾಗಿ ಇಟ್ಟರೆ ಕೆಲವು ಬಿಡಿಬಿಡಿಯಾಗಿ ಇಡುವವು. ಇರುವೆ ಸಿಂಹ (Ant lion) ಕೀಟವು ಹಸಿದಾಗ ತನ್ನ ಮರಿಗಳಲ್ಲೇ ಒಂದನ್ನು ಇನ್ನೊಂದು ತಿಂದು ಹಾಕಬಾರದೆಂದು ರೇಶಿಮೆ ದಾರದ ಮೇಲೆ ತತ್ತಿಗಳನ್ನು ತೂಗು ಹಾಕುವದು. ಕುಂಬಾರ ಹುಳವು ತತ್ತಿಗಳಿಂದ ಹೊರ ಬಂದ ಹಸಿದ ಹುಳುಗಳ ಭೋಜನಕ್ಕೆಂದು ಅರೆಕೊಂದ ಹುಳಗಳನ್ನು ತತ್ತಿಗಳೊಡನೆ ಗೂಡಿನಲ್ಲಿಟ್ಟು ಮಣ್ಣಿನಿಂದ ಬಾಯಿ ಮುಚ್ಚಿಬಿಡುವದು. ಜೊಂಡಿಗ ಮತ್ತು ಶಿವನ ಕುದುರೆಯಂತಹ ಕೀಟಗಳು ತಮ್ಮ ತತ್ತಿಗಳನ್ನು ಗಟ್ಟಿಯಾದ ಕವಚವೊಂದರಲ್ಲಿ ಇಟ್ಟು ಅವುಗಳು ತನ್ನ ವೈರಿಗಳ ಕಣ್ಣಿಗೆ ಕಾಣದಂತೆ ಇಡುವವು. ನೊಣಗಳು ಹುಳುಗಳಿಗೆ ಹೋಲುವ ಮರಿಗಳಿಗೇ

ಜನ್ಮ ನೀಡುವವು. ಸಸ್ಯ ಮತ್ತು ಪ್ರಾಣಿಗಳ ಅಂಗಾಂಗಗಳಲ್ಲಿ ಜೀವಿಸುವ ಕೀಟಗಳು ಅವುಗಳನ್ನು ಬೇಧಿಸಿ ಮೊಟ್ಟೆ ಇಡುವವು.

ಮೊಟ್ಟೆಗಳಿಂದ ಮರಿ ಹೊರಬರುವ ವಿಧಾನಗಳೂ ಬೇರೆ ಬೇರೆಯಾಗಿ ರುವವು. ಕೆಲವು ಹೊರ ಕವಚಗಳನ್ನು ನುಂಗಿ ಬಂದರೆ ಕೆಲವು ವರ್ತುಲಾ ಕಾರವಾಗಿ ಕವಚವನ್ನು ಬೇಧಿಸಿ ಬರುವವು. ಜೊಂಡಿಗದ ಮರಿ ಗಾತ್ರ ವೊಂದು ಬಿಟ್ಟರೆ ಎಲ್ಲ ವಿಧದಲ್ಲೂ ತಾಯಿಯನ್ನು ಹೋಲುವುದು. ಅದೇ ಗುಂಗಾಡಿನ ಮರಿ ಎಲ್ಲ ವಿಧದಲ್ಲೂ ತಾಯಿಗಿಂತ ಭಿನ್ನವಾಗಿರುವದು. ತಾಯಿ ರೆಕ್ಕೆ ಬೀಸುತ್ತ, ಹವೆಯಲ್ಲಿ ಹಾರಾಡುತ್ತ ರಕ್ತ ಹೀರುವ ಷಟ್‌ಪಾದಿ ಯಾದರೆ ಮಗು ನೀರಲ್ಲಿ ಜೀವಿಸುವ, ಸೂಕ್ಷ್ಮ ಆಹಾರ ಸೇವಿಸುವ ಕಾಲುಗ ಳಿಲ್ಲದ ಪ್ರಾಣಿಯಾಗಿರುವದು. ಈ ಮಗು ಹೊಟ್ಟೆ ಬಿರಿಯುವಷ್ಟು ತಿಂದು ವಿಶ್ರಾಂತಿ ಪಡೆದಾಗ ಇದಕ್ಕೆ ತಾಯಿ ತಂದೆಯಂತೆ ಆಗಲು ಬರುವದು. ನೊಣ, ಪಾತರಗಿತ್ತಿಗಳೆಲ್ಲ ಇದೇ ವರ್ಗಕ್ಕೆ ಸೇರಿವ ಕೀಟಗಳಾಗಿವೆ. ಕೀಟಗಳ ಸಂತತಿ ನಿರ್ಮಾಣ ಕಾರ್ಯ ಅಗಾಧವಾದದ್ದು. ತಾಯಿ ಕೀಟ ತನ್ನ 15-20 ದಿನಗಳ ಜೀವಮಾನದಲ್ಲಿ 200ರಿಂದ 1000 ವರೆಗೆ ಮೊಟ್ಟೆಗಳನ್ನು ಇಡು ವದು. ಈ ಎಲ್ಲ ಮೊಟ್ಟೆಗಳಿಂದ ಮರಿ ಬಂದು ಬದುಕುವದಿದ್ದರೆ ಒಂದೇ ವರ್ಷದಲ್ಲಿ ಜಗತ್ತಿನ ಭೂಪ್ರದೇಶವೆಲ್ಲ ಈ ಕೀಟಗಳಿಂದ ತುಂಬಿ ಹೋಗುತ್ತ ದೆಂದು ತಜ್ಞರು ಲೆಕ್ಕ ಹಾಕಿದ್ದಾರೆ. ಆದರೆ ಸುದೈವದಿಂದ ಇಷ್ಟೆಲ್ಲ ತತ್ತಿಗಳ ನ್ನಿಟ್ಟರೂ ಅವುಗಳಲ್ಲಿ ಬದುಕುವುದು ತೀರ ಕಡಿಮೆ. ಬಿಸಿಲು, ಗಾಳಿ, ವೈರಿ ಮೊದಲಾದವುಗಳಿಗೆ ಇವು ಆಹುತಿಯಾಗಿ ಹೆಚ್ಚು ಕಡಿಮೆ ಒಂದೇ ಸಂಖ್ಯೆ ಯಲ್ಲಿ ಈ ಕೀಟಗಳು ಇರುತ್ತವೆ. ಇಲ್ಲದಿದ್ದರೆ ಮಾನವನ ಗತಿ ಏನಾಗು ತ್ತಿತ್ತು ಎಂದು ಊಹಿಸುವುದು ಅಸಾಧ್ಯ.

# 3. ಪೀಡನೆಗೆ ಹೆಸರಾದ ಪ್ರಾಣಿ : ಇರುವೆ

ಇರುವೆಯನ್ನು ನೋಡದವರಿಲ್ಲ. ಆದರೆ ಅದನ್ನು ಸಂಪೂರ್ಣವಾಗಿ ಬಲ್ಲವರು ಬಹಳ ಜನ ಇಲ್ಲವೆಂದರೆ ಚೋದ್ಯವೆನಿಸಲಾರದಷ್ಟೆ! ಇದಕ್ಕೆ ಕಾರಣ ವೆಂದರೆ ಆದರ ವೈವಿಧ್ಯಪೂರ್ಣ ಜೀವನ ಒಂದನ್ನು ಕಂಡರೆ ಇನ್ನೊಂದು ಹರಿದು ನುಂಗುವ ವೈರ. ಪ್ರಾಣಿ ಜಗತ್ತಿನಲ್ಲಿ ಮಾನವನನ್ನು ಹಿಂದೆಹಾಕುವ ಸುಸಂಸ್ಕೃತ, ಸಂಘಟಿತ ಜೀವನವನ್ನು ಈ ಅಲ್ಪ ಜೀವಿ ನಡೆಸುತ್ತದೆ. ನಿಸರ್ಗದಲ್ಲಿ ಸಣ್ಣ, ದೊಡ್ಡ, ತೆಳು, ದಪ್ಪ, ಕಪ್ಪು, ಕೆಂಪು, ಎಲ್ಲ ರೀತಿಯ ಇರುವೆಗಳಿದ್ದರೂ ಅವುಗಳನ್ನು ಉಳಿದ ಸಹ ಪ್ರಾಣಿಗಳಿಂದ ಕೂಡಲೇ ವಿಂಗಡಿಸಬಹುದಾಗಿದೆ. ಉಳಿದ ಷಟ್‌ಪಾದಿಗಳಂತೆ ಶಿರ, ದಡ, ಹಿಂಭಾಗ ಗಳು ಇರುವೆಗಿದ್ದರೂ ಹೆಚ್ಚಿನವುಗಳಿಗೆ ಜೋಡಿ ರೆಕ್ಕೆಗಳಿರುವುದಿಲ್ಲ. ಅಲ್ಲದೇ ದಡದ ಹಿಂಭಾಗವನ್ನು ಇಕ್ಕಟ್ಟಾದ ಗಂಟಾದ ಅವಯುವಗಳಿಂದ ಜೋಡಿಸ ಲ್ಪಟ್ಟಿದ್ದು ಈ ಒಂದು ಅವಯುವದಿಂದ ಇರುವೆಗಳನ್ನು ಉಳಿದೆಲ್ಲ ಪ್ರಾಣಿ ಗಳಿಂದ ಸುಲಭವಾಗಿ ಬೇರ್ಪಡಿಸಲು ಬರುವಂತೆ ಇದೆ. ಶಿರವನ್ನು ಅಲಂಕರಿ ಸಿದ ಆದರ ಸ್ಪರ್ಶ ಮೀಸೆಗಳು ಕಣ್ಣಿಗಿಂತ ಹೆಚ್ಚು ಉಪಯೋಗ ಬೀಳುವದ ರಿಂದ ಇರುವೆಗಳು ನೋಡಿ ತಿಳಿದುಕೊಳ್ಳುವದಕ್ಕಿಂತ ಹೆಚ್ಚು ಸ್ಪರ್ಶಿಸಿ ತಿಳಿದು ಕೊಳ್ಳುವವು. ಕರಗಸದಂತಿರುವ ದವಡೆಗಳು ಪ್ರತಿದಿನ ಕೆಲಸವನ್ನು ಪೂರೈಸುವ ಮುಖ್ಯ ಅವಯುವವಾದರೂ ಕದನ ಕಾಲದಲ್ಲಿ ಗುದದ್ವಾರದತ್ತ ಇರುವ ರಾಸಾಯನಿಕ ಗ್ರಂಥಿಯು ಅತ್ಯಂತ ಉಪಯುಕ್ತವಾಗಿದೆ.

ಮಾನವರಲ್ಲಿ ಬುದ್ಧಿಜೀವಿ, ಶ್ರಮಜೀವಿ, ಸೈನಿಕರು ಮೊದಲಾದವರಿದ್ದರೂ ಅವರಲ್ಲಿ ದೈಹಿಕವಾಗಿ ಹೆಚ್ಚಿನ ವೈವಿಧ್ಯ ಕಂಡು ಬರುವದಿಲ್ಲ. ಆದರೆ ಇರುವೆಗಳಲ್ಲಿ ತಮ್ಮ ಸಮಾಜಕ್ಕೆ ಮಾಡಬೇಕಾದ ಕೆಲಸವನ್ನವಲಂಬಿಸಿ ಅದರ ದೈಹಿಕ ರಚನೆಯಲ್ಲಿಯೂ ಪರಿವರ್ತನೆ ಕಂಡು ಬರುವದು. ಸಾಲಾಗಿ ಹೊರಟ ಇರುವೆಗಳನ್ನು ಸೂಕ್ಷ್ಮವಾಗಿ ನೋಡಿದರೆ ಈ ಅಂತರ ಗೊತ್ತಾಗುವದು. ಈ ಇರುವೆಗಳಲ್ಲಿ ಬಹುಸಂಖ್ಯಾಕ ಕೆಲಸಗಾರರು. ಅವು ಹಗಲು ರಾತ್ರಿಯೆನ್ನದೇ ತಮ್ಮ ಸಮಾಜಕ್ಕಾಗಿ ತನುಮನದಿಂದ ದುಡಿಯುವವು. ಇವುಗಳ ರಕ್ಷಣೆಗಾಗಿ ಅಲ್ಲೊಂದು, ಇಲ್ಲೊಂದು ಸೈನಿಕ ಇರುವೆಗಳು ಕಂಡು ಬರುವವು. ಈ ಸೈನಿಕ ಇರುವೆ ಕೆಲಸಗಾರಗಿಂತ ಮೂರು ನಾಲ್ಕು ಪಟ್ಟು ದೊಡ್ಡದಿರುವದಲ್ಲದೇ ಅದರ ದವಡೆಗಳು ಬಹಳ ಪ್ರಬಲವಾಗಿರುವವು. ಇವುಗಳ ವಸತಿಯಲ್ಲಿ ಅತಿ ದೊಡ್ಡ ತಾಯಿ ಇರುವೆ ಇರುವದು. ಈ ಇರುವೆ ತತ್ತಿಗಳನ್ನಿಡುವದರ ಹೊರತಾಗಿ ಬೇರೆ ಯಾವ ಕೆಲಸವನ್ನೂ ಮಾಡುವದಿಲ್ಲ. ಅದಕ್ಕೆ ಉಣಿಸಲು, ಆರೈಕೆ ಮಾಡಲು ಹತ್ತಾರು ಕೆಲಸದ ಇರುವೆಗಳು ಅದರ ಸುತ್ತಲೂ ತಿರುಗಾಡುತ್ತಲೇ ಇರುವವು. ಇರುವೆಯ ಸಮಾಜದ ಸಹಸ್ರಾರು ಪ್ರತಿನಿಧಿಗಳು ಕೇವಲ ಈ ಇರುವೆಯ ಯೋಗಕ್ಷೇಮಕ್ಕಾಗಿಯೇ ಬದುಕುತ್ತವೆಯೆಂದರೆ ನಂಬಲಸಾಧ್ಯವಾದ ಮಾತಲ್ಲವೇ? ಇವುಗಳದು ಸ್ತ್ರೀ (ಮಲೆಯಾಳ) ಸಾಮ್ರಾಜ್ಯ. ಪುರುಷರಿಗೆ ಅಲ್ಲಿ ಸ್ಥಳವೇ ಇಲ್ಲ. ಮಳೆಗಾಲದ ಪೂರ್ವದಲ್ಲಿ ತಾಯಿ ಇರುವೆ ದಿನಕ್ಕಿಂತ ಬೇರೆಯಾದ ಆಹಾರ ಸೇವಿಸುವದರಿಂದ ಆ ಸಮಯದಲ್ಲಿ ಹೊರಹಾಕಿದ ತತ್ತಿಗಳಿಂದ ಗಂಡಿರುವೆ ಹೊರಗೆ ಬರುವದು. ಈ ಸಮಯದಲ್ಲಿ ಹುಟ್ಟಿದ ಭಾವೀ ರಾಣಿ ಇರುವೆ ಮತ್ತು ಗಂಡಿಗೆ ರೆಕ್ಕೆಗಳಿರುವದರಿಂದ ಅವೆರಡೂ ಜೋಡಿಯಾಗಿ ಹಾರಿ ಹೋಗಿ ಕೂಡುವವು ನಂತರ ಹೆಣ್ಣು ಇರುವೆ ತನ್ನ ರೆಕ್ಕೆಗಳನ್ನು ಕಳೆದುಕೊಂಡು ಹೊಸ ಸಮಾಜ ಕಾರ್ಯದಲ್ಲಿ ತೊಡಗಿದರೆ ಗಂಡಿರುವೆ ತನ್ನ ಜೀವನದ ಏಕಮಾತ್ರ ಕಾರ್ಯ ಮುಗಿಸಿ ಹೇಳ ಹೆಸರಿಲ್ಲದೇ ಮೃತವಾಗುವದು.

ಇರುವೆಗಳು ತಮ್ಮ ಸಮಾಜವನ್ನು ಮರದ ಪೊಟರೆಯಲ್ಲಿ, ಎಲೆಗಳಲ್ಲಿ,

ನೆಲದಲ್ಲಿ, ಒಣ ಕಟ್ಟಿಗೆಯಲ್ಲಿ ಇತ್ಯಾದಿ ಸ್ಥಳಗಳಲ್ಲಿ ಕಟ್ಟುವವು. ಮರದ ಬೊಡ್ಡೆಯಲ್ಲಿ ತಮ್ಮ ದವಡೆಗಳಿಂದ ಕಡಿದು, ಕಡಿದು ಗೃಹಗಳನ್ನು ನಿರ್ಮಿಸಿದರೆ, ಎಲೆಗಳನ್ನು ಒಂದಕ್ಕೊಂದು ಜೋಡಿಸಿ, ರೇಶಿಮೆಯಂತಹ ನಯವಾದ ದ್ರವ್ಯದಿಂದ ಎಲೆಗಳನ್ನು ಹೆಣೆದು ಕೊಠಡಿಗಳನ್ನು ತಯಾರಿಸುವವು. ನೆಲದಲ್ಲಿ ಮತ್ತು ಕಟ್ಟಿಗೆಯಲ್ಲಿ ಇದ್ದ ಸಣ್ಣ ತೂತುಗಳನ್ನು ಪೊಳ್ಳುಮಾಡಿ ಅಲ್ಲಿ ಬೀಡು ಬಿಡುವವು. ಮುಖ್ಯವಾಗಿ ಭದ್ರವಾದ ಕೊಠಡಿಯೊಂದು ರಾಣಿ ಇರುವೆಗೆ ಮೀಸಲಾಗುವದು. ಉಳಿದವುಗಳಲ್ಲಿ ಕೆಲವು ಕಾಳು ಕಡ್ಡಿಗಳ ಸಂಗ್ರಹಕ್ಕಾಗಿ, ಉಳಿದವು 'ದನ ಕರು' (Membracid) ಗಳಿಗಾಗಿ, ಕಾರ್ಮಿಕರಿಗಾಗಿ ಮೀಸಲಾಗುವವು. ಅಕ್ಕಿ, ಗೋಧಿ, ಜೋಳದಂತಿದ್ದ ಧಾನ್ಯಗಳು ತೇವದಿಂದ ಧಕ್ಕೆಗೊಳಗಾಗದಂತೆ ಅವುಗಳ ಉತ್ಪತ್ತಿ ಕೇಂದ್ರುವನ್ನು ಕಡಿದು ಸಂಗ್ರಹಿಸಿದರೆ, ಸಕ್ಕರೆ, ಬೆಲ್ಲ, ಮಧುಗಳಂತಹ ಪದಾರ್ಥಗಳನ್ನು ಸಂಗ್ರಹಿಸಿ ಕೆಲವು ಕೆಲಸಗಾರರ ಹೊಟ್ಟೆಗಳು ಮಡಿಕೆಗಳಂತೆ ಉಬ್ಬಿರುವವು. ಈ ಸಜೀವ ಮಡಿಕೆಗಳು ತಮ್ಮಲ್ಲಿ ಸಂಗ್ರಹವಾದ ಪದಾರ್ಥಗಳನ್ನು ತಾವಾಗಿ ಎಂದೂ ಸೇವಿಸುವದಿಲ್ಲ. ಇಂಥ ತ್ಯಾಗ ಸಾಮಾನ್ಯ ಮಾನವನಲ್ಲಿ ಎಂದಿಗಾದರೂ ಬರಲು ಸಾಧ್ಯವೇ?

ಕೋಡುಗಳುಳ್ಳ ಕೆಲವು ಷಟ್‌ಪಾದಿಗಳು ಮಧುವಿನಂತಹ ಜಿಗುಟಾದ ಸಿಹಿ ಪದಾರ್ಥವನ್ನು ತಮ್ಮ ಮಲಮೂತ್ರದೊಂದಿಗೆ ಬಿಟ್ಟು ಕೊಡುವದರಿಂದ ಇರುವೆಗಳು ಇಂಥ ಷಟ್‌ಪಾದಿಗಳನ್ನು ಸದಾಕಾಲ ಹುಡುಕುತ್ತಿರುವವು. ಇಂಥ ಕೀಟಗಳಿಗೆ (ant cow) 'ಇರುವೆ ದನ'ಗಳೆಂದೂ ಕರೆಯುವರು. ಮರದ ಟೊಂಗೆಗಳ ಮೇಲೆ ವಾಸಿಸುವ ಈ ದನಗಳ ಮಲವಿಸರ್ಜನೆಯ ವೇಳೆಗೆ ಕಾದು ಕುಳಿತು ಹನಿ ಹನಿಯಾಗಿ ಹೊರಗೆಡವಿದ ಸಿಹಿ ದ್ರವ ಪದಾರ್ಥಗಳನ್ನು ಸಂಗ್ರಹಿಸಿ ಇರುವೆಗಳು ತಮ್ಮ ಬೀಡಿಗೆ ಕೊಂಡೊಯ್ಯುವವು. ಮಳೆಗಾಲದಲ್ಲಿ ಇಂಥ ದನಗಳ ಶೋಧ ಕಷ್ಟಮಯವಿದ್ದುದರಿಂದ ಅವುಗಳನ್ನು ತಮ್ಮ ಬೀಡಿಗೇ ಕರೆದೊಯ್ದು ಅವುಗಳಿಗೆ ಬೇಕಾದ ಆಹಾರ ಪೂರೈಸುವದರ ಜೊತೆಗೆ ಅವುಗಳ ಮರಿಗಳ ಪಾಲನೆ ಪೋಷಣೆಗಳನ್ನೂ ಮಾಡುವವು. ಅವುಗಳಿಗೆ ಆಹಾರಕ್ಕೆಂದು ಹೊಲವನ್ನು ಉತ್ತು ಸಣ್ಣ ಸಣ್ಣ ಸಸಿಗಳನ್ನು ಬೆಳೆಸುವವು.

ಡಬ್ಬಿಯಲ್ಲಿ ಇಟ್ಟ ತಿಂಡಿ, ಟೇಬಲ್ಲಿನ ಮೇಲೆ ಇಟ್ಟ ಸಕ್ಕರೆ, ನೆಲುವಿನ ಮೇಲೆ ಇಟ್ಟ ಹಾಲು, ಹೈನ, ನಾಗೊಂದಿಗೆಯ ಮೇಲಿಟ್ಟ ಕಾಳುಕಡಿಗಳು ಯಾರ ಕಣ್ಣಿಗೆ ಬೀಳದಿದ್ದರೂ ಇರುವೆಗಳ ಕಣ್ಣಿಗೆ ಬೀಳದೇ ಇರುವುದಿಲ್ಲ ವೆಂದು ಪ್ರತಿಯೊಬ್ಬರ ಅನುಭವದ ಮಾತಾಗಿದೆ. ಇದನ್ನು ಕಂಡುಹಿಡಿ ಯಲು ಇರುವೆಯ ಹತ್ತಿರ ಯಾವ ಅಂಜನವೂ ಇರುವುದಿಲ್ಲ. ನೂರಾರು ಇರುವೆಗಳು ಹತ್ತಾರು ದಿಕ್ಕಿನಲ್ಲಿ ಆಹಾರ ಶೋಧನೆಗೆಂದು ಹೊರಡುವವು. ದಾರಿಯಲ್ಲಿ ಸಿಗುವ ಎಲ್ಲ ವಸ್ತುಗಳನ್ನೂ ತಮ್ಮ ಸ್ಪರ್ಶ ಮೀಸೆಗಳಿಂದ ಪರೀಕ್ಷಿಸಿ ನೋಡಿ, ತಮ್ಮ ಆಹಾರ ಸಾಮಗ್ರಿಯಲ್ಲದಿದ್ದರೆ ಮುಂದುವರಿಯು ವವು. ಒಂದೊಮ್ಮೆ ಆಹಾರ ಸಿಗುವ ಲಕ್ಷಣ ಕಂಡುಬಂದರೆ ಕೂಡಲೇ ಹಿಂದಕ್ಕೆ ಧಾವಿಸಿ ದಾರಿಯಲ್ಲಿ ಸಿಗುವ ಎಲ್ಲ ಇರುವೆಗಳಿಗೂ ತನ್ನ ಮೀಸೆ ಗಳಿಂದ ಸ್ಪರ್ಶಿಸಿ ತಾನು ಕಂಡು ಹಿಡಿದ ಆಹಾರದ ವಾಸನೆಯನ್ನು ಅವುಗಳಿಗೆ ಅರುಹುವವು. ಇದೇ ವಾಸನೆ ಅರಸುತ್ತ ಹೊರಟ ಇರುವೆಗಳು ಕೆಲವೇ ನಿಮಿಷಗಳಲ್ಲಿ ಒಂದೆಡೆ ನೆರೆಯುವವು.

ತಿಂಡಿಯನ್ನು ದವಡೆಯಿಂದ ಕಡಿದು ಕಚ್ಚಿ ತಮ್ಮ ಬೀಡಿನತ್ತ, ಸಾಗಿ ದಾಗ ಇನ್ನಷ್ಟು ಇರುವೆಗಳಿಗೆ ಈ ಸುದ್ದಿಯನ್ನು ಮುಟ್ಟಿಸುವವು. ನೋಡ ನೋಡುತ್ತಿದ್ದಂತೆ ಸಾವಿರಾರು ಇರುವೆಗಳು ಈ ಸ್ಥಳಕ್ಕೆ ಧಾವಿಸುವವು. ಪ್ರತಿಯೊಂದು ಇರುವೆ ಚಲಿಸುವ ಮಾರ್ಗದಲ್ಲಿ ತನ್ನದೇ ವಾಸನೆಯನ್ನು ಬೀರುವದರಿಂದ ಅವನ್ನು ಹಿಂಬಾಲಿಸುವ ಉಳಿದ ಇರುವೆಗಳೂ ಇದೇ ಮಾರ್ಗವನ್ನು ಅನುಸರಿಸುವವು. ಅದೇ ಮಾರ್ಗವನ್ನು ಅಡ್ಡಗಟ್ಟಿದರೆ ಅಥವಾ ನೀರು ಚೆಲ್ಲಿದರೆ ಇರುವೆಗಳು ತಮ್ಮ ದಾರಿ-ನಿಟ್ಟುಗಳನ್ನು ತಿಳಿಯದೇ ಚಲ್ಲಾಪಿಲ್ಲಿಯಾಗಿ ಓಡುವವು. ಉರಿ ಮತ್ತು ನೀರು ಇವೆರಡನ್ನು ಬಿಟ್ಟರೆ ಉಳಿದ ಯಾವವೂ ಇರುವೆಗಳನ್ನು ತಡೆ ಹಿಡಿಯಲಾರವು.

ಇರುವೆಗಳ ಕಾಟಕ್ಕೆ ಬೇಸತ್ತು ಆಹಾರವನ್ನು ಸಂರಕ್ಷಿಸಲು ಕಪಾಟಿನ ಕಾಲುಗಳನ್ನು ನೀರಿನ ಪಾತ್ರೆಗಳಲ್ಲಿ ನಿಲ್ಲಿಸಲಾಯಿತು ಎಂದು ತಿಳಿಯಿರಿ. ಆಗ ಇರುವೆಗಳು ನಾಲ್ಕೂ ದಿಕ್ಕುಗಳಿಂದ ಆಹಾರಕ್ಕಾಗಿ ರಸ್ತೆಯನ್ನು ಹುಡುಕಲು ಪ್ರಾರಂಭಿಸುವವು. ಟೇಬಲ್ಲಿನ ಬಟ್ಟೆಯ ಮೇಲಿಂದ ಅಥವಾ

ಬೇರಾವದೇ ಚಿಕ್ಕ ತಂತಿಯ ಚೂರು ಇತ್ಯಾದಿಗಳನ್ನು ಸಾಧನಗಳನ್ನಾಗಿ ಉಪಯೋಗಿಸಿ ಕಪಾಟಿನೊಳಕ್ಕೆ ಹೊಕ್ಕು ತಮ್ಮ ಚಟುವಟಿಕೆಯನ್ನು ಮುಂದುವರಿಸುವವು. ಕೆಲವು ಇರುವೆಗಳು ಎಲೆಯನ್ನು, ಕಾಗದ ಚೂರುಗಳನ್ನು ದಾಟಲು ಉಪಯೋಗಿಸಿಕೊಂಡರೆ ಕೆಲವು ಸಾಹಸಿ ಇರುವೆಗಳು ನೀರಿನೊಳಕ್ಕೆ ಧುಮುಕಿ ಬಿಡುವವು. ಇಂಥ ಸಮಯದಲ್ಲಿ ಮೃತರಾದ ಧೀರ ಇರುವೆ ಸೈನಿಕರ ದೇಹಗಳನ್ನೇ ಸಂಕದಂತೆ ಉಪಯೋಗಿಸಿ ಇತರ ಸೈನ್ಯ ಆಹಾರಕ್ಕಾಗಿ ಧಾವಿಸುವುದು. ಸುತ್ತಲೂ ನೀರಿದ್ದು ದಾಟಲು ಅನಾನುಕೂಲವಿದ್ದಲ್ಲಿ ಸ್ಥಳ ದೊರೆತಲ್ಲಿಯೇ ಬೀಡು ಬಿಡುವವು. ಇರುವೆಗಳಿಂದ ತುಂಬಿದ ತಿಂಡಿ ಇತ್ಯಾದಿಗಳನ್ನು ಬಿಸಿಲಿಗೆ ಇಲ್ಲವೇ ಬೆಂಕಿಯ ಶಾಖಕ್ಕೆ ಇಟ್ಟರೆ ಅವು ಈ ಸುಲಿಗೆಗಾರರಿಂದ ಮುಕ್ತರಾಗುವರೆಂಬ ನಿಯಮವಿಲ್ಲ. ಬುಂದೆ ಉಂಡೆಗಳಿಗೆ ಬಂದ ಇರುವೆಗಳನ್ನು ಓಡಿಸಲು ಬಿಸಿಲಿನಲ್ಲಿ ಇಟ್ಟಾಗ ಆ ಉಂಡೆಯೊಳಗೇ ಬೀಡುಬಿಟ್ಟ ಉದಾಹರಣೆಗಳಿವೆ! ಅದರಂತೆ ಅನ್ನಕ್ಕೆ ತಗಲಿದ ಇರುವೆ ಹೋಗಲಿ ಎಂದು ಒಲೆಯ ಮೇಲಿಟ್ಟರೆ ಅನ್ನದ ಮೇಲಿನ ಸ್ತರದಲ್ಲಿ ಇರುವೆ ಹೆಚ್ಚಿದೆ ಎಂದು ತಿಳಿಯದೇ ಊಟ ಮಾಡಹೋಗಿ ತುಟಿಯನ್ನು ಉಬ್ಬಿಸಿಕೊಂಡವರಿದ್ದಾರೆ. ಇರುವೆಗಳು ತುಂಬಾ ಹೆಚ್ಚಾಗಿರುವ ಮನೆಗಳಲ್ಲಿ ಕ್ರಿಮಿನಾಶಕ ದ್ರವ್ಯಗಳನ್ನು ಉಪಯೋಗಿಸುವರು. ಆದರೆ ಚಿಕ್ಕ ಮಕ್ಕಳು ಇರುವಲ್ಲಿ ಮತ್ತು ಆಹಾರ ಪದಾರ್ಥ ಇರುವಲ್ಲಿ ಇವುಗಳನ್ನು ಬಳಸುವದು ಅಪಾಯಕಾರಿಯಾದದ್ದು.

ಇರುವೆ ಗುಂಪುಗಳಲ್ಲಿ ಆಗಾಗ ಕದನ ಆಗುವದುಂಟು. ದೊಡ್ಡ ಇರುವೆಗಳು ಸಣ್ಣ ಇರುವೆಗಳನ್ನು ದಾಸರನ್ನಾಗಿ ಮಾಡಿಕೊಳ್ಳಲು ಇಂಥ ಕದನಗಳನ್ನು ಹೂಡುವವು. ಇಂಥ ಸಮಯದಲ್ಲಿ ಎರಡೂ ಪಂಗಡಗಳಲ್ಲಿಯೂ ಘನಘೋರ ಯುದ್ಧ ನಡೆಯುವದು. ನೂರಾರು ಇರುವೆಗಳು ಸಾಯುವವು. ಸಾವಿರಾರು ಕೈಕಾಲುಗಳನ್ನು ಕಳೆದುಕೊಳ್ಳುವವು. ಆದರೆ ಒಮ್ಮೆ ಸೋತ ನಂತರ ಇರುವೆಗಳು ಯಾವ ಪ್ರತಿಭಟನೆಯೂ ಇಲ್ಲದೇ ತಮ್ಮ ವಿಜಯಶಾಲಿಗಳ ಸೇವೆಯಲ್ಲಿ ತೊಡಗುವವು. ಒಮ್ಮೊಮ್ಮೆ ಒಂದೇ ಬಳಗದ ಇರುವೆಗಳೂ ದ್ವಂದ್ವ ಯುದ್ಧದಲ್ಲಿ ತೊಡಗುವದುಂಟು. ಇಂಥ

ಯುದ್ಧಗಳು ಪ್ರೇಯಸಿಗಾಗಿಯೂ, ಆಹಾರ ಸಂಗ್ರಹಕ್ಕಾಗಿಯೂ ನಡೆಯು ವವು. ಒಂದು ಇನ್ನೊಂದರ ಮೀಸೆಯನ್ನು ಕಡಿಯಲು ಪ್ರಯತ್ನಿಸುವವು. ಮೀಸೆಯ ಬದಲಾಗಿ ಕಾಲು ಸಿಕ್ಕರೂ ಕಡಿದು ಬಿಡುವದು. ಕೈಕಾಲು ಕಳೆದುಕೊಂಡ ಇರುವೆ ತನ್ನ ಸೋಲನ್ನು ಒಪ್ಪಿಕೊಂಡು ಕಾಳಗದಿಂದ ಕಾಲು ಕೀಳುವದು.

ರಾಜಸ್ಥಾನದಲ್ಲಿ ಧಾರ್ಮಿಕ ಜೈನರು ಇರುವೆಗಳಿಗೆ ಸಕ್ಕರೆಯನ್ನು ತಿನ್ನಿಸುವರು. ಅಲ್ಲಿಯ ವಿಷಮ ಹವೆಗೆ (ಚಳಿಗಾಲದಲ್ಲಿ ಅತಿ ಶೀತ-ಬೇಸಿಗೆ ಯಲ್ಲಿ ಅತಿ ಉಷ್ಣ) ಇರುವೆಗಳು ಬೆಳೆಯುವದಿಲ್ಲ. ಆದೇ ಬಂಗಾಲದಲ್ಲಿ ಹಸಿದ ಜನತೆಯಂತೆಯೇ ಇರುವೆಗಳೂ ಹಸಿದಿದ್ದರೂ ಅವುಗಳ ಸಂಖ್ಯೆ ಬೆಳೆಯುತ್ತಲೇ ಇದೆ. ಇರುವೆಗಳಿಲ್ಲದ ಒಂದಂಗುಲ ಸ್ಥಳ ಅಲ್ಲಿ ಸಿಗುವದು ಕಷ್ಟ. ಅಲ್ಲಿಯ ಇರುವೆಗಳು ಕಬ್ಬು, ಬೇಳೆ, ಮೀನು, ಮಾಂಸ, ಎಲ್ಲವನ್ನೂ ತಿಂದು ಜೀರ್ಣಿಸಿಕೊಳ್ಳುವವು. ನೀರು ಹಾಕಲು ಮರೆತು ಮೀನನ್ನು ಇಟ್ಟ ಪಾತ್ರೆಯಲ್ಲಿ ಒಂದರ್ಧ ತಾಸಿನಲ್ಲಿಯೇ ಕೇವಲ ಮುಳ್ಳುಗಳು (ಎಲುವುಗಳು) ಉಳಿದ ಉದಾಹರಣೆಯಿದೆ, ಅದರಂತೆ ಅಗಸನಿಂದ ಬಂದ ಬಟ್ಟೆಗಳು, ಟವೆಲ್, ಕೊಡೆ, ಹಾಸಿಗೆ ಇವುಗಳನ್ನೆಲ್ಲ ಆಗಾಗ್ಗೆ ಜಾಡಿಸದಿದ್ದರೆ ಇರುವೆಯ ದಾಳಿಗೆ ತುತ್ತಾಗುವದೇ ಸೈ. ತಲೆಗೆ ಎಣ್ಣೆ ಹಾಕಿ ಮಲಗಿಸಿದ ಮಗುವಿನ ತಲೆಯ ಚರ್ಮವನ್ನು ಕಿತ್ತು, ತಿನ್ನಲೆತ್ನಿಸಿದ ಘಟನೆಯೊಂದು ನಡೆಯಿತು. ಹಿರಿಯರು ಇರುವೆಯಂತೆ ದುಡಿಯಲು ಉಪದೇಶಿಸಿದರೂ ಇರುವೆಯಂತಹ ಉಪದ್ರವ ಪ್ರಾಣಿಯಾಗಿ ಮಾತ್ರ ಬಾಳಬಾರದು.

# 4. ರೇಶಿಮೆ ಪತಂಗ

ರೇಶಿಮೆ, ಧಾರ್ಮಿಕರಲ್ಲಿ ಮತ್ತು ಆಧುನಿಕರಲ್ಲಿ ಸಮವಾಗಿ ಮೆಚ್ಚುಗೆ ಪಡೆದಿದೆ. ರೇಶಿಮೆಯು ಬಳಕೆದಾರರಿಗೆ ಅದರ ಹೊಳಪು, ಬೆಡಗು, ತಾಳಿಕೆ ಹೆಚ್ಚಾಗಿ ತಿಳಿದಿದೆಯೇ ವಿನಾ ಅದರ ಉತ್ಪತ್ತಿಯಲ್ಲ. ಧಾರ್ಮಿಕಕಾರ್ಯಗಳಲ್ಲಿ ರೇಶಿಮೆಯ ಬಟ್ಟೆ ಧರಿಸುವ ಪುರೋಹಿತರು ತಾವು ಕೀಟವೊಂದರ ಎಂಜಲಿನಿಂದ ತಯಾರಾದ ಅರಿವೆಯನ್ನು ಧರಿಸುತ್ತೇವೆಂದರೆ ತಾವು ಮಾಡಿದ 'ಪಾಪ'ಕ್ಕಾಗಿ ಪ್ರಾಯಶ್ಚಿತ್ತ ಮಾಡಿಕೊಳ್ಳುವರೊ ಏನೋ! ಆದರೆ ರೇಶಿಮೆ ಪತಂಗ ತಮಗಾಗಿ ಮಾಡುವ ತ್ಯಾಗದ ಪರಿಚಯ ಬಳಕೆಗಾರರಿಗೆ ಅರಿವಾದರೆ ಅವರು ಕೊಡುವ ಅತ್ಯಲ್ಪ ಬೆಲೆಯ ಅರಿವಾಗದೇ ಇರದು.

ಭಾರತದಲ್ಲಿ ನಾಲ್ಕು ತರದ ಪತಂಗಗಳನ್ನು ರೇಶಿಮೆಗಾಗಿ ಸಾಕುವರು. ಪ್ರತಿಯೊಂದರ ರೇಶಿಮೆ ತೀರ ಭಿನ್ನವಾಗಿರುತ್ತದೆ. ಔಡಳ ರೇಶಿಮೆ ಪತಂಗ ಪ್ರಸೂತಿ ಬೇನೆ ತಡೆಯಲಾರದೆ ರೆಕ್ಕೆಗಳನ್ನು ಬಡಿದುಕೊಳ್ಳುತ್ತ ಒಂದೊಂದಾಗಿ ೨೦೦-೩೦೦ರ ವರೆಗೆ ತತ್ತಿಗಳನ್ನಿಡುವದು. ಇಷ್ಟೊಂದು ಸಂತತಿ ಪಡೆದರೂ ಈ ಪತಂಗಕ್ಕೆ 'ನಿರೋಧ' ಉಪಾಯಗಳು ಬೇಕೆಂದಿಲ್ಲ. ಯಾಕೆಂದರೆ ಪತಂಗಕ್ಕೆ ಒಂದೇ ಒಂದು ಪ್ರಸೂತಿ ಇರುತ್ತದೆ. ಅಲ್ಲದೆ ಇಟ್ಟ ಮೊಟ್ಟೆಗಳಲ್ಲಿ

ಶೇಕಡ ೫೦-೬೦ರಷ್ಟು ವೈರಿಗಳಿಂದ, ರೋಗಗಳಿಂದ, ಮಳೆ-ಬಿಸಿಲುಗಳಿಂದ ನಾಶವಾಗಿ ಹೋಗುತ್ತವೆ. ೨-೩ ದಿನಗಳಲ್ಲಿ ತತ್ತಿಗಳಿಂದ ಮರಿಹುಳ ಹೊರಗೆ ಧಾವಿಸಿ ಆಹಾರಕ್ಕಾಗಿ ಬಡಿದುಕೊಳ್ಳುತ್ತದೆ. ಕೀಟದಂತಹ ಈ ಮರಿಗಳಿಂದ ಸುಂದರ ಪತಂಗ ಮತ್ತು ರೇಶಿಮೆ ತಯಾರಾಗುತ್ತದೆಂದರೆ ನಂಬುವುದು ಕಷ್ಟ. ಈ ಮರಿಗಳು ಮಾಡುವ ಕೆಲಸ ಒಂದೇ ಒಂದು. ಔಡಲ ಎಲೆಗಳನ್ನು ಹಸಿದ ಹುಲಿಯಂತೆ ಒಂದೇ ಸಮನೆ ತಿಂದು ಜೀರ್ಣಿಸಲಾಗದ ಭಾಗವನ್ನು ಗುದದ್ವಾರದಿಂದ ಹೊರಹಾಕುವುದು. ಇವು ಬೆಳೆಯುತ್ತಿದ್ದಂತೆ ಹಾವಿನಂತೆ ತಮ್ಮ ಹೊರ ಚರ್ಮವನ್ನು ತ್ಯಜಿಸಿ ಹೊಸ ಚರ್ಮವನ್ನು ನಿರ್ಮಿಸಿಕೊಳ್ಳುವವು. ಬೆಳೆದು ನಿಂತ ಕೀಟವನ್ನು ನೋಡಿದವರಿಗೆ ವೈ ನವಿರೇಳದೆ ಇರದು. ಜೀರ್ಣಿಸಲು ಸಾಧ್ಯವಾದಷ್ಟು ಪರ್ಣಭೋಜನ ಮುಗಿಸಿ ಈ ಕೀಟ ಶಾಂತವಾದ ಮೂಲೆಯೊಂದಕ್ಕೆ ಧಾವಿಸಿ ರೇಶಿಮೆ ಉತ್ಪಾದನಾ ಕಾರ್ಯಕ್ಕೆ ಪ್ರಾರಂಭಿಸುವದು. ನಮಗೆ ಲಡ್ಡು ನೋಡಿದಾಗ ಬಾಯಿ ನೀರೂರಿಸುವ ಗ್ರಂಥಿಗಳಂತೆ ಇವುಗಳ ಗ್ರಂಥಿಗಳಿಂದ ರೇಶಿಮೆ ತಯಾರಾಗುವದು. ಎಳೆ ಎಳೆಯಾಗಿ ಹೊರಡುವ ರೇಶಿಮೆ ನೂಲನ್ನು ಶಿರದ ಚಲನ ವಲನಗಳಿಂದ ತನ್ನ ಶರೀರದ ಸುತ್ತಲೂ ಹರಡಿ ಕೊಳ್ಳುವದು. ೨-೩ ದಿನ ಸತತವಾಗಿ ಹೀಗೆ ನೂತ ನಂತರ ಗುಲಾಬ ಜಾಮೂನ ಆಕಾರದ ರೇಶಿಮೆಯ ಚಂಡೊಂದು ನಿರ್ಮಾಣವಾಗುವದು. ಇದರೊಳಗೆ ಹುಳ ತನ್ನ ಅಸಹ್ಯಕಾಣುವ ಮೈದೊಗಲನ್ನು ತ್ಯಜಿಸಿ ವಿಶ್ರಾಂತಿ ಪಡೆಯುವದು. ಈ ಕಾಲದಲ್ಲಿ ರಾಸಾಯನಿಕ ಚಟುವಟಿಕೆಗಳು ಪ್ರಾರಂಭವಾಗಿ ಪತಂಗಗಳ ಅಂಗಾಂಗಗಳ ನಿರ್ಮಾಣವಾಗುವದು. ಹೊರಬರುತ್ತಿರುವ ಪತಂಗದ ಶಿರ, ಮೀಸೆ, ಕಾಲುಗಳಿಂದ ವಿಶ್ರಾಂತಿ ಅವಸ್ಥೆಯ ತೊಗಲನ್ನು ಒಡೆದು ಹೊರಬರಲು ಪ್ರಾರಂಭಿಸುವದು. ಹೊರಬರುವ ಪತಂಗದ ರೆಕ್ಕೆಗಳು ತೀರ ಚಿಕ್ಕವಿದ್ದರೂ ಅದು ಹೊರಗೆ ಬಂದನಂತರ ತಮ್ಮ ಮಡಿಕೆಗಳನ್ನು ಬಿಚ್ಚಿ ದೊಡ್ಡವಾಗುವವು. ಹೊರಬರುವ ಪತಂಗ ರೇಶಿಮೆ ಚೆಂಡನ್ನು ವರ್ತುಲಾಕಾರದಲ್ಲಿ ಕತ್ತರಿಸಿ ಹೊರಬರುವದರಿಂದ ಒಂದೇ ಒಂದು ಎಳೆಯಾಗಿದ್ದ ರೇಶಿಮೆ ಸಾವಿರ ತುಂಡುಗಳಾಗುವವು. ಇಂತಹ ರೇಶಿಮೆ ಬೆಲೆಬಾಳುವ ಬಟ್ಟೆಯ ನಿರ್ಮಾಣಕ್ಕೆ ಅಯೋಗ್ಯವಾದ್ದ

ರಿಂದ ಪತಂಗ ಹೊರಗೆ ಬರುವ ಮೊದಲೇ ರೇಶಿಮೆ ಚೆಂಡುಗಳನ್ನು ಬಿಸಿ ನೀರಿನಲ್ಲಿ ಹಾಕಿ, ಹುಳವನ್ನು ಕೊಂದು ರೇಶಿಮೆಯ ಎಳೆಗಳನ್ನು ರಾಟೆಯ ಸಹಾಯದಿಂದ ಸುತ್ತುವರು. ಪತಂಗ ಹೊರಗೆ ಬಂದ ರೇಶಿಮೆಯನ್ನು ಹತ್ತಿಯಂತೆ ನೂತು ಬಟ್ಟೆ ತಯಾರಿಸುವರು. ಈ ಅರಿವೆ ಪೇಟೆಗಳಲ್ಲಿ 'ಸ್ಪನ್ ಸಿಲ್ಕ್' ಎಂದು ಮಾರಾಟವಾಗುವದು. ರೇಶಿಮೆ ಪತಂಗಗಳನ್ನು ಸಾಕುವವರು ಮುಂದಿನ ಸಂತತಿಯ ಉತ್ಪಾದನೆಗಾಗಿ ಕೆಲವು ಪತಂಗಗಳಿಗೆ ಹೊರಗೆ ಬರಲು ಬಿಡುವರು. ಹೊಸದಾಗಿ ಬೆಳಕು ಕಂಡ ಪತಂಗಗಳು ಕೆಲ ಸಮಯದವರೆಗೆ ವಿಶ್ರಾಂತಿ, ಮಲಮೂತ್ರಗಳ ಕಾರ್ಯಗಳನ್ನು ಪೂರೈಸಿ ಕೊಳ್ಳುವವು. ಅವುಗಳ ನಿದ್ರಾವಸ್ಥೆಯಲ್ಲಿ ಮಲಮೂತ್ರ ಸಂಗ್ರಹವಾಗು ವದರಿಂದ ಹೊರಗೆ ಬಂದೊಡನೆ ಕೆನೆಹಾಲನ್ನು ಹೋಲುವ ಮಲವನ್ನು ವಿಸರ್ಜಿಸುವವು. ಈ ಚಿಟ್ಟೆಗಳನ್ನು ಮುಟ್ಟಹೋದವರು ಅದು ಕಾರಂಜಿ ಯಂತೆ ಬಿಡುವ ಈ ದ್ರವದಿಂದ ಬೆರಳುಗಳನ್ನು ಕೆಡಿಸಿಕೊಳ್ಳುವದುಂಟು. ಹೆಣ್ಣು ಪತಂಗದ ಶರೀರದ ತುಂಬ ತತ್ತಿಗಳು ಇರುವದರಿಂದ ಅದು ಗಂಡಿ ಗಿಂತ ದೊಡ್ಡದಾಗಿಯೂ ದಪ್ಪವಾಗಿಯೂ ಕಾಣುವುದು. ಗಂಡು ಪತಂಗ ಹೆಣ್ಣಿನ ಸುವಾಸನೆಯನ್ನು ಪಡೆಯುತ್ತ ಅದರತ್ತ ಧಾವಿಸುವದು. ಅನೇಕ ಸಲ ಗಂಡು ಒಪ್ಪದ ಹೆಣ್ಣಿಗೆ ಏನೇನೋ ಕೊಡುತ್ತೇನೆ ಏನೇನೋ ತೋರಿಸು ತ್ತೇನೆ ಎಂದು ಪುಸಲಾಯಿಸಿ ಅದರೊಂದಿಗೆ ಕಾಮಕ್ರೀಡೆಯಲ್ಲಿ ಜಗತ್ತನ್ನು ಮರೆಯುತ್ತದೆ. ಈ ಸಮಯದಲ್ಲಿ ಹೆಣ್ಣಿಗೆ ಸರ್ವಸುಖ ಸಿಕ್ಕರೂ ನಂತರ ಅನುಭವಿಸುವ ಪ್ರಸೂತಿ ಪ್ರಯಾಸದಿಂದ ಅದು ಇನ್ನೆಂದಿಗೂ ಗಂಡಿನ ಸಹವಾಸ ಮಾಡುವದಿಲ್ಲ. ಮಾನವ ಹೆಂಗಳೆಯರೂ ಈ ಬುದ್ಧಿವಂತ ಹೆಣ್ಣನ್ನು ಅನುಕರಿಸಿದರೆ......?

# 5. ಹೋಗದ ಅತಿಥಿ : ತಗಣಿ

ಉತ್ತರ ಪ್ರದೇಶದವರು 'ಖಟಿಮಲ್' ಎನ್ನಲಿ, ಮಹಾರಾಷ್ಟ್ರದವರು 'ಢೇಕುಣ' ಅನ್ನಲಿ, ಧಾರವಾಡದವರು 'ತಗಣಿ' ಎಂದು ಕರೆಯಲಿ, ಕೊಂಕಣಿಗರು 'ಬಿಕ್ಕುಂಡ' ಎಂದು ಸಂಬೋಧಿಸಲಿ, ಇವೆಲ್ಲ ನಾಮಾವಳಿ ಭೂಲೋಕದ ಶನಿ ದೇವರಂತೆ ಇದ್ದ ತಗಣಿ ದೇವರ ಅಂಕಿತಗಳು. ಬೇಧ ವಿಷ್ಟೆ, ಶನಿದೇವ ತನ್ನ ಪ್ರಭಾವಕ್ಕೊಳಗಾದ ಕೆಲವರನ್ನಷ್ಟೇ ಕಾಡಿಸಿದರೆ ಈ ದೇವರು ಬಡವರು, ಸಿರಿವಂತರು, ಗಂಡಸರು, ಹೆಂಗಸರು, ಹಸುಳೆಗಳು, ಮುದುಕರು ಎಂಬ ಬೇಧ ಮಾಡದೇ ಎಲ್ಲರನ್ನೂ ಪೀಡಿಸುತ್ತವೆ. ಅನಾದಿ ಕಾಲದಿಂದ ಸಮತಾವಾದವನ್ನು ಪಾಲಿಸಿಕೊಂಡು ಬಂದ ಕೀಟವಿದು. ಶಯನಸುಖಿ ಪಾಶ್ಚಾತ್ಯರು ಇದನ್ನು 'ಹಾಸಿಗೆ ಕೀಟ' (Bed bug) ಎಂದು ಕರೆದರೂ ಈ ಕೀಟ ಸಾಕಷ್ಟು ವಿಶಾಲವಾದ ಕ್ಷೇತ್ರವನ್ನು ವ್ಯಾಪಿಸಿದೆ. ಯಾಕೋ ಏನೋ ಯಾವ ದೇಶದವರೂ 'ಪೀಡಾ ದೇವರು' ಎಂದು ಇದನ್ನು ಕರೆದಿಲ್ಲ.

ಒಮ್ಮೆ ಪುಣೆಯ ರೈಲು ತಡವಾಗಿ ಹುಬ್ಬಳ್ಳಿಯನ್ನು ಸೇರಿಕೊಂಡಿದ್ದ ರಿಂದ ಅಲ್ಲಿಯ ಹೋಟೆಲೊಂದರಲ್ಲಿ ರಾತ್ರಿಯನ್ನು ಕಳೆಯುವ ಪ್ರಸಂಗ ಬಂದಿತು. ದಣಿದ ಕಣ್ಣು ಇನ್ನೇನು ನಿದ್ರೆ ಹತ್ತುವುದರಲ್ಲಿದ್ದಾಗ ಯಾರೋ ಹೊಡೆದು ಎಬ್ಬಿಸಿದಂತೆ ಎಚ್ಚರವಾಗಿ ದೀಪ ಹಚ್ಚಿದಾಗ ಎಲ್ಲ ದಿಕ್ಕು

ಗಳಿಂದಲೂ ಹಲ್ಲೆಯಿಟ್ಟಿದ್ದವು ತಗಣೆಗಳು. ನನಗೋ, ದೀಪಕ್ಕೋ ಹೆದರಿ ಸಿಕ್ಕಲ್ಲಿ ಅವಿತುಕೊಂಡವು. ಬಿಲದಿಂದ ಇಲಿಗಳನ್ನು ಹೊರಗೆಳೆದು ಕೊಲ್ಲುವಂತೆ ಒಂದೊಂದಾಗಿ ತಗಣೆಗಳನ್ನು ಹುಡುಕಿ ಕೊಂದೆ. ಅರ್ಧ ತಾಸಿನಲ್ಲಿ 125 ತಗಣೆಗಳನ್ನು ಕೊಂದರೂ ಇನ್ನೂ ಸಿಗುತ್ತಲೇ ಇದ್ದವು. ನಂತರ ಕೊಲ್ಲುವ ಬದಲಾಗಿ ಹತ್ತಿರವಿದ್ದ ಸಣ್ಣ ಬಾಟ್ಲಿಯೊಂದನ್ನು ಹೊರ ಗೆಳೆದು ಅದರಲ್ಲಿ ಅವುಗಳನ್ನು ಶೇಖರಿಸಿ ಊರಿಗೆ ತಲುಪಿದಾಗ ತಮ್ಮನಿಗೆ ಬಹುಮಾನವಾಗಿ ಕೊಟ್ಟೆ. ಪ್ರಾಯೋಗಿಕವಾಗಿ ನಿರೀಕ್ಷಿಸಿದಾಗ ಏನೂ ಆಹಾರವಿಲ್ಲದೇ 5-6 ತಿಂಗಳು ಅವು ಬದುಕಿದ್ದವಂತೆ. ಚಲನಚಿತ್ರಗ್ರಹ ಗಳಲ್ಲಿ, ರೇಲ್ವೆಗಳಲ್ಲಿ, ಅಂಗಡಿ, ಮನೆ, ಸಾರ್ವಜನಿಕ ಕಟ್ಟಡಗಳಲ್ಲಿ ಪ್ರತಿ ದಿನ ಸಾವಿರಾರು ಜನ ತಗಣೆಗಳ ದಾಳಿಗೆ ಬಲಿಯಾಗಿ ಬೇರೆ ಮಾರ್ಗವಿಲ್ಲದೇ ರಕ್ತ ಪಾನ ಆಗಗೊಡುವರು. ಬಲಾಢ್ಯನೂ, ಬುದ್ಧಿಶಾಲಿಯೂ ಆದ ಮಾನವ ನನ್ನು ಸೋಲಿಸುವ ಯಾವ ಗುಪ್ತ ಶಕ್ತಿ ಈ ಪುಟ್ಟ ಕೀಟದಲ್ಲಿದೆ ಎಂಬುದು ಸ್ವಲ್ಪ ಕಣ್ಣು ಬಿಟ್ಟು ನೋಡಿ, ವಿಚಾರಿಸಿದಾಗ ತಿಳಿಯದೆ ಇರದು.

ಬಡವರ ಮನೆಗಳು, ಕೊಳಚೆಯ ಸ್ಥಾನಗಳಷ್ಟೇ ತಗಣೆಗಳ ವಾಸ ಸ್ಥಾನವೆಂದು ತಿಳಿಯಬೇಕಾಗಿಲ್ಲ. ಬಟ್ಟೆಬರೆಗಳೊಂದಿಗೆ ಪೇಟೆಯಿಂದ ತಂದ ಸಾಮಾನುಗಳೊಂದಿಗೆ ಪರ ಊರಿನಿಂದ ಬಂದ ಹಾಸಿಗೆ, ಪೆಟ್ಟಿಗೆಗಳೊಡನೆ ಎಂತಹ ಸುಂದರ ಮನೆಯನ್ನೂ ಅದು ತನ್ನದನ್ನಾಗಿ ಮಾಡಿಕೊಳ್ಳುತ್ತದೆ. ಅಲ್ಲದೇ ಒಂದು ಮನೆಯಿಂದ ಇನ್ನೊಂದಕ್ಕೆ ಪ್ರಯಾಣ ಮಾಡುವ ಚಟವೂ ಅದಕ್ಕಿದೆ. ಒಂದು ಮನೆಯವರು ಮನೆ ಬಿಟ್ಟು ಹೋದರೆ, ಗೋಡೆಗಳ ಮೇಲೆ ಏರಿ, ಬೇರೆ ಮನೆಯಲ್ಲಿ ಪ್ರವೇಶ ಸಂಪಾದಿಸುವುದು. ಇಂತಹ ಮನೆಗಳಲ್ಲಿ ಒಂದೆರಡು ತಗಣೆಗಳು ಕಂಡಾಗಲೇ ಅದರ ನಿಯಂತ್ರಣೋ ಪಾಯ ಕೈಕೊಳ್ಳದಿದ್ದರೆ ಅಲ್ಪ ವೇಳೆಯಲ್ಲಿ ತನ್ನ ಜಾತಿಯದೊಂದು ದೊಡ್ಡ ಸೈನ್ಯವನ್ನೇ ನಿರ್ಮಿಸಿ ಆ ಗೃಹದ ಮೇಲೆ ತನ್ನ ವಿಜಯ ಪತಾಕೆಯನ್ನು ಹಾರಿಸುವುದು.

ಈ ಷಟ್‌ಪಾದಿ ಕೀಟ ತೀರ ಹಿಂದಿನ ಕಾಲದಿಂದ ಭೂಖಂಡದ ಮೇಲೆ ತಳವೂರಿದ್ದು ಪ್ರಾಚೀನ ರೋಮನ್ನರು ಇದರ ಬಗ್ಗೆ ಪ್ರಸ್ತಾಪಿಸಿ ಸರ್ಪ ವಿಷ

ವನ್ನೂ ಈ ಕೀಟದಿಂದ ಗುಣಪಡಿಸಬಹುದೆಂದಿದ್ದಾರೆ. ಹದಿನಾರನೆಯ ಶತಮಾನದ ಆದಿಯಲ್ಲಿ ಇಂಗ್ಲೆಂಡಿನಲ್ಲಿ ಹಬ್ಬಿಕೊಂಡು ನಂತರ ವ್ಯಾಪಾರಿ ಹಡಗುಗಳ ಮುಖಾಂತರ ಬಂದರುಗಳಲ್ಲೆಲ್ಲ ಬೆಳೆದುಕೊಂಡಿತು.

ಹಕ್ಕಿಗಳ, ಕೋಳಿಗಳ, ಕಣ್ಣು ಕಪ್ಪಡಿಗಳ, ರಕ್ತ ಹೀರುವ ತಗಣೆಗಳೂ ಇವೆ. ಆದರೆ ಅವು ಮಾನವನ ರಕ್ತಕ್ಕಾಗಿ ಹಾತೊರೆಯುವವು. ಆದರೆ ಕೋಳಿಗಳನ್ನು ಮನೆಯಲ್ಲಿ ಸಾಕಿದರೆ ಅವುಗಳ ತಗಣೆಗಳು ಮನೆಗಳಲ್ಲಿ ಪ್ರವೇಶಿಸುವುದುಂಟು. ತಗಣೆ ವರ್ಗಕ್ಕೆ ಸೇರಿದ ಹಲವಾರು ಕೀಟಗಳು ಉಳಿದ ಪಶು ಪಕ್ಷಿಗಳ ರಕ್ತ ಹೀರಿ ಪರಾವಲಂಬಿ ಜೀವನ ನಡೆಸುವವು. ಇಲ್ಲವೇ ಸಸ್ಯಗಳ ಬೇರೆ ಬೇರೆ ಭಾಗದ ರಸ ಹೀರಿ ಸ್ವತಂತ್ರವಾದ ಜೀವನ ನಡೆಸುವವು. ತಗಣೆಯ ಸಂಬಂಧಿಕ ಕೆಲವು ಕೀಟಗಳಿಗೆ ರೆಕ್ಕೆಗಳಿದ್ದರೂ ನಮ್ಮ ಈ ರಕ್ತ ಬಂಧುವಿಗೆ ರೆಕ್ಕೆಗಳಿಲ್ಲ. ಅನೇಕ ವರ್ಷಗಳಿಂದ ಪರಾವಲಂಬಿ ಯಾಗಿ ಇದರ ದೇಹ ರಚನೆಯಲ್ಲಿ ಬಹಳಷ್ಟು ಬದಲಾವಣೆಗಳಾಗಿವೆ. ತನ್ನ ವಸ್ತುವಿನ ಸಮೀಪದಲ್ಲೇ ಸಂಸಾರ ಹೂಡಿ ಹಾರಲು ಬೇಕಾಗುವ ರೆಕ್ಕೆಗಳನ್ನು ಅದು ಕಳೆದುಕೊಂಡು, ಸಿದ್ಧ ಆಹಾರ ರಕ್ತದ ಮೇಲೆಯೇ ಜೀವಿಸುವುದರಿಂದ ಪಚನ ಕ್ರಿಯೆಗೆ ಬೇಕಾಗುವ ಅವಯವಗಳನ್ನು ಬಿಟ್ಟುಬಿಟ್ಟಿದೆ. ಹಸಿದ ತಗಣೆಯನ್ನು ನೋಡಿದರೆ ಹೆಚ್ಚು ಕಡಿಮೆ ಗೋಲಾಕಾರದ್ದಿದ್ದು ಚಪ್ಪಟೆ ಯಾಗಿರುತ್ತವೆ. ಬಣ್ಣ ನಾಶೀಪುಡಿ, ಮೈತುಂಬ ಕುಸುರುಗಳು. ಚಿಕ್ಕ ದಾದ ಶಿರದಿಂದ ಚೂಪಾಗಿ, ಹರಿತವಾದ ದವಡೆಗಳನ್ನು ಶರೀರದ ಕೆಳ ಮಗ್ಗುಲಿಗೆ ಗೋಚರಿಸಿದಂತೆ ಹಿಡಿಯಲ್ಪಟ್ಟಿದೆ. ವರ್ತುಲಾಕಾರದ ಸಣ್ಣ ಸಂಯುಕ್ತ ಕಣ್ಣುಗಳು, ಉದ್ದವಾದ ಸ್ಪರ್ಶ ಮೀಸೆ, ಮೂರು ಜೋಡಿ ಓಡುವ ಕಾಲುಗಳು, ಹಿಗ್ಗಿಸಬಹುದಾದ ಹೊಟ್ಟೆ ಇವಿಷ್ಟು ಅದರ ಅಂಗಾಂಗ ಗಳು. ತಗಣೆ ಮತ್ತು ಅದರ ವರ್ಗಕ್ಕೆ ಸೇರಿದ ಉಳಿದೆಲ್ಲ ಕೀಟಗಳ ವೈಶಿಷ್ಟ್ಯ ವೆಂದರೆ ಅವುಗಳನ್ನು ತೊಂದರೆಗೀಡು ಮಾಡಿದರೆ ತನ್ನ ಶರೀರದಲ್ಲಿ ಅಡಕ ವಾದ ಛಿದ್ರಗಳಿಂದ ನೀರಿನಂತಹ ತೈಲವನ್ನು ಹೊರಗೆಡಹುವುದು. ಅದ ರಿಂದಾಗಿ ಎಲ್ಲೆಡೆ ದುರ್ಗಂಧ ವಾಸನೆ ಹರಡುವುದು.

ತಗಣೆಗಳು ನಿಶಾಚರವಾದ್ದರಿಂದ ಬೆಳಕಿನಲ್ಲಿ ಕಣ್ಣಿಗೆ ಬೀಳದಂತೆ ಹಾಸಿಗೆ, ಕುರ್ಚಿ, ಮಂಚ, ಗೋಡೆ, ಕಪಾಟುಗಳ ಮೂಲೆಗಳಲ್ಲಿ ಅವಿತು ಕೂಡುವವು. ರಾತ್ರಿ ದೀಪ ಹಚ್ಚಿದಾಗ ಕಣ್ಮರೆಯಾಗುವವು. ಆದರೆ ಬಹು ಕಾಲದಿಂದ ಹಸಿದಿದ್ದರೆ ಇದಾವ ಆತಂಕಗಳನ್ನೂ ಲೆಕ್ಕಿಸದೇ ರಕ್ತಪಾನ ದಲ್ಲಿ ಮೈಮರೆತು ಬಿಡುವವು. ರಕ್ತ ಉದರವನ್ನು ಸೇರುತ್ತಿದ್ದಂತೆ ಹೊಟ್ಟೆ ಮಾತ್ರ ಪುಗ್ಗೆಯಂತೆ ಊದಿಕೊಂಡು ಬಿಡುವುದು. ಒಮ್ಮೆ ತನ್ನ ಹಸಿವು ಹಿಂಗಿತೆಂದರೆ ಮಂದಗಮನದಿಂದ ವಾಸಸ್ಥಳಕ್ಕೆ ಮರಳುವುದು. ಹೊಟ್ಟೆ ಬಿರಿಯುವಷ್ಟು ರಕ್ತ ಹೀರಿದ ತಗಣೆಗೆ ಓಡಲಾಗದ್ದರಿಂದ ನಿದ್ರೆಯಲ್ಲಿ ಹೊರಳಾಡಿದಾಗ ಇಂತಹವು ಸಾವನ್ನು ಅಪ್ಪಿಕೊಂಡು ಹಾಸಿಗೆಯನ್ನು ರಕ್ತಮಯವನ್ನಾಗಿ ಮಾಡುವವು. ತಗಣೆಗಳು ಸಹಜೀವನ ನಡೆಸುವವು. ಅಂತೆಯೇ ಒಂದೇ ಕಡೆಯಲ್ಲಿ ಹತ್ತಾರು ಪ್ರೌಢರು, ನೂರಾರು ಮರಿಗಳು, ಅಸಂಖ್ಯ ತತ್ತಿಗಳನ್ನು ಕಾಣಬಹುದು. ತತ್ತಿಗಳು ಅಂಡಾಕಾರವಾಗಿದ್ದು ಬಿಳಿಯವಾಗಿರುತ್ತವೆ. ಒಂದು ತುದಿಗೆ ಹ್ಯಾಟಿನಂತಿದ್ದು, ಆರರಿಂದ ಅರವತ್ತು ಸಂಖ್ಯೆಯ ಗುಂಪಿನಲ್ಲಿರುತ್ತವೆ. ಹೆಣ್ಣು ತಗಣೆ ಪ್ರತಿದಿನ ಒಂದ ರಿಂದ ಐದರವರೆಗೆ, ಎರಡು ತಿಂಗಳ ತನಕ ತತ್ತಿಗಳನ್ನು ಇಡಬಲ್ಲದು. ತನ್ನ ಜೀವಮಾನದಲ್ಲಿ 200 ರಿಂದ 300 ತತ್ತಿಗಳನ್ನು ಇಡುವುದು. 5 ರಿಂದ ಹತ್ತು ದಿನಗಳಲ್ಲಿ ಹ್ಯಾಟನ್ನು ಹೊರದೂಡಿ ಹಳದಿ ಬಣ್ಣದ, ಎಲ್ಲ ವಿಧದಲ್ಲಿ ತಾಯಿಯನ್ನು ಹೋಲುವ ಮರಿ ಹೊರಗೆ ಬರುವುದು. ಈ ಮರಿಗಳು ತೀರ ಸಣ್ಣವಿರುವುದರಿಂದ ಕಣ್ಣಿಗೆ ಕಾಣದೇ ದೊಡ್ಡವಕ್ಕಿಂತ ಹೆಚ್ಚಿನ ಸಮಸ್ಯೆ ಯಾಗಿ ಪರಿಣಮಿಸುವವು. ತಿಂದು ಬೆಳೆದಂತೆ ಅವು ತಮ್ಮೊಟ್ಟಿಗೆ ಬೆಳೆಯದ ಕವಚವನ್ನು 5 ಸಲ ತ್ಯಜಿಸಿ, ಹೊರ ಕವಚವನ್ನು ಬೆಳೆಸಿಕೊಳ್ಳುವವು. ತೆಳುವಾದ ಕಾಗದದಂತಹ ಈ ಕವಚಗಳು ಸೂಕ್ಷ್ಮ ಕಣ್ಣುಗಳಿಗೆ ಗೋಚರ ವಾಗದೇ ಇರುವುದಿಲ್ಲ. ರಕ್ತ ಪೂರೈಕೆ ಸರಿಯಾಗಿದ್ದರೆ ಆರೇಳು ವಾರಗಳಲ್ಲಿ ಮರಿಗಳು ಪ್ರೌಢಾವಸ್ಥೆಯನ್ನು ಹೊಂದುವವು. ಅದೇ ಅವು ಅರೆಹೊಟ್ಟೆ ಉಂಡರೆ ಇಲ್ಲವೇ ಉಪವಾಸ ಇರುವ ಪ್ರಸಂಗ ಬಂದರೆ ಆಹಾರಕ್ಕಾಗಿ ಕಾಯುತ್ತಿರುವವೇ ಹೊರತು ಬೆಳವಣಿಗೆ ಹೊಂದುವುದಿಲ್ಲ. ಅತಿ ಕಡಿಮೆ ಎಂದರೆ ತಗಣೆಗೆ ಪ್ರತಿ ಕವಚವನ್ನು ತ್ಯಜಿಸುವಾಗ ಒಮ್ಮೆ ಮತ್ತು ತತ್ತಿಗಳ

ನ್ನಿಡುವಾಗ ಒಮ್ಮೆ ಹೀಗೆ ಆರು ಸಲ ಅದಕ್ಕೆ ರಕ್ತಪಾನ ಬೇಕಾಗಿಯೇ ಇರುತ್ತದೆ. 5 ರಿಂದ 10 ನಿಮಿಷಗಳಲ್ಲಿ ಬೇಕಾದಷ್ಟು ರಕ್ತಹೀರಿ, ಮೂಲೆಯೊಂದರಲ್ಲಿ ಅವಿತು ಕುಳಿತು ಎಂಟು ಹತ್ತು ದಿನಗಳಲ್ಲಿ ಅದನ್ನು ಜೀರ್ಣಿಸಿಕೊಳ್ಳುವುದು. ಒಂದು ವರ್ಷದವರೆಗೆ ರಕ್ತಕ್ಕಾಗಿ ಕಾದು ಹಸಿದೇ ಇರಬಲ್ಲದು. ಸೆಕೆಯ ದಿನಗಳಲ್ಲಿ ಇದರ ಕಾಟ ಹೆಚ್ಚಾದರೂ ಚಳಿಗಾಲದಲ್ಲಿ ಮಾಯವಾಗುವುದಿಲ್ಲ. ಪ್ರಯೋಗ ಶಾಲೆಯಲ್ಲಿ ಹಸಿದ ತಗಣೆಗಳು, ಇಲಿ, ಹಕ್ಕಿ ಮುಂತಾದವುಗಳ ರಕ್ತ ಹೀರಿ ಜೀವಿಸಬಲ್ಲವು. ತಗಣೆಗಳು 10–15 ತಿಂಗಳತನಕ ಜೀವಿಸಬಲ್ಲವು.

ನಮ್ಮ ರಕ್ತ ಮತ್ತು ಶರೀರದ ಉಷ್ಣತೆ ತಗಣೆಯನ್ನು ಆಕರ್ಷಿಸುತ್ತದೆ. ಒಂದೇ ಸ್ಥಳದಲ್ಲಿ ಕುಳಿತಾಗ ಇಲ್ಲವೇ ಮಲಗಿದಾಗ ಸಾವಕಾಶವಾಗಿ ಕುರ್ಚಿಗೋ, ಹಾಸಿಗೆಗೋ ತಾಗಿದ ಅವಯವದ ರಕ್ತನಾಳ ಪರೀಕ್ಷಿಸಿ ರಕ್ತ ಹೀರಲಾರಂಭಿಸುವದು. ತನ್ನ ಆಗಮನ ತಿಳಿಯದಂತೆ ವರ್ತಿಸುವುದೇ ಅದರ ಬೆಳವಣಿಗೆಗೆ ಕಾರಣವಿರಬಹುದು. ರಕ್ತಪಾನಕ್ಕೆ ಮೊದಲು ಅಡಗಿಸಿದ ಸೊಂಡಿಲನ್ನು ಮುಂದೆ ತಂದು ಅದರ ತುದಿಯಲ್ಲಿದ್ದ ಸ್ಪರ್ಶೇಂದ್ರಿಯದಿಂದ ರಕ್ತನಾಳದ ಸ್ಥಳವನ್ನು ಖಚಿತಪಡಿಸಿ ಕವಚದಲ್ಲಿದ್ದ ಸೂಜಿಯಂತಹ ಮೂರು ದವಡೆಗಳನ್ನು ಹೊರಗೆಳೆದು, ಕರಗಸದಂತಿರುವ ಅದರ ತುದಿಯಿಂದ ಸೂಕ್ಷ್ಮವಾದ ಗಾಯ ಒಂದನ್ನು ನಿರ್ಮಿಸಿ, ನಳಿಗೆಯಂತಹ ಬಾಯಿಯನ್ನು ರಕ್ತ ನಾಳದಲ್ಲಿ ಸೇರಿಸುವದು. ರಕ್ತ ನಮ್ಮ ಶರೀರದಿಂದ ಹೊರಗೆ ಬಂದಾಗ ಹೆಪ್ಪುಗಟ್ಟುವುದು ಅದರ ಗುಣಧರ್ಮ. ಹೀಗಾದರೆ ತನಗೆ ಹೀರಲು ಬಾರದ್ದರಿಂದ ಹೆಪ್ಪುಗಡದಂತಹ ರಸಾಯನವಿರುವ ತನ್ನ ಎಂಜಲನ್ನು ರಕ್ತದಲ್ಲಿ ಮಿಶ್ರಣ ಮಾಡಿ ಪಂಪಿನಂತೆ ಆಕುಂಚನ ಪ್ರಸರಣ ಹೊಂದುವ ಕಂಠದ ಒತ್ತಡದಿಂದ ಹೊಟ್ಟೆ ಬಿರಿಯುವಷ್ಟು ರಕ್ತ ಕುಡಿದು, ಸೊಂಡಿಲು ಹೊರಗೆಳೆದು ತನ್ನ ವಾಸಸ್ಥಾನಕ್ಕೆ ಮರಳುವುದು. ಆದರೆ ಎಂಜಲು ನಮ್ಮ ರಕ್ತದೊಡನೆ ಮಿಶ್ರಣವಾಗಿ ರಸಾಯನ ಕ್ರಿಯೆಯಾಗುವಾಗ ನಮಗೆ ಈ ರಕ್ತದ ಕಳುವಿನ ಅರಿವಾಗುವುದು. ಅಷ್ಟರಲ್ಲಿ ತಗಣೆ ಹೋಗಿರುತ್ತದೆ. ಇಲ್ಲವೇ ಅದರ ರಕ್ತದಾಹ ಮುಗಿದಿರುತ್ತದೆ. ತಗಣೆಯು

ಚುಚ್ಚಿದ ಗಾಯದಿಂದ ಕೆಲವರಿಗೆ ನೋವಾದರೆ ಕೆಲವರಿಗೆ ಗಾಯ ಊದಿ ಕೊಳ್ಳುತ್ತದೆ. ಕೆಲವು ಕೋಮಲಾಂಗಿನಿಯರಿಗಂತೂ ಮೈ ಕೈಗೆ ಇದ ರಿಂದಲೇ ಕಜ್ಜಿಯಾಗುವುದುಂಟು. ಇಂಥ ಜಾಗದಲ್ಲಿ ಹೈಡ್ರೋಜನ್ ಪೆರೊಕ್ಸಾಯಿಡ್ ಇಲ್ಲವೇ ಟಿಂಕ್ಚರ್ ಅಯೋಡಿನ್‌ದ ತೆಳುವಾದ ಲೇಪ ಸವರಿಕೊಂಡರೆ ಗೆಲವು ಅನಿಸುವುದು. ತಗಣಿ ರಕ್ತಪಾತ ಮಾಡುವಾಗ ಸಾಂಸರ್ಗಿಕ ರೋಗಗಳು ಒಬ್ಬರಿಂದ ಇನ್ನೊಬ್ಬರಿಗೆ ಸ್ಥಳಾಂತರವಾಗಬಹುದು.

ನಿಸರ್ಗದಿಂದ ದೂರವಿದ್ದರೂ ತಗಣಿಗೆ ವೈರಿಗಳಿಲ್ಲದೇ ಇಲ್ಲ. ಹಲ್ಲಿ, ಕೆಂಪು ಇರುವೆ, ಜೇಡ, ಕೆಲವೊಮ್ಮೆ ಜಿರಳೆಗಳು ತಗಣಿಯ ತತ್ತಿ; ಮರಿ ಗಳನ್ನು ಪ್ರೌಢ ಕೀಟಗಳನ್ನು ತಿಂದು ತೇಗುತ್ತವೆ. ಮಲೇರಿಯ ನಿರ್ಮೂ ಲನದ ಮೊದಲು ಕರಾವಳಿ ಪ್ರದೇಶದವರು ತಗಣಿಯನ್ನು ನೋಡಿರಲಿಲ್ಲ. ಆದರೆ ಗುಂಗಾಡುಗಳನ್ನು ಕೊಲ್ಲಲು ಉಪಯೋಗಿಸಿದ ಡಿ.ಡಿ.ಟಿ. ಮುಂತಾದ ಕ್ರಿಮಿನಾಶಕದಿಂದ ಈ ಎಲ್ಲ ಪ್ರಾಣಿ ವರ್ಗ ಸತ್ತಿತ್ತು. ಈ ಔಷಧಗಳಿಂದ ಸಾಯಲಾರದ ತಗಣಿಯ ವರ್ಗ ಸಿಕ್ಕ ಹಾಗೆ ಬೆಳೆಯಲು ಅವಕಾಶವಾಯಿತು. ಮಲೇರಿಯದಿಂದ ಒಮ್ಮೆ ಸತ್ತವನು ಸ್ವರ್ಗ ಪಡೆದರೆ ಇದ್ದವನು ಪ್ರತಿ ದಿನ ತಗಣಿ ಕಾಟದಿಂದ ನರಳುವಂತಾಯಿತು. ಡಿ.ಡಿ.ಟಿ. ಸಿಂಪಡಿಸುವುದನ್ನು ನಿಲ್ಲಿಸಿದ ನಂತರ ತಗಣಿಯ ವೈರಿಗಳು ಕಾಣಿಸಿಕೊಂಡಿವೆ. ತಗಣಿಯ ಕಾಟ ದಿಂದ ಗೋಳಾಡುವ ಜನರಿಗೆ ಸಹಾಯ ಮಾಡಲು ಪಂಜಾಬದವನೊಬ್ಬ 'ಬರೇ ಇಪ್ಪತ್ತೈದು ರೂಪಾಯಿಗೆ ತಗಣಿ ಕೊಲ್ಲುವ ಯಂತ್ರ' ಮಾರುವ ಜಾಹೀರಾತು ಕೊಟ್ಟ. ವಿ.ಪಿ.ಯಿಂದ ತರಿಸಿದ ಪೊಟ್ಟಣ ಬಿಡಿಸಿ ನೋಡಿ ದಾಗ ಅದರಲ್ಲಿ ಎರಡು ಕಲ್ಲುಗಳಿದ್ದವು! ಅಲ್ಲದೇ ಒಂದು ಕಲ್ಲಿನ ಮೇಲೆ ತಗಣಿಯಿಟ್ಟು, ಇನ್ನೊಂದರಿಂದ ಬಡಿದರೆ ಹೇಗೆ ಸಾವು ಖಂಡಿತವೆಂದು ವಿವರಣೆ ಕೊಡಲಾಗಿತ್ತು.

ತಗಣಿಗಳು ಕಡಿಮೆ ಇದ್ದಾಗ ಸಾಮಾನುಗಳನ್ನು ಬಿಸಿಲಿಗೆ ಹರಡಿ, ವೈರಿಗಳನ್ನು ಕೈಯಿಂದಲೋ, ಸೂಜಿಯಿಂದಲೋ ಕೊಲ್ಲಬಹುದು. ಬಿಸಿ ನೀರಿನ ಸಿಂಪಡಿಸುವಿಕೆ ತಗಣಿಯ ಜೀವನದ ಎಲ್ಲ ಅವಸ್ಥೆಗಳನ್ನೂ ನಿರ್ಮೂಲ

ಮಾಡಬಲ್ಲುದು. ಪಿಚಕಾರಿಯಿಂದ ಇಲ್ಲವೇ ಮೃದು ಬ್ರಷ್ಷಿನಿಂದ ಚಿಮಣಿ ಎಣ್ಣೆ, ಟರಪೆಂಟಾಯಿನ್ ಇಲ್ಲವೇ ಬೆನ್ಸೀನುಗಳನ್ನು ಈ ಕೀಟ ಇರುವಲ್ಲಿ ಹಚ್ಚಿದರೆ ಅವು ಸಾಯುವವು. ಇಂದು ಪೇಟೆಯಲ್ಲಿ ಫ್ಲಿಟ್, ಟಿಕ್–20 ಗಳಂತಹ ಅನೇಕ ಮಿಶ್ರಣಗಳನ್ನು ವಿವಿಧ ಕಂಪನಿಗಳು ಮಾರುತ್ತವೆ. ಇವೆಲ್ಲ ಬೇರೆ ಬೇರೆ ಕ್ರಿಮಿನಾಶಕಗಳ ಮಿಶ್ರಣವಾಗಿರುವವು. ಇವುಗಳ ಬಳಕೆಯಲ್ಲಿ ದೊಡ್ಡ ತೊಡಕೆಂದರೆ, ಅಡಗಿರುವ ತಗಣಿಗಳಿಗೆ ಅವು ಮುಟ್ಟದಿರುವುದು ಮತ್ತು ಸಣ್ಣ ಮಕ್ಕಳಿರುವ ಮನೆಯಲ್ಲಿ ಅವನ್ನು ಸುಲಭವಾಗಿ ಬಳಸಲು ಆಗದಿರುವುದು. ಅತಿ ಹೆಚ್ಚು ತಗಣಿಗಳಿರುವ ಮನೆ, ಕಟ್ಟಡಗಳಲ್ಲಿ ಎಲ್ಲ ಕದಗಳನ್ನು ಮುಚ್ಚಿ ಗಂಧಕ ಸುಟ್ಟು ಹೊಗೆಯನ್ನು ನಿರ್ಮಿಸುವರು. ಆದರೆ ಈ ಹೊಗೆಯಿಂದ ಬಟ್ಟೆಗಳ ಬಣ್ಣ ಹೋಗುವುದರಿಂದ ಜಾಗ್ರತೆವಹಿಸಬೇಕು. ಹೈಡ್ರೋಸಾಯನಿಕ ಎಸಿಡ್ ಗ್ಯಾಸನ್ನು ಬಳಸಬಹುದು. ಆದರೆ ಇದು ಬಹಳ ವಿಷಕಾರಿಯಾದ್ದರಿಂದ ಹೆಚ್ಚಿನ ಜಾಗ್ರತೆ ವಹಿಸಬೇಕಾಗುವುದು.

## 6. ಪುಟ್ಟ ದೆವ್ವ : ಧಾನ್ಯಕೀಟ

ಪೇಟೆಯಿಂದ ತಂದದ್ದಾಗಲಿ, ಮನೆಯಲ್ಲಿ ಸಂಗ್ರಹಿಸಿದ ಧಾನ್ಯಗಳಾಗಲಿ ಅಡಿಗೆಗೆಂದು ಹೊರತೆಗೆದು ತೊಳೆದಾಗ ಹಲವಾರು ಕಾಳುಗಳು ನೀರುಮೇಲೆ ತೇಲಿಬರುವವು. ಇವುಗಳು ಅಡಿಗೆಗೆ ನಿರುಪಯೋಗಿ ಎಂದು ತಿಳಿದ ಗೃಹಿಣಿ ಚೆಲ್ಲುತ್ತಾಳೆ. ಸೂಕ್ಷ್ಮವಾಗಿ ಈ ಕಾಳುಗಳನ್ನು ನೋಡಿದರೆ ಯಾವುದೋ ದೆವ್ವ ಒಳಗಿನದೆಲ್ಲ ನುಂಗಿ ಸಿಪ್ಪೆಯಷ್ಟನ್ನೇ ಬಿಟ್ಟಂತೆ ತೋರದೆ ಇರದು. ಗೋದಾಮಿನಲ್ಲಿ ಆಗೊಮ್ಮೆ ಈಗೊಮ್ಮೆ ಕಣ್ಣಿಗೆ ಬೀಳುವ ಧಾನ್ಯಕೀಟವೇ ಆ ಪುಟ್ಟ ದೆವ್ವ. ಎಳೆತನದಲ್ಲಿ ಕಂದುಬಣ್ಣ ತಳೆದ ಈ ಕೀಟ ಮುದಿಯಾದಾಗ ಕಪ್ಪು ಬಣ್ಣಕ್ಕೆ ಪರಿವರ್ತಿಸುವದು. ಗೋದಾಮಿನಲ್ಲಿ ಒಮ್ಮೆಲೇ ನುಗ್ಗಿದರೆ ಇಲ್ಲವೇ ಬೆಳಕು ಮಾಡಿದರೆ ಸತ್ತಂತೆ ಬೀಳುವವು. ಅದೇ ಐದು ನಿಮಿಷ ಶಾಂತರಾಗಿ ನಿಂತರೆ ತಿರುಗಿ ಚಟುವಡಿಕೆಗಳನ್ನು ಪ್ರಾರಂಭಿಸಿದವು. ಗೋಣಿ ಚೀಲದ ಮೇಲೆ ಇಲ್ಲವೇ ಡಬ್ಬಿಯಲ್ಲಿ ಓಡುವ ಕೀಟ ಹಿಡಿಯಲು ಹೋದಾಗ ತನ್ನ ಮೀಸೆ, ಕಾಲು ದೇಹಗಳನ್ನು ಮುದುಡಿಕೊಂಡು ನಿರ್ಜೀವಿಯಂತೆ ಬೀಳುವದು. ಕೆಲ ನಿಮಿಷಗಳ ನಂತರ ಮೀಸೆಗಳನ್ನು ಹೊರಗೆಳೆದು ಓಡುವದು. ಸತತವಾಗಿ ಅದನ್ನು ಹಿಂಬಾಲಿಸಿದರೆ ತನ್ನ ಗರಿಗಳನ್ನು ಬಿಚ್ಚಿ ಕತ್ತಲಲ್ಲಿರುವ ಸುರಕ್ಷಿತ ಸ್ಥಳಕ್ಕೆ ಹಾರಿಹೋಗುವದು. ಈ ಕೀಟಕ್ಕೆ ಎರಡು ಜೋಡಿ ಪಕ್ಕಗಳಿದ್ದರೂ ಹಾರಲು ಉಪಯೋಗಿಸುವದು ಒಂದು ಜೋಡಿ ಪಕ್ಕ ಮಾತ್ರ. ಮುಂದಿನ ರೆಕ್ಕೆಗಳು ಸಣ್ಣದಾಗಿ ದಪ್ಪಗಿರುವದರಿಂದ ಅವು

ಗಳನ್ನು ಶರೀರದ ಮೇಲ್ಭಾಗದ ಸಂರಕ್ಷಣೆಗಾಗಿ ಉಪಯೋಗಿಸಲಾಗುತ್ತದೆ. ಹಿಂದಿನ ಪಕ್ಕ ದೇಹದ ಎರಡು ಪಟ್ಟು ಉದ್ದ, ತೆಳವು ಮತ್ತು ಪಾರದರ್ಶಕ ವಾಗಿರುವುದರಿಂದ ಅವುಗಳನ್ನು ಮುಂದಿನ ಪಕ್ಕಗಳ ಆಶ್ರಯದಲ್ಲಿ ಬೀಸಣಿಗೆ ಯಂತೆ ಮುಚ್ಚಿಡಲಾಗುತ್ತದೆ.

ರೆಕ್ಕೆಯು ಕೀಟಗಳು ಹಾರಾಡುವ ಗೋದಾಮಿನಲ್ಲಿ, ಬಹಳಷ್ಟು ಧಾನ್ಯ ಚಿಕ್ಕ ಕೀಟಗಳಿಗೆ ಬಲಿಯಾಗಿದೆ ಎಂದು ತಿಳಿಯಬೇಕು. ಕಣ್ಣಲ್ಲಿ ಕಣ್ಣಿಟ್ಟು ನೋಡಿದರೆ ಕೀಟದ ರಹಸ್ಯ ಸಂಸಾರ ಹೊರಬೀಳದೇ ಇರದು. ಒಂದೇ ಒಂದು ಧಾನ್ಯದ ಮೇಲೆ ಎಳ್ಳಿನ ಆಕಾರದ ಹತ್ತಾರು ತತ್ತಿಗಳ ದರ್ಶನವಾಗು ವದು. ಇಂಥ ತತ್ತಿಗಳಿಂದ ಗಿಡ್ಡವಾಗಿ ದಪ್ಪವಾಗಿ ಪ್ರಬಲವಾದ ದವಡೆ ಗಳುಳ್ಳ ಬಿಳಿಯ ಹುಳ ಹೊರಗೆ ಬೀಳುವದು. ನಂತರ ತನ್ನ ಹರಿತವಾದ ದವಡೆಯಿಂದ ಧಾನ್ಯದ ಹೊರ ಕವಚಕ್ಕೆ ತೂತು ಮಾಡಿ ಒಳಗಿನ ಆಹಾರ ಸೇವನೆ ಮಾಡುತ್ತ ಧಾನ್ಯದೊಳಗೆ ಬೆಳೆಯುವದು. ಒಂದು ಧಾನ್ಯದ ಆಹಾರ ಒಂದೇ ಕೀಟಕ್ಕೆ ಸಾಕಾಗುವದರಿಂದ ಒಂದು ಧಾನ್ಯದ ಮೇಲೆ ಹತ್ತಾರು ತತ್ತಿ ಗಳಿದ್ದರೂ ಒಂದೇ ಕೀಟ ಯಶಸ್ವಿಯಾಗಿ ಬೆಳೆಯುವದು. ಬೆಳೆಯುತ್ತಿರುವ ಕೀಟಕ್ಕೆ ಧಾನ್ಯದಲ್ಲಿ ಸ್ಥಳದ ಅಭಾವವಾಗುವದರಿಂದ ಅವು ಬಾಗಿ ಬೆಳೆಯು ವವು. ಈ ಅವಧಿಯಲ್ಲಿ ಕೀಟದ ಆಹಾರ ಸೇವನೆ ಮುಗಿದು ಅವು ವಿಶ್ರಾಂತಿ ಪಡೆಯುವವು. ಈ ಅವಸ್ಥೆಯಲ್ಲಿ ಅವಕ್ಕೆ ಪ್ರೌಢಾವಸ್ಥೆ ಬಂದು ಮೀಸೆ, ಕಾಲು ಪಕ್ಕಗಳು ಕಾಣಿಸಿಕೊಳ್ಳುವವು. ನಂತರ ಹೊರ ಬರಲು ತೂತು ಕೊರೆದ ಸ್ಥಳ ತೆಳುವಾಗಿರುತ್ತದೆ. ಧಾನ್ಯಸಂಗ್ರಹದಲ್ಲಿ ಇಂಥ ಕಾಳುಗಳು ಕಂಡುಬಂದರೆ ಪ್ರೌಢ ಕೀಟಗಳು ಹೊರಬರುವುದರಲ್ಲಿವೆ ಎಂದು ತಿಳಿಯ ಬೇಕು. ಇಂಥ ಕಾಳುಗಳನ್ನು ಸ್ವಲ್ಪ ಮುಟ್ಟಿದರೂ ತೂತಿನ ಮೇಲ್ಭಾಗ ಚೂರಾಗಿ ಬಿದ್ದು ಒಳಗಿನ ಕೀಟ ಕಣ್ಣಿಗೆ ಗೋಚರಿಸುವದು. ಮುಂದೆ ಒಂದೆರಡು ದಿನಗಳಲ್ಲೆ ಪ್ರೌಢ ಕೀಟ ಕಾಳನ್ನು ಒಡೆದು ಬಂದಿವಾಸದಿಂದ ಮುಕ್ತವಾಗಿ ಹೊರಜಗತ್ತಿಗೆ ಬರುತ್ತದೆ. ಕೀಟಕ್ಕೆ ಜೀವದಾನ ಕೊಟ್ಟ ಕಾಳನ್ನು ಒಡೆದು ನೋಡಿದಾಗ ಅದರಲ್ಲಿ ಕೀಟದ ಮಲಮೂತ್ರದ ಹೊರತಾಗಿ ಇನ್ನೇನೂ ಇರುವುದಿಲ್ಲ.

ಪ್ರೌಢಕೀಟ ಸುಮಾರು ೦.೪ ಸೆಂಟಿಮೀಟರ್ ಉದ್ದ ಮತ್ತು ೦.೨ ಸೆಂಟಿಮೀಟರ್ ಅಗಲವಾಗಿರುವದು. ತತ್ತಿಗಳನ್ನು ಹೊತ್ತ ಹೆಣ್ಣು ಕೀಟದ ಉದ್ದಳತೆ ತುಸು ಹೆಚ್ಚಾಗಿರುವದು. ಸ್ವಾತಂತ್ರ್ಯ ಪಡೆದ ಗಂಡುಕೀಟ ಹೆಣ್ಣಿಗಾಗಿ ಅತ್ತಿತ್ತ ಸುತ್ತಾಡಿ ಕೀಟ ಕನ್ಯೆ ಕಂಡಾಗ ಅದನ್ನು ಹಿಂಬಾಲಿಸುವದು. ಮೀಸೆಯಿಂದ ಮುಟ್ಟಿ ಪುಸಲಾಯಿಸಿ ತನ್ನದನ್ನಾಗಿ ಮಾಡಿಕೊಳ್ಳುವದು. (ಮಾನವ ಸಮಾಜದಲ್ಲಿ ನಿಷೇಧಿತವಾದ ಕಾನೂನು ಈ ಕೀಟಸಮಾಜದಲ್ಲಿ ಸಮ್ಮತವಿದೆ). ಹೆಣ್ಣುಕೀಟ ವಿವಾಹಕಾಲದಲ್ಲಿಯೇ ಗರ್ಭಿಣಿಯಿದ್ದು, ಸಹಜೀವನದ ಕೆಲವೇ ಗಂಟೆಗಳಲ್ಲಿ ತನ್ನ ಸಂತತಿ ನಿರ್ಮಾಣಕಾರ್ಯವನ್ನು ಪ್ರಾರಂಭಿಸಿ ತತ್ತಿಗಳನ್ನು ಇಡಲು ಪ್ರಾರಂಭಿಸುವದು. ಇದಕ್ಕಾಗಿ ಹೆಣ್ಣು ಕಾಳಿನತ್ತ ಧಾವಿಸಿದರೆ ಗಂಡು ಇನ್ನೊಂದು ಹೆಣ್ಣಿನತ್ತ ಧಾವಿಸುವದು. ಈ ಮೊದಲೇ ತತ್ತಿಗಳಿದ್ದ ಧಾನ್ಯಗಳನ್ನು ಬಿಟ್ಟು ಹೆಣ್ಣುಕೀಟ ಹೊಸ ಧಾನ್ಯಗಳ ಮೇಲೆ ತತ್ತಿಗಳನ್ನಿಡಲಾರಂಭಿಸುವದು-ಒಂದೊಂದರ ಮೇಲೆ ೮ ರಿಂದ ೧೫ ಸಂಖ್ಯೆಗಳಲ್ಲಿ. ಹವಾಮಾನ ಉಷ್ಣತಾಮಾನಕ್ಕನುಸಾರವಾಗಿ ೫ ರಿಂದ ೨೫ ದಿನಗಳಲ್ಲಿ ಈ ತತ್ತಿಗಳನ್ನು ಒಡೆದು ಕೈ-ಕಾಲುಗಳಿಲ್ಲದ ಮರಿ ಹೊರಗೆ ಬರುತ್ತದೆ. ಈ ಮರಿ ೧೧ ರಿಂದ ೪೦ ದಿನಗಳಲ್ಲಿ ತನ್ನ ಆಹಾರ ಸೇವನೆ ಮುಗಿಸಿ ವಿಶ್ರಾಂತಿ ಪಡೆಯುಲಾರಂಭಿಸುವದು.

ಈ ಕೀಟ ಉದ್ದು, ಹೆಸರು, ಬಟಾಣಿ, ಅಲಸಂದೆ, ತೊಗರಿ, ಮಸೂರಿಗಳಂತಹ ಅನೇಕ ಧಾನ್ಯಗಳನ್ನು ನಾಶಮಾಡುವದು. ಇನ್ನುಳಿದ ಬಹುಸಂಖ್ಯಾತ ಗೋದಾಮು ಕೀಟಗಳು ಕಾಳುಕಡ್ಡಿ ಗೋದಾಮಿನಲ್ಲಿ ಬಂದನಂತರ ತಮ್ಮ ದಾಳಿಯನ್ನು ಅವುಗಳ ಮೇಲೆ ನಡೆಸಿದರೆ, ಈ ಕೀಟ, ಧಾನ್ಯಗಳು ಗಿಡದ ಮೇಲೆ ಇರುವಾಗಲೇ ಅಥವಾ ಹೊಲದಲ್ಲಿ ಸಂಗ್ರಹಿಸಿದಾಗಲೇ ತನ್ನ ಚಟುವಟಿಕೆಗಳನ್ನು ಪ್ರಾರಂಭಿಸುವದು. ಧಾನ್ಯದ ಕಾಯಿಗಳು ಇನ್ನೂ ಹಸಿ ಕಾಳುಗಳಿರುವಾಗಲೇ ಕಣ್ಣಿಗೆ ಕಾಣದಷ್ಟು ಸಣ್ಣ ತೂತು ಕೊರೆದು ತತ್ತಿಗಳನ್ನಿಡಲು ಪ್ರಾರಂಭಿಸುವದು. ಇಂಥ ಕಾಳುಗಳನ್ನು ಗೋದಾಮಿಗೆ ಸ್ಥಳಾಂತರಿಸಿದಾಗ ಕೀಟಗಳು ಬಹುಬೇಗ ಹಬ್ಬುವವು. ಎಷ್ಟು ಕಾಳಜಿ ವಹಿಸಿದರೂ ಈ ಕೀಟಗಳು ಒಂದಿಲ್ಲೊಂದು ಅವಸ್ಥೆಯಲ್ಲಿ ಕಾಳುಗಳಲ್ಲಿ ಇರುವದ

ರಿಂದ ಸಂಪೂರ್ಣ ಕೀಟರಹಿತವಾದ ಕಾಳುಗಳನ್ನು ಸ್ವೀಕರಿಸುವುದು ದುಸ್ಸಾಧ್ಯ. ಹೊಲದೊಳಗಿನ ಕಾಳುಕಡ್ಡಿಗಳನ್ನು ಚೆನ್ನಾಗಿ ಒಣಗಿಸಿದರೆ ಮತ್ತು ಸಂಗ್ರಹಣದ ಉಪಕರಣಗಳನ್ನೂ ಚೆನ್ನಾಗಿ ಒಣಗಿಸಿದರೆ ಬಹು ಸಂಖ್ಯಾತ ಕೀಟಗಳು ನಾಶವಾಗುವವು. ಉಸುಕು, ಬೂದಿಗಳೊಂದಿಗೆ ಕೂಡಿಸಿ ದಾಸ್ತಾನ ಮಾಡಿದರೆ ಅವುಗಳ ಪ್ರಸಾರಕ್ಕೆ ಅಡ್ಡಿ ಬರುವದು. ಇಷ್ಟೇ ಬಳಸುವಾಗ ಇವುಗಳಿಂದ ಕಾಳುಗಳನ್ನು ಬೇರ್ಪಡಿಸುವುದು ಕಷ್ಟದ ಕೆಲಸವಾಗುವುದು. ಕೆಲವೊಂದು ಪರಪುಷ್ಟ ಕೀಟಗಳು, ಧಾನ್ಯ ಕೀಟದ ತತ್ತಿಗಳನ್ನು ಹುಡುಕಿ ಅವುಗಳೊಂದಿಗೆ ತಮ್ಮ ತತ್ತಿಗಳನ್ನಿಟ್ಟು ಅವು ಬೆಳೆಯ ದಂತೆ ಮಾಡುವವು. ಆದರೆ ಇಂಥ ಕೀಟಗಳ ಸಂಖ್ಯೆ ಕಡಿಮೆ ಇರುವುದರಿಂದ ಅವುಗಳಿಂದ ಹೆಚ್ಚಿನ ಲಾಭವಾಗದು.

ಕಾಳುಕಡ್ಡಿಗಳನ್ನು ಸರಿಯಾಗಿ ಸಂಗ್ರಹಿಸುವ ಸಲುವಾಗಿ ಅನೇಕ ಸಂಶೋಧನೆಗಳನ್ನು ಮಾಡಿದ್ದಾರೆ. ಹವೆಯಾಡದ, ಬೆಳಕಿಲ್ಲದ ಕೋಣೆ ಗಿಂತ, ಹವೆಯಾಡುವ ಮತ್ತು ಹೆಚ್ಚು ಪ್ರಮಾಣದಲ್ಲಿ ಬೆಳಕು ಬರುವ ಗೋದಾಮುಗಳಲ್ಲಿ ಈ ಕೀಟಗಳ ಪ್ರಮಾಣ ಕಡಿಮೆ ಇರುತ್ತದೆ. ಡಬ್ಬಿ-ಚೀಲಗಳಲ್ಲಿ ಅರ್ಧಕ್ಕಿಂತ ಸಂಪೂರ್ಣವಾಗಿ ತುಂಬಿಬಿಟ್ಟರೆ, ಕೀಟಗಳ ಹಾವಳಿ ಕಡಿಮೆ. ಹಳೆಯ ಧಾನ್ಯದೊಂದಿಗೆ ಹೊಸ ಧಾನ್ಯ ಸಂಗ್ರಹಿಸಬಾರದು. ಕೀಟಗಳನ್ನು ಎಷ್ಟು ದೂರ ಒಗೆದರೂ ತಿರುಗಿ ಅವು ಧಾನ್ಯದೆಡೆಗೇ ಬರುವುದ ರಿಂದ ಅದನ್ನು ನಾಶಮಾಡಲೇ ಬೇಕು. ಗೋದಾಮಿನ ಉಷ್ಣತಾಮಾನ ವನ್ನು ೫೦ ಡಿಗ್ರಿ ಫ್ಯಾರನ್‌ಹೀಟಕ್ಕಿಂತ ಕಡಿಮೆ ಇಟ್ಟರೆ ಅವುಗಳ ಬೆಳವಣಿಗೆ ಯಾಗದೇ ಕೊಲ್ಲಲ್ಪಡುವವು. ಕೀಟಗಳಿರುವ ಕಾಳುಗಳನ್ನು ಬಿತ್ತಿಗೆಗೆ ಉಪ ಯೋಗಿಸಿದರೆ ಹೊಲಗಳೊಳಗೇ ಅವು ದಾಳಿಯನ್ನು ಪ್ರಾರಂಭಿಸಿಬಿಡುವವು. ಆದ್ದರಿಂದ ಅವನ್ನು ೧೨೦ ಡಿಗ್ರಿ F ಉಷ್ಣತಾಮಾನದಲ್ಲಿ ಇಟ್ಟರೆ ಅವುಗಳ ಎಲ್ಲ ಕೀಟಗಳೂ ನಾಶ ಹೊಂದುವವು. ಉಷ್ಣತಾಮಾನವು ಇದಕ್ಕೂ ಹೆಚ್ಚಾದರೆ ಬೀಜಗಳು ಹುರಿದಂತಾಗಿ ಅಂಕುರಿಸಲಾರವು. ವಿಷಕಾರಿಯಾದ ಕ್ರಿಮಿನಾಶಕವನ್ನು ಉಪಯೋಗಿಸಕೂಡದು. ಈ ದ್ರವ್ಯಗಳು ಕೀಟಗಳಿಗೆ ವಿಷವಿದ್ದಂತೆ ಮಾನವನಿಗೂ ವಿಷಕಾರಿ. ಕೆಲವು ಹಣದಾಸೆಯ ಅಂಗಡಿ

ಕಾರರು ಹುಳ ಹತ್ತಿದ ಧಾನ್ಯಗಳನ್ನು ಡಿ.ಡಿ.ಟಿ. ಗೆಮೆಕ್ಸಿನ್, ಬಿ. ಎಚ್.ಸಿ ಗಳಂತಹ ಕೀಟನಾಶಕಗಳೊಂದಿಗೆ ಬೆರಸಿಟ್ಟು ಗಿರಾಕಿಗಳಿಗೆ ಮಾರುತ್ತಾರೆ. ಇಂಥ ಧಾನ್ಯಗಳನ್ನು ಬೀಜಕ್ಕಾಗಿ ಉಪಯೋಗಿಸಬಹುದಾದರೂ ಆಹಾರ ಕ್ಕಾಗಿ ಎಂದೂ ಉಪಯೋಗಿಸಬಾರದು.

# 7. ತುತ್ತಿನ ಚೀಲದ ಕೊಳ್ಳೆಗಾರ : ಅಕ್ಕಿ ಪತಂಗ

ಮಾಂಸಾಹಾರಿಗಳು ಮೊಟ್ಟೆ, ಮೀನು, ಮಾಂಸಗಳನ್ನು ಆಹಾರವೆಂದು ಸೇವಿಸಿದರೆ, ಶಾಖಾಹಾರಿಗಳು ಅಕ್ಕಿ, ಕೀಟದ ತತ್ತಿ, ಹುಳ, ನಿದ್ರಾವಸ್ಥೆಯಲ್ಲಿರುವ ಚಿಕ್ಕ ಕೀಟಗಳನ್ನು (ಗೊತ್ತಿಲ್ಲದೇ) ಅನ್ನದೊಂದಿಗೆ ಸೇವಿಸುತ್ತಾರೆಂದರೆ, ಮಡಿವಂತರು ತೀವ್ರವಾಗಿ ವಿರೋಧಿಸಬಹುದು. ಇಂಥ ಶಾಖಾಹಾರಿಗಳು ತಾವು ಉಣ್ಣುವ ಪದಾರ್ಥಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನೋಡಿದರೆ ಈ ಮಾತಿನ ಸತ್ಯಾಂಶ ಅರಿವಾಗದೇ ಇರಲಿಕ್ಕಿಲ್ಲ. ಕಾಳುಕಡ್ಡಿಗಳನ್ನು ಅಂಗಡಿಯಿಂದ ಖರೀದಿಸಿ ತಂದಿರಲಿ, ತಮ್ಮ ಹೊಲದಲ್ಲಿಯೇ ಬೆಳೆಸಿರಲಿ, ಅವುಗಳ ಮೇಲೆ ಅಕ್ಕಿ ಕೀಟ ದಾಳಿ ಮಾಡದೇ ಇರದು. ಸಾಮಾನ್ಯವಾಗಿ ಈ ಕೀಟವನ್ನು 'ಅಕ್ಕಿ ಪತಂಗ' ಎಂದು ಕರೆದರೂ ಅದು ಜೋಳ, ಗೋಡಂಬಿ, ಸೇಂಗಾ, ಅಕ್ಕಿ, ಮೆಣಸಿನ ಪುಡಿ, ರವಾ, ಮೈದಾ, ಗೋಧಿ ಹಿಟ್ಟು ಮೊದಲಾದ ದಿನ ಬಳಕೆಯ ಆಹಾರ ವಸ್ತುಗಳಲ್ಲಿ ಹಾಯಾಗಿ ಜೀವಿಸುತ್ತದೆ. ಗೋದಾಮಿಗೆ ಸಾಗಿಸುವಾಗ ತಂದ ಧಾನ್ಯ, ಕಾಳುಕಡ್ಡಿಗಳು ಈ ಕೀಟ ಬಾಧೆಯಿಂದ ಮುಕ್ತವಾಗಿವೆ ಅನಿಸಿದರೂ ಅದರಲ್ಲಿ ಸಾವಿರಾರು ತತ್ತಿಗಳು ಆಗಲೇ ಇದ್ದಿರಬಹುದು. ವರ್ತುಲಾಕಾರವಾಗಿ ಬಿಡಿಬಿಡಿಯಾಗಿರುವ ಬಿಳಿ ತತ್ತಿಗಳು ಜನಸಾಮಾನ್ಯರ ಕಣ್ಣಿಗೆ ಕಾಣದಷ್ಟು ಸಣ್ಣವಿರುತ್ತವೆ.

ಐದು ಚೌರಸ್ ಇಂಚಿನಲ್ಲಿ ಇಲ್ಲವೇ ಒಂದು ಘನ ಸೆಂ. ಮೀ. ಸ್ಥಳದಲ್ಲಿ ಇಪ್ಪತ್ತು ಸಾವಿರಕ್ಕೂ ಹೆಚ್ಚು ತತ್ತಿಗಳಿರುತ್ತವೆಂದರೆ ಅವುಗಳ ಕ್ಷುದ್ರತೆಯು ಕಲ್ಪನೆ ಬರುವಂತಿದೆ. ಪೇಟೆಯಲ್ಲಿ ಕೊಂಡು ತಂದ ಧಾನ್ಯಗಳನ್ನು ಸಣ್ಣ ಛಿದ್ರಗಳಿದ್ದ ಜರಡಿಯಿಂದ ಸೋಸಿದರೆ ತತ್ತಿಗಳು ಕೆಳಕ್ಕೆ ಉರುಳುವವು.

ಸ್ವಲ್ಪ ಹಳೆಯ ಧಾನ್ಯಗಳನ್ನು ಕೊಂಡು ತಂದರೆ ಅದರಲ್ಲಿ ಕಾಳುಗಳನ್ನು ಒಟ್ಟಾಗಿ ಅಂಟಿಸಿದಂತೆ ಅನಿಸುವ ಗೊಂಚಲುಗಳು ಕಂಡುಬರುವವು. ಸರ್ವ ಸಾಧಾರಣವಾಗಿ ಗೃಹಿಣಿಯರು ಇದನ್ನು ಕೋಳಿಗೋ, ದನಕ್ಕೋ ಹಾಕು ವರು. ಇಲ್ಲವೇ ಹೊರಗೆ ಒಗೆದು ಬಿಡುವರು. ಇದು ಅಜಾಗರೂಕತೆಯ ಮಾತು. ಏಕೆಂದರೆ ಹೆಚ್ಚು ಒಗೆದ ಗೊಂಚಲಿನಿಂದ ಹುಳ ಕೂಡಲೇ ಹೊರ ಬಂದು ಗೋದಾಮಿನೊಡನೆ ಧಾವಿಸುವುದು. ಆದ್ದರಿಂದ ಹೀಗಾಗದಂತೆ ಅವುಗಳನ್ನು ಒಂದು ಡಬ್ಬಿಯಲ್ಲಿ ಶೇಖರಿಸಿ ನಾಶ ಮಾಡಿದರೆ ಹಾನಿ ಕಡಿಮೆ ಯಾದಿತು. ಹುಳ ತನ್ನ ಎಂಜಲಿನಿಂದ ರೇಶಿಮೆಯಷ್ಟು ತೆಳ್ಳಗೆ ನುಣುಪಾದ ಎಳೆಗಳನ್ನು ಹೊರಡಿಸಿ ಹಲವಾರು ಕಾಳುಗಳ ಮಧ್ಯದಲ್ಲಿ ತನ್ನ ವಾಸಕ್ಕಾಗಿ ಕೊಳವೆಯೊಂದನ್ನು ನಿರ್ಮಿಸಿಕೊಳ್ಳುವುದು. ಈ ಕೊಳವೆಯಲ್ಲಿ ತಾನು ಅಡಗಿದ್ದು ಬಾಯಿಯನ್ನಷ್ಟೇ ಹೊರಗೆ ಹಾಕಿ ಎಂತಹ ಗಟ್ಟಿ ಕಾಳನ್ನಾದರೂ ಕಚ್ಚಿ ಕಚ್ಚಿ ತಿನ್ನುವುದು. ಸಂಗ್ರಹದಲ್ಲಿದ್ದ ಕಾಳು ಕಡ್ಡಿ ಕಡಿದು ತಿಂದದ್ದನ್ನು ಕಂಡರೆ ಈ ದೆವ್ವ ಅದರಲ್ಲಿ ಹೊಕ್ಕಿಕೊಂಡಿದೆ ಎಂದು ತಿಳಿದು ನಿವಾರಣೋ ಪಾಯವನ್ನು ಕೈಕೊಳ್ಳಬೇಕು. ಕಾಳುಗಳ ಚಲನವಲನವಾದರೂ ಈ ಹುಳ ಗೂಡಿನಲ್ಲಿ ಸ್ತಬ್ಧವಾಗಿರುವದರಿಂದ ಕಾಳನ್ನು ಹೊರಗೆ ತೆಗೆದಾಗ ಅವುಗಳ ದರ್ಶನ ಆಗದೇ ಇರಬಹುದು. ತಾನು ಬೆಳೆಯುತ್ತ ಹೋದಂತೆ ಹೆಚ್ಚು ಹೆಚ್ಚು ಕಾಳು ತಿಂದು ಉಳಿದ ಚೂರುಪಾರುಗಳೊಡನೆ ತನ್ನ ಮಲವನ್ನೂ ಸೇರಿಸುವುದರಿಂದ ಅಂತಹ ಜಿನಸಿಗೆ ಸಹಿಸಲಾರದ ವಾಸನೆ ಬಡಿಯುತ್ತದೆ.

ಕಣ್ಣಿಗೆ ಕಾಣದೇ ಧ್ವಂಸ ಕಾರ್ಯದಲ್ಲಿ ಇಲಿಗಳನ್ನೂ ಮೀರಿಸುವ ಈ ಜೀವಿಯು ಎರಡು ಸೆಂಟಿಮೀಟರಿಗಿಂತಲೂ ಉದ್ದ ಇರುವದಿಲ್ಲ. ಶಿರ, ದವಡೆಗಳು ನಾಶೀಪುಡಿ ಬಣ್ಣದ್ದು ಇದ್ದರೆ ಮೈಯೆಲ್ಲ ಬಿಳಿ ಬಣ್ಣದ್ದು. ಶರೀರದ ಮುಂಭಾಗದಲ್ಲಿ ಮೂರು ಜೋಡಿ ಕಾಲುಗಳಿದ್ದರೆ ಹಿಂಭಾಗದಲ್ಲಿ ಐದು ಜೋಡಿ ಕಾಲುಗಳು ಇರುತ್ತವೆ.

ತನ್ನ ಗೂಡಿನಲ್ಲಿದ್ದಾಗ ತೀರ ಕಡಿಮೆ ಚಲಿಸಿದರೂ ಹೊರಗೆ ತೆಗೆದಾಗ ಅವಿತುಕೊಳ್ಳಲು ಸ್ಥಳ ಹುಡುಕುತ್ತ ವೇಗವಾಗಿ ಹೋಗುವುದು. ಅದಕ್ಕೆ ಬೆಳಕು ಕಂಡರಾಗದು. ಹೀಗಾಗಿ ಒಮ್ಮೆ ಕಾಳಿನ ಆಶ್ರಯ ದೊರೆಯಿತೆಂದರೆ ಬೇಗನೆ ರಾಶಿಯೊಳಗೆ ಸೇರಿಕೊಂಡುಬಿಡುವುದು. ಉಳಿದ ಕೀಟಗಳು ನೀರು ಕುಡಿಯದಿದ್ದರೂ ಅವುಗಳು ಸೇವಿಸುವ ಆಹಾರದಲ್ಲಿ ಅನೇಕ ದ್ರವ್ಯಗಳಿರುತ್ತವೆ. ಆದರೆ ಈ ಅಕ್ಕಿ ಕೀಟ ತೀರ ಒಣ ಕಾಳುಗಳ ಮೇಲೇ ಜೀವಿಸಬಲ್ಲದು. ಇದಕ್ಕೆ ಕಾರಣವೇಂದರೆ ರಾಸಾಯನಿಕ ಕ್ರಿಯೆಯ ಮೂಲಕ ಇದರ ಶರೀರದಲ್ಲಿ ನೀರು ಉಂಟಾಗುವುದು. ಬೆಚ್ಚಗಿನ ಗೋದಾಮು, ಬೇಕಾದಷ್ಟು ಆಹಾರ, ಜೀವನಕ್ಕೆ ಯಾವ ಗಂಡಾಂತರವೂ ಇಲ್ಲದಂತಹ ಸುರಕ್ಷಿತತೆ ಸಿಗುವದರಿಂದ ಈ ಕೀಟಗಳು ಬಹುಬೇಗ ಬೆಳೆಯುವವು. ಜೋಡಿ ಸಂಯುಕ್ತ ಕಣ್ಣುಗಳು, ಒಂದು ಜೋಡಿ ಸ್ಪರ್ಶ ಮೀಸೆಗಳು, ಹಾರಲು ಎರಡು ಜೋಡಿ ರೆಕ್ಕೆಗಳು, ರೂಪುಗೊಳ್ಳುವವು. ಯಾರಾದರೂ ರೇಶಿಮೆಯ ಕೋಳವೆಯಲ್ಲಿ ಇರುವ ಈ ಕೀಟವನ್ನು ಮುಟ್ಟಿದರೆ ಅದು ತನ್ನ ಹಿಂಬದಿಯನ್ನು ಗಡಿಯಾರದ ಮುಳ್ಳಿನಂತೆ ನಾಲ್ಕೈದು ಬಾರಿ ತಿರುವಿ ಸುಮ್ಮನಾಗುವದು. ಹೊಸದಾಗಿ ಈ ಅವಸ್ಥೆಯಲ್ಲಿ ಸೇರಿದಾಗ ಕೀಟ ಹಳದಿಯಾಗಿದ್ದರೂ ಕಾಲಕ್ರಮೇಣ ಪ್ರಾಣವಾಯುವಿನೊಡನೆ ಸಂಪರ್ಕ ಬಂದಾಗ ಅದು ಅಚ್ಚ ನಾಶೀಪುಡಿ ವರ್ಣಕ್ಕೆ ಪರಿವರ್ತನೆ ಹೊಂದುವದು. ಕೆಲವೇ ದಿನಗಳಲ್ಲಿ ತನ್ನ ಪರೆಯನ್ನು ತ್ಯಜಿಸಿ ಪತಂಗವಾಗಿ ಹೊರಗೆ ಹಾರುವದು. ಡಬ್ಬಿ, ಚೀಲ, ಗೋದಾಮಿನ ಬಾಗಿಲುಗಳನ್ನು ತೆಗೆದಾಗ ಇಂತಹ ಪತಂಗಗಳು ಹಾರಾಡುತ್ತಿರುವದನ್ನು ಪ್ರತಿಯೊಬ್ಬ ಗೃಹಿಣಿಯೂ ನೋಡಿರಲೇಬೇಕು. ಈ ಪತಂಗಕ್ಕೆ ಕತ್ತಲೆ ಸೇರದು. ಅಂತೆಯೇ ಬೆಳಕಿಗೆ ಬರಲು ಆತುರತೆಯಿಂದ ಕಾಯುತ್ತ ಸುಸಂಧಿ ಸಿಕ್ಕಾಗ ಹೊರಬಂದು ತನ್ನ ಪ್ರಿಯೆಯನ್ನು ಆರಿಸಿ, ಒಂದಾಗಿ ಜಗತ್ತನ್ನು ಮರೆಯುವುದು. ಹೀಗೆ ಕ್ರೀಡೆಯಲ್ಲಿ ಮೈಮರೆತಿರುವ ಪತಂಗ ದಂಪತಿಗಳು ಗೋದಾಮಿನ ತುಂಬ ಕಂಡು ಬರುವವು. ಇಂಥ ಜೋಡಿಗಳು ಹಲ್ಲಿ, ಕಪ್ಪೆಗಳಂತಹ ಕೀಟಭಕ್ಷಕ ವೈರಿಗಳಿಗೆ ಆಹುತಿಯಾಗುವವು. ಪ್ರೌಢ ಜೀವನದಲ್ಲಿನ್ನು ಅವು ಯಾವ ಆಹಾರವನ್ನೂ ಸೇವಿಸುವುದಿಲ್ಲ. ಗಂಡು ಇನ್ನೊಂದು ಹೆಣ್ಣನ್ನು ಹುಡುಕಿಕೊಂಡು ಹೋದರೆ,

ಹೆಣ್ಣು ಕಾಳು ಕಡಿಗಳ ಸಂಗ್ರಹವನ್ನು ಹುಡುಕಿಕೊಂಡು ಹೋಗುವುದು. ಅದಾಗಲೇ ತಮಗೆ ಆಹುತಿಯಾಗಿದ್ದ ಕಾಳುಕಡ್ಡಿಗಳನ್ನು ಬಿಟ್ಟು ಹೊಸ ಕಾಳು ಗಳನ್ನು ಹುಡುಕುವುದು. ಅವು ಸಿಗದಿದ್ದರೆ ತಮ್ಮ 'ಪಿತ್ರಾರ್ಜಿತ' ವಾಸ ಸ್ಥಾನಕ್ಕೆ ಧಾವಿಸುವವು. ಒಂದೊಮ್ಮೆ ಡಬ್ಬಿ, ಚೀಲಗಳಿಂದ ಹೊರಗೆ ಹಾಕಲು ಅವಕಾಶ ಸಿಗದಿದ್ದರೆ ತಮ್ಮ ಭಾವಿ ಪೀಳಿಗೆಯನ್ನೆಲ್ಲ ಅಲ್ಲಿಯೇ ಬಿಟ್ಟು ಸರ್ಗಸ್ಥವಾಗುವವು. ಪತಂಗಗಳಿಗೆ ಶೇ. 5ರಷ್ಟು ಸಕ್ಕರೆಯು ಇಲ್ಲವೇ ಮಧುವಿನ ನೀರಿನ ಆಹಾರ ಕೊಟ್ಟರೆ ಅವುಗಳ ಆಯುಷ್ಯ ಹೆಚ್ಚುವದೆಂದೂ ಹೆಚ್ಚಿನ ಪ್ರೋಟೀನುಗಳನ್ನು ಕೊಟ್ಟರೆ ಹೆಚ್ಚು ತತ್ತಿಗಳನ್ನು ಇಡುವದೆಂದೂ ವಿಜ್ಞಾನಿಗಳು ಕಂಡು ಹಿಡಿದಿದ್ದಾರೆ. ಅನೇಕ ಪ್ರಯೋಗಳಿಗಾಗಿ ಈ ಕೀಟ ಗಳನ್ನು ಉಪಯೋಗಿಸುವದುಂಟು. ಅವುಗಳು ಹೆಚ್ಚಿನ ಪ್ರಮಾಣದಲ್ಲಿ ಬೇಕಾದಾಗ, ಪೇಟೆಯಿಂದ ಮಾನವನ ಆಹಾರಕ್ಕೆ ಅಯೋಗ್ಯವಾದ ಕಾಳು ಗಳನ್ನು ಕಡಿಮೆ ಬೆಲೆಗೆ ತಂದು, ಅದನ್ನು ಡಬ್ಬಿ, ಪೆಟ್ಟಿಗೆಯಲ್ಲಿ ಹಾಕಿ, ಹತ್ತು ಗಂಡು ಹೆಣ್ಣುಗನ್ನು ಜೋಡಿ ಬಿಟ್ಟರೆ ಸಾಕು. ಕೇವಲ ಒಂದೇ ತಿಂಗಳಿನಲ್ಲಿ ಈ ದೈತ್ಯ ಸಂತಾನ ಸಿದ್ಧವಾಗಿಬಿಡುತ್ತದೆ.

ಧಾನ್ಯಗಳನ್ನು ಈ ಕೀಟದಿಂದ ರಕ್ಷಿಸಲು ದೇಶದ ವಿವಿಧ ಭಾಗಗಳಲ್ಲಿ ವಿವಿಧ ಉಪಾಯಗಳನ್ನು ಮಾಡಿದ್ದಾರೆ. ಕೆಲವರು ಮಣ್ಣಿನ ಹವೆಯಾಡದ ಗೋದಾಮುಗಳನ್ನು ಪ್ರತ್ಯೇಕವಾಗಿ ನಿರ್ಮಿಸಿಕೊಂಡರೆ ಇನ್ನು ಕೆಲವರು ಒಣ ಹುಲ್ಲಿನಲ್ಲಿ ಕಾಳು ಕಡ್ಡಿ ಹಾಕಿ ಹಗ್ಗದಿಂದ ಮೂಟೆ ಕಟ್ಟುತ್ತಾರೆ. ಬೂದಿ, ಮಳಲುಗಳೊಡನೆ ಬೆರೆಸಿ ಇಡುವವರೂ ಇದ್ದಾರೆ. ಸಂಗ್ರಹದ ಪೂರ್ವದಲ್ಲಿ ಮುಖ್ಯವಾಗಿ ನೆನಪಿಡಬೇಕಾದ ಸಂಗತಿಗಳೆಂದರೆ–ಗೋದಾಮಿ ನಲ್ಲಿ ಸಂಗ್ರಹಿಸುವ ಉಪಕರಣಗಳಲ್ಲಿ ಹಿಂದಿನ ತತ್ತಿ, ಮರಿಹುಳ ಇರದಂತೆ ಜಾಗ್ರತೆ ವಹಿಸಬೇಕು. ಒಂದೆರಡು ದಿನ ಬಿಸಿಲಿಗೆ ಇಟ್ಟರೆ ಅವುಗಳೆಲ್ಲ ನಾಶ ಹೊಂದುವವು. ಪೇಟೆಯಿಂದಾಗಲಿ, ಹೊಲದಿಂದಾಗಲೀ ತಂದ ಧಾನ್ಯಗಳು ಕೀಟಗಳಿಂದ ಮುಕ್ತವಾಗಿರಬೇಕು. ಹೊಸ ಕಾಳುಗಳನ್ನು ಹಳೆಯದರೊಂ ದಿಗೆ ಮಿಶ್ರಣ ಮಾಡದೇ ಅವುಗಳನ್ನು ಆದಷ್ಟು ದೂರ ಇಡಬೇಕು. ಗರ್ಭಿಣಿ ಪತಂಗಕ್ಕೆ ಒಳ ಪ್ರವೇಶಿಸಲು ಸಾಧ್ಯವಾಗದಷ್ಟು ಅವನ್ನು ಭದ್ರವಾಗಿ ಇಡ

ಬೇಕು. ಸಂಗ್ರಹದ ಸ್ಥಳದಲ್ಲಿ ಸಾಕಷ್ಟು ಬೆಳಕು, ಹವೆ ಆಡುತ್ತಿರಬೇಕು. ಕಾಳು–ಕಡ್ಡಿಗಳಲ್ಲಿ ಅಥವಾ ಮನೆಗಳಲ್ಲಿ ಒಂದೆರಡು ಅಕ್ಕಿ ಪತಂಗಗಳು ಕಾಣಿಸಿಕೊಂಡ ಕೂಡಲೇ ಅಲಕ್ಷ್ಯ ಮಾಡದೇ ಎಲ್ಲ ಸಂಗ್ರಹಗಳನ್ನೂ ಈ ಕೀಟಕ್ಕಾಗಿ ಪರಿಶೀಲಿಸಿದರೆ ಎಷ್ಟೋ ಹಾನಿಯನ್ನು ಕಡಿಮೆ ಮಾಡಬಹುದು. ಅಂತಹ ಸಂಗ್ರಹವನ್ನು ಬಿಸಿಲಿಗೆ ಹಾಕಿದರೆ ಹೆಚ್ಚಿನ ಕೀಟಗಳು ನಾಶ ಹೊಂದುವವು.

ಸಂಗ್ರಹ ಹೆಚ್ಚಿದ್ದು ಈ ಕೀಟಗಳು ಹೆಚ್ಚುತ್ತಿದ್ದರೆ ಕೀಟನಾಶಕ ರಸಾಯನವನ್ನು ಉಪಯೋಗಿಸಬಹುದು. ಆದರೆ ಧಾನ್ಯಗಳೊಂದಿಗೆ ಈ ವಿಷಕಾರಿ ರಸಾಯನಗಳನ್ನು ಎಂದೂ ಮಿಶ್ರಣ ಮಾಡಬಾರದು. ಹಾಗೆ ಮಾಡಿದ್ದಾದರೆ ತಗಣಿ ಕೊಲ್ಲಲು ಮನೆಗೆ ಬೆಂಕಿಯಿಟ್ಟಂತೆ ಆಗುವದು. ಕೀಟಗಳನ್ನು ಕೊಂದ ವಿಷ ಮನುಷ್ಯರಿಗೂ ಪ್ರಾಣಘಾತವಾಗಬಹುದು. ಒಂದು ಚೌರಸ್ ಫೂಟಿಗೆ ಒಂದು ಔಂಸಿನಂತೆ ಕಾರ್ಬನ್–ಬಾಯ್-ಸಲ್ಫಾಯಿಟ್‌ನ್ನು ಹತ್ತಿಯಲ್ಲಿ ಅದ್ದಿ ಒಂದು ದಿನ ಗೋದಾಮಿ ಬಾಗಿಲು ಮುಂಚ್ಚಿ ಇಟ್ಟರೆ ಬಹುಸಂಖ್ಯಾತ ಕೀಟಗಳು ನಾಶ ಹೊಂದುವವು. ಅತೀ ತಣ್ಣಗಿನ ಇಲ್ಲವೆ ಬಿಸಿಯಾದ ಹವೆಯನ್ನು ಕಾಳುಗಳೊಂದಿಗೆ ಹಾಯಿಸಿದರೂ ಇದೇ ರೀತಿಯ ಫಲಿತಾಂಶ ದೊರೆಯುವದೆಂದು ಕಂಡುಹಿಡಿಯಲಾಗಿದ.

# 8. ಸಸ್ಯ ತಗಣಿ : ಎಫಿಡ

ಹೂದೋಟ, ಹೊಲಗಳಲ್ಲಿರುವ ಮರ, ಗಿಡ, ಬಳ್ಳಿಗಳನ್ನು ಪರೀಕ್ಷಿಸಿದರೆ ಅವುಗಳಲ್ಲಿಯ ಕೆಲವು ಬಾಡಿದಂತೆಯೂ, ಕೆಲವು ಹಳದಿ ವರ್ಣಕ್ಕೆ ಪರಿವರ್ತಿಸಿದಂತೆಯೂ ಇನ್ನೂ ಕೆಲವು ಒಣಗಲು ಬಂದದ್ದು ಗೋಚರಿಸುವದು. ಇಂತಹ ಎಲೆಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿದರೆ ಅಲ್ಲಿ ಒಂದು ಕೀಟ ಸಮೂಹವೇ ಗೋಚರಿಸದೇ ಇರದು. ಇವೆ ಎಫಿಡ ಎಂದು ನಾಮಧರಿಸಿದ ಸಸ್ಯ ತಗಣಿಗಳು. ಅವು ಕಪ್ಪು, ಹಳದಿ, ಇಲ್ಲವೇ ಹಸಿರು ಬಣ್ಣ ತಳೆಯುವುದು ವಾಡಿಕೆ. ಪರ್ಣಗಳಂತೆ ದಂಟು, ಬೊಡ್ಡೆ ಮತ್ತು ಬೇರುಗಳ ಮೇಲೆಯೂ ದಾಳಿ ಮಾಡುವ ಎಫಿಡಗಳಿವೆ. ಒಂದೇ ಎಲೆಯ ಮೇಲೆ ನೂರಾರು ಜೀವಿಗಳು ದೊಡ್ಡ ಕುಟುಂಬ ಕಟ್ಟಿಕೊಂಡು ಬೀಡುಬಿಟ್ಟಿರುತ್ತವೆ. ಹೀಗಾಗಿ ಅತಿ ಚಿಕ್ಕ ಮರಿಯಿಂದ ಪ್ರೌಢ ಕೀಟಗಳವರೆಗೆ ಎಲ್ಲ ಪ್ರಭೇದಗಳನ್ನು ಒಂದೇ ಸ್ಥಳದಲ್ಲಿ ಕಾಣಬಹುದಾಗಿದೆ. ಮಕ್ಕಳು ಹುಟ್ಟಿನಿಂದಲೆ ತಂದೆತಾಯಿಗಳನ್ನು ಹೋಲುವುದರಿಂದ ಅವುಗಳ ಮರಿಗಳನ್ನು ಪತ್ತೆ ಹಚ್ಚುವದು ಉಳಿದ ಕೀಟಗಳಂತೆ ಬಿಕ್ಕಟ್ಟಿನ ಮಾತಾಗಿಲ್ಲ. ಅವುಗಳಲ್ಲಿಯ ಬಹು ಸಂಖ್ಯಾತವುಗಳಿಗೆ ರೆಕ್ಕೆಗಳಿಲ್ಲವಾದರೂ ಕೆಲವೊಂದಕ್ಕೆ ಎರಡು ಪಾರದರ್ಶಕ ರೆಕ್ಕೆಗಳಿರುತ್ತವೆ. ಆದ್ದರಿಂದ ಅವುಗಳಿಗೆ ಸುಲಭವಾಗಿ ಹಾರಿ ಬೇರೆ ಸಂಸಾರ ಹೂಡಲು ಬರುವಂತಿದೆ.

ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಎಫಿಡವು ಬಹುಮಟ್ಟಿಗೆ ತಗಣಿಯನ್ನು ಹೋಲುತ್ತದೆ. ಉದ್ದವಾದ ಸ್ಪರ್ಶವಿಾಸೆ, ಸಂಯುಕ್ತ ಕಣ್ಣುಗಳು, ಉದ್ದಕಾಲುಗಳು, ಕಿರಿದಾದ ನಡವು, ಉಬ್ಬಿದ ಹೊಟ್ಟೆ, ಜೋಡಿ ಮೇಣದ ಕೊಳವೆಗಳು ಮತ್ತು ಹಿಂಬದಿಗೆ ಚೂಪಾದ ತತ್ತಿಯನ್ನಿಡುವ ಅವಯವ, ಉಳಿದ ತಗಣೆಗಳಂತೆ ಇದರ ಬಾಯಿ ಉದ್ದ ಕೊಳವೆಯಂತೆ ಇದ್ದು ಮೂರು ಸಂದುಗಳಿಂದ ಕೂಡಿದ್ದಾಗಿದೆ. ಅದರ ಒಳಗೆ ಸೂಜಿಯನ್ನು ಹೋಲುವ ಹರಿತವಾದ ಅವಯವಗಳಿಂದ ಸಸ್ಯದ ಶರೀರವನ್ನು ಗಾಯಗೊಳಿಸಿ ಅದರ ರಸವನ್ನು ಹೀರಿ ಬದುಕುತ್ತವೆ. ಹೆಚ್ಚಿನ ರೆಕ್ಕೆಗಳಿಗೆ ಎಫಿಡಗಳಿಗೆ ರೆಕ್ಕೆಗಳು ಇರುವುದೇ ಇಲ್ಲ. ತಮ್ಮ ದ್ರವ್ಯಗಳನ್ನು ಕಳೆದುಕೊಂಡ ವರ್ಣಗಳು ಶಕ್ತಿಹೀನವಾಗುವವಲ್ಲದೇ ಎಫಿಡವು ನಿರ್ಮಿಸಿದ ಗಾಯಗಳೊಗಗಿಂದ ಎಷ್ಟೋ ಅಪಾಯಕಾರಿ ಜಂತುಗಳು ಸಸ್ಯದ ಒಳಗೆ ಸೇರಿ ಅನೇಕ ತರದ ರೋಗಗಳನ್ನು ಉಂಟು ಮಾಡುತ್ತವೆ. ಕೆಲವೊಮ್ಮೆ ಹೊಲದಲ್ಲಿಯ ಎಲ್ಲ ಗಿಡಗಳಿಗೂ ಹಳದಿ ವರ್ಣಕ್ಕೆ ಪರಿವರ್ತನೆಹೊಂದಿ ಇಂತಹ ಜಂತುಗಳಿಂದಲೇ ಒಣದಿ ಹೋಗುವವು. ಎಫಿಡಗಳು ಇಂತಹವೇ ಗಿಡಗಳ ಮೇಲೆ ವಾಸಿಸುವವು ಎನ್ನಲು ಬರುವದಿಲ್ಲ. ಕಬ್ಬು, ಬಟಾಟೆ, ಗೆಣಸು, ಅವರೆ, ಹೆಸರು,ಉದ್ದು, ಜೋಳ, ಗೋದಿ, ಕ್ಯಾಬಿಜ ಫ್ಲಾವರ, ಸೇಬು, ಸಾಸಿವೆ, ಮೂಲಂಗಿ, ಗುಲಾಬಿ, ಕಾಯಿಪಲ್ಲೆ ಧಾನ್ಯ ಹಣ್ಣು ಹಂಪಲುಗಳ ಗಿಡದರಸ ಹೀರಿ ಜೀವಿಸುತ್ತವೆ.

ಎಫಿಡ ತೀರ ನಾಜೂಕಾದ ಕೀಟ. ಒಂದು ದೊಡ್ಡ ಉಸಿರು ಬಿಟ್ಟರೆ ಹತ್ತಾರು ಜೀವಿಗಳು ಹಾರಿ ಬೀಳುವವು. ಹೀಗಿದ್ದರೂ ಅವು ಅಷ್ಟೊಂದು ವಿನಾಶಕ ಏಕೆ ಆಗಿವೆ ಎಂದು ಅರಿಯಲು ಅವುಗಳ ಜೀವನ ಚರಿತ್ರ ಅಭ್ಯಸಿಸಿದರೆ ಅದರ ಅತ್ಯಧಿಕ ಸಂತತಿ ನಿರ್ಮಾಣವೆ ಅದರ ಯಶಸ್ಸಿಗೆ ಕಾರಣ ಎಂದು ತಿಳಿಯದೇ ಇರದು. ಇವುಗಳಲ್ಲಿ ಹೆಣ್ಣು-ಗಂಡು ಭೇದ ಮಾಡುವದು ಅತಿ ಸುಲಭ. ಹೆಚ್ಚಾದ ಮೊಟ್ಟೆಗಳನ್ನು ಹೊತ್ತು ಹೆಣ್ಣು ಕೀಟದ ಹೊಟ್ಟೆ ಅತಿಯಾಗಿ ಉಬ್ಬಿರುತ್ತದೆ. ಅಲ್ಲದೇ ಗಂಡು ಉದ್ದಳತೆಯಲ್ಲಿ ಹೆಣ್ಣು ಕೀಟಕ್ಕಿಂತ ಕಿರಿದು. ಇಂಥ ಒಂದು ಜೋಡಿಯನ್ನು ಕೀಟ ಬಾಧೆರಹಿತ ಗಿಡದ ಮೇಲೆ

ಬಿಟ್ಟರೆ ದಿನಕ್ಕೆ ೧೫-೨೦ ಮಕ್ಕಳನ್ನು ಹಡೆಯುತ್ತದೆ. ಒಂದೇ ವಾರದಲ್ಲಿ ಗಿಡವನ್ನು ತನ್ನ ಸಂತತಿಯಿಂದ ತುಂಬಿಬಿಡುವದು. ಈ ಮರಿಗಳೂ ಬಹು ಬೇಗ ಪ್ರೌಢಾವಸ್ಥೆಯನ್ನು ಪಡೆಯುವದರಿಂದ ಅವುಗಳೂ ತಾಯಿಯ ಸಂಗಡ ಸಂತತಿ ನಿರ್ಮಾಣದಲ್ಲಿ ತೊಡಗುವವು. ಗಂಡಿಲ್ಲದೇ ಮಕ್ಕಳನ್ನು ಹೆರುವ ಅದ್ಭುತ ವರದಾನ ಈ ಕೀಟಕ್ಕೆ ಇದ್ದುದರಿಂದ ಕೆಲವೊಮ್ಮೆ ಬರೇ ಹೆಣ್ಣಿಗೆ ಜನ್ಮಕೊಟ್ಟು ಕೀಟಸಂಖ್ಯೆಯನ್ನು ಬಹುಬೇಗ ಬೆಳೆಸಿಕೊಳ್ಳುವದು. ಪಕ್ಕ ಗಳಿಂದ ಗಂಡು ಹೆಣ್ಣು ಹುಟ್ಟಿದಾಗ ಅವು ಕೂಡಿ ಹಾರಿಹೋಗಿ ಬೇರೊಂದು ಸಂಸಾರ ಪ್ರಾರಂಭಿಸುವವು. ಅಬ್ಬರದಿಂದ ಬೀಸುವ ಮಾರುತನು ಈ ಪುಟ್ಟ ಜೀವಿಗಳನ್ನು ಮೈಲುಗಳಾಚೆ ಹೊತ್ತುಕೊಂಡು ಹೋಗುವದೂ ಉಂಟು. ಆದ್ದರಿಂದ ಈ ಕೀಟ ಒಮ್ಮೆ ಒಂದು ಹೊಲದಲ್ಲಿ ಸೇರಿಕೊಂಡಿತೆಂದರೆ ಸುಲಭ ವಾಗಿ ಬಿಟ್ಟು ಹೋಗದು. ಐದಾರು ತಿಂಗಳುಗಳಲ್ಲಿ ಮೂವತ್ತು-ನಲವತ್ತು ತಲೆಮಾರುಗಳನ್ನು ನಿರ್ಮಿಸುವ ಶಕ್ತಿ ಈ ಕೀಟಕ್ಕಿದೆ.

ಎಫಿಡಗಳು ಹೊಟ್ಟೆಬಾಕ ಕೀಟಗಳು. ಹೀಗಾಗಿ ತಮಗೆ ಜೀರ್ಣಿಸಲು ಸಾಧ್ಯವಾಗುವುದಕ್ಕಿಂತ ಹೆಚ್ಚು ಸಸ್ಯದ್ರವ್ಯಗಳನ್ನು ಹೀರಿಕೊಂಡು ಬಿಡುವವು. ಹೀಗೆ ಹೆಚ್ಚು ಸಂಗ್ರಹಿಸಿದ ರಸದೊಂದಿಗೆ ಶರೀರಕ್ಕೆ ಬೇಕಾದ್ದಕ್ಕಿಂತ ಹೆಚ್ಚಾಗಿ ಉಳಿದ ಸಕ್ಕರೆಯನ್ನು ಕೂಡಿಸಿ ಮಲರೂಪದಲ್ಲಿ ಹೊರಗೆಡಹುವವು. ಈ ಸಿಹಿ ದ್ರವ್ಯಕ್ಕಾಗಿ ಇರುವೆಗಳು ಹಗಲಿರುಳು ಹುಡುಕುತ್ತಿರುವವು. ಕೆಲವು ಇರುವೆಗಳಂತೂ ಎಫಿಡದ ಮರಿಗಳನ್ನು ತಮ್ಮ ದವಡೆಗಳಲ್ಲಿ ಹೊತ್ತು ಗೂಡಿಗೆ ಸಾಗಿಸುವವು. ಅಲ್ಲಿ ಅವುಗಳಿಗೆ ಎಳೆ ಬೇರಿನ ಆಹಾರ ಒದಗಿಸಿ, ಪ್ರತಿದಿನ ಅವುಗಳು ಹೊರಹಾಕಿದ ಸಿಹಿ ನೀರಿನ ಮೇಲೆ ತಾವು ಜೀವಿಸುವವು. ದ್ದರಿಂದ ಈ ಕೀಟಗಳಿಗೆ ಇರುವೆಗಳ ಗೋವು ಎಂದು ಅನ್ವರ್ಥಕನಾಮ ಬಂದಿದೆ.

ಕೆಲವು ಎಫಿಡಗಳು ಮೈಯಲ್ಲೇ ಉತ್ಪಾದನೆಯಾದ ಮೇಣವನ್ನು ಕೊಳವೆಗಳಿಂದ ಹೊರಗೆ ಹಾಕಿ ತಮ್ಮ ಮೈಗೆ ಸವರಿಕೊಳ್ಳುವವು. ಆದ್ದ ರಿಂದ ಅವು ಬಿಳಿವರ್ಣಕ್ಕೆ ಪರಿವರ್ತನೆ ಹೊಂದುವವು. ಇನ್ನು ಕೆಲವು, ಸಸ್ಯ ಗಳಲ್ಲಿ ಕೋಶಗಳನ್ನು ನಿರ್ಮಿಸಿ ಅವುಗಳಲ್ಲಿ ಯಾವ ವೈರಿಗಳ ಭಯವೂ

ಇಲ್ಲದೇ ಜೀವನ ನಡೆಸುವವು. ಹಲವಾರು ಎಫಿಡಗಳು ಮೊಟ್ಟೆಗಳನ್ನು ಇಟ್ಟರೂ ಕೆಲವೊಂದು ಮರಿಗಳು ಹೊರಗೆ ಬರುವ ತನಕ ಮೊಟ್ಟೆಗಳನ್ನು ತಮ್ಮ ಶರೀರದಲ್ಲೇ ಇಟ್ಟುಕೊಂಡು ಮರಿಗಳಿಗೆ ಜನ್ಮ ಕೊಡುವವು. ತಾಯಿಯ ಉದರದಿಂದ ಬಂದ ಮರಿಗಳು ಒಮ್ಮೆಲೇ ಸಸ್ಯಗಳ ಶೋಷಣೆಯನ್ನು ಪ್ರಾರಂಭಿಸುವವು. ಒಂದು ತಲೆಮಾರಿನಂತೆಯೇ ಇನ್ನೊಂದು ತಲೆಮಾರಿನ ಕೀಟಗಳು ಇರುತ್ತವೆಂದು ಹೇಳಲು ಬರುವದಿಲ್ಲ. ರೂಪದಲ್ಲಿ ವೈವಿಧ್ಯ ಇರುವ ಇಪ್ಪತ್ತು ತಲೆಮಾರುಗಳನ್ನು ನಿರ್ಮಿಸುವ ಎಫಿಡಗಳಿವೆ. ಎಷ್ಟೋ ಸಲ ಇವುಗಳ ಪ್ರಭೇದಗಳನ್ನು ವಿಂಗಡಿಸಿ ಸೂಕ್ಷ್ಮವಾಗಿ ಅಭ್ಯಸಿಸಿದಾಗ ಅವುಗಳೆಲ್ಲ ಒಂದೇ ಜಾತಿಗೆ ಸೇರಿದ್ದು ಕಂಡು ಬರುವದು.

ಆರ್ದ್ರತೆ ಮತ್ತು ಉಷ್ಣತಾಮಾನ ಇದರ ಎಲ್ಲ ಚಟುವಟಿಕೆಗಳನ್ನು ನಿಯಂತ್ರಿಸುತ್ತದೆ. ಕೀಟಗಳ ಚಟುವಟಿಕೆಯಲ್ಲಿ ಸಪ್ಟೆಂಬರದಿಂದ ಮಾರ್ಚ್ ತಿಂಗಳವರೆಗೆ ಪರಿಮಿತಿಗೊಳ್ಳುತ್ತದೆ. ಅನಂತರ ಮೊಟ್ಟೆಗಳನ್ನು ಗಿಡಗಳ ಮೇಲೆ ಇಟ್ಟು ಸಾಯುವವು. ಇವುಗಳಿಂದ ಮರುವರ್ಷದ ಬೆಳೆ ಬೆಳೆಯಲಾರಂಭಿಸಿದ ಕೂಡಲೇ ಮರಿಗಳು ಹೊರಬರುವವು. ಕೆಲವೊಮ್ಮೆ ಒಂದು ಬೆಳೆ ನಾಶವಾಗುತ್ತ ಬಂದಾಗ ಅವು ಇನ್ನೊಂದು ಬೆಳೆಗೆ ಧಾವಿಸುವವು. ಮಳೆಗಾಲದ ಬೆಳೆ ತೀರುತ್ತ ಬಂದಂತೆ ಚಳಿಗಾಲದ ಬೆಳೆಗೆ ಧಾವಿಸುವವು. ನಂತರ ಬೇಸಿಗೆಯ ಬೆಳೆಗೆ, ತನ್ನ ಆಹಾರ ಸಸ್ಯಗಳನ್ನು ಬದಲಿಸುವ ಶಕ್ತಿ ಇರುವದರಿಂದ ಇವು ಹೆಚ್ಚಿನ ವಿನಾಶಕಾರಿ ಎನಿಸಿಕೊಂಡಿವೆ. ಕೆಲವೊಮ್ಮೆ ಅವುಗಳ ಹಾವಳಿಯಿಂದ ಬೆಳೆ ಸಂಪೂರ್ಣ ನಾಶವಾಗುವದುಂಟು.

ಅಸಾಧ್ಯವಾದ ಸಂತತಿ ನಿರ್ಮಾಣ ಶಕ್ತಿ ಇರುವ ಈ ಕೀಟಗಳು ಮಾನವನನ್ನು ಹುಲ್ಲು ತಿಂದು ಬದುಕುವಂತೆ ಮಾಡಬಹುದಾಗಿತ್ತು. ಆದರೆ ಇವುಗಳಿಗೆ ನೂರಾರು ವೈರಿಗಳಿವೆ. ಎಷ್ಟೋ ಕೀಟಗಳು ನೂರಾರು ಎಫಿಡಗಳನ್ನು ತಿಂದು ತೇಗುವವು. ಕೀಟವು ಫಲ ಕೀಟಗಳ ಮರಿಗಳೂ ಅವುಗಳನ್ನು ಭಕ್ಷಿಸುವವು. ಅನೇಕ ಪರಪುಷ್ಟ ಕೀಟಗಳು ತಮ್ಮ ತತ್ತಿಗಳನ್ನು ಅವುಗಳ ಶರೀರದೊಳಗೆ ಸೇರಿಸುವವು. ಅಲ್ಲಿಂದ ಆ ಮರಿಗಳು ಹೊರಗೆ

ಬಂದು ಎಫಿಡಗಳ ಅಂಗಾಂಗಗಳನ್ನು ಭಕ್ಷಿಸಿ ಬೆಳೆದು ಪ್ರೌಢ ಕೀಟವಾಗಿ ಎಫಿಡದ ಶರೀರದಲ್ಲಿ ತೂತೊಂದನ್ನು ನಿರ್ಮಿಸಿ ಹಾರಿ ಹೋಗುವವು. ಇದರಂತೆ ಎಫಿಡಗಳಲ್ಲಿ ರೋಗ ಹರಡಿಕೊಂಡಾಗ ಅವು ಹೇಳ ಹೆಸರಿಲ್ಲದೇ ಮಾಯವಾಗಿ ಹೋಗುವವು.

ಒಕ್ಕಲಿಗರು ಕಣ್ಣಿಗೆ ಕಾಣದ ಈ ದೆವ್ವಕ್ಕಾಗಿ ತಮ್ಮ ಗಿಡಮರಗಳನ್ನು ಆಗಾಗ ಶೋಧಿಸುತ್ತಲೇ ಇರಬೇಕು. ಒಂದೆರಡು ಕಂಡರೂ ಕೂಡಲೇ ನಿವಾರಣೋಪಾಯಗಳನ್ನು ಕೈಕೊಳ್ಳಬೇಕು. ಅವುಗಳು ಆಶ್ರಯ ಪಡೆದ ಪರ್ಣಗಳನ್ನು ನಾಶಪಡಿಸುವುದಲ್ಲದೇ ಉಳಿದ ಕಡೆಗೆ ಅವು ಹಬ್ಬದಂತೆ ಕೂಡಲೇ ನಿವಾರಣೋಪಾಯಗಳನ್ನು ಕೈಕೊಳ್ಳಬೇಕು. ಅವು ಬಹು ದೂರದ ತನಕ ಗಾಳಿಯಲ್ಲಿ ತೇಲಿ ಹೋಗಬಲ್ಲವಾದ್ದರಿಂದ ಯಾರೊಬ್ಬರ ಹೊಲದಲ್ಲಿ ಇವು ಕಾಣಿಸಿಕೊಂಡರೂ ಉಳಿದವರು ಮುಂಜಾಗ್ರತೆ ವಹಿಸಲೇ ಬೇಕು. ಇದಕ್ಕೆ ಎಲ್ಲರ ಸಹಕಾರ ಅವಶ್ಯ. ಎಫಿಡಗಳ ಬಾಧೆ ಹೆಚ್ಚಾದ ಹೊಲಗಳಲ್ಲಿ 1.2% ಬಿ. ಎಚ್. ಸಿ. 0.05% ಮೆಲಥಿಯಾನ್ ಸಿಂಪಡಿಸ ಬೇಕು. ಇಲ್ಲವೇ 5% ಮೆಲಥಿಯಾನ್ ಹುಡಿಯನ್ನು ಪಸರಿಸಬೇಕು. ಇವನ್ನು ಬಳಸಿದ ಎರಡು ವಾರಗಳ ತನಕ ಸಸ್ಯದ ಯಾವುದೇ ಭಾಗವನ್ನು ಮನುಷ್ಯನ ಇಲ್ಲವೇ ಉಳಿದ ಯಾವದೇ ಪ್ರಾಣಿಯು ಆಹಾರಕ್ಕೆ ಬಳಸ ಬಾರದು. 40% ನಿಕೋಟಿನ್ ಸಲ್ಫೇಟನ್ನು ಒಂದು ಭಾಗಕ್ಕೆ 600 ಭಾಗ ನೀರನ್ನು ಕುದಿಸಿ ಸಿಂಪಡಿಸಿದರೂ ಎಫಿಡಗಳು ನಾಶಹೊಂದುವವು.

## 9. ಸುಂದರವಾದರೂ ವಿನಾಶಕಾರಿ ಲಿಲಿಪತಂಗ

ನೀವು ಪುಷ್ಪಪ್ರೇಮಿಗಳೇ? ನಿಮ್ಮ ಹೂದೋಟದಲ್ಲಿ ಎಂದಾದರೂ ಹೂಗಳೊಂದಿಗೆ ಲಿಲಿಗಳನ್ನು ಬೆಳೆಸಿದ್ದೀರಾ? ಲಿಲಿಗಳನ್ನು ಬೆಳೆದವರಿಗೆ ಈ ಲಿಲಿ ಕೀಟದ ಕಾಟ ಗೊತ್ತಿರಲೇ ಬೇಕು. ಕೀಟಾವಸ್ಥೆಯಲ್ಲಿಯೇ ಇವು ಕಪ್ಪು, ಬಿಳಿ, ಕೇಸರಿ ಬಣ್ಣ ಬಳಿದುಕೊಂಡು ದೇವಲೋಕದ ಅಪ್ಸರೆಯಂತೆ ಶೋಭಿಸುತ್ತಿರುತ್ತವೆ. ಆದರೆ ಇವು ಕೈಕೊಳ್ಳುವ ವಿಧ್ವಂಸಕ ಕಾರ್ಯ ನೋಡಿದರೆ ಇವನ್ನು ನಾಶಪಡಿಸುವಷ್ಟು ಸಿಟ್ಟು ಬಾರದೇ ಇರದು. ಉಳಿದೆಲ್ಲ ಪಾತರಗಿತ್ತಿ–ಪತಂಗಗಳಂತೆ ಈ ಪತಂಗವಾದರೂ ಅಂಡಾವಸ್ಥೆಯಿಂದಲೇ ತನ್ನ ಜೀವನವನ್ನು ಪ್ರಾರಂಭಿಸುವುದು. ಲಿಲಿಪ್ರೇಮಿಗಳು ಸುಖ ನಿದ್ರೆಯಲ್ಲಿರುವಾಗ ಗರ್ಭ ಧರಿಸಿದ ಲಿಲಿಪತಂಗ ಹೂದೋಟವನ್ನು ಪ್ರವೇಶಿಸಿ ಗಿಡದಿಂದ ಗಿಡಕ್ಕೆ ಹಾರುತ್ತ, ಎಲೆಯಿಂದ ಎಲೆಗೆ ಜಿಗಿಯುತ್ತ ಅವುಗಳ ಮೇಲೆ ತತ್ತಿ ವೃಷ್ಟಿಯನ್ನೇ ಮಾಡುವುದು. ಇದರ ತತ್ತಿಗಳೆಲ್ಲ ದುಂಡಗಿದ್ದು ಹಳದಿ ಬಣ್ಣದ ಹೊಳಪು ತಾಳಿರುತ್ತವೆ. ಒಂದು ಹೆಣ್ಣು ಪತಂಗ 2–3 ರಾತ್ರಿಗಳಲ್ಲಿ 150ರಿಂದ 250 ತತ್ತಿಗಳನ್ನಿಡುವುದು. ತತ್ತಿಗಳಲ್ಲಿ ಹಲವಾರು ಕೀಟಗಳಂತೆಯೇ ನಾಶವಾಗಿ ಹೋಗುವವು. ಕೆಲವು ಒಣಗುವವು, ಒಳಗಿನ ಜೀವಾಣು ಬೆಳೆಯಲಾರಂಭಿಸಿದ್ದರಿಂದ ತತ್ತಿಗಳು ಕಪ್ಪಾಗುವವು. ನಂತರ ಅವುಗಳಿಂದ ಕಪ್ಪು ಶಿರ ಮತ್ತು ಹಳದಿ ಮೈ ಬಣ್ಣವಿರುವ ಸಣ್ಣ ಸಣ್ಣ ಮರಿ ಹುಳುಗಳು ಹೊರಗೆ ಧಾವಿಸಿ ಬರುವವು. ಇವುಗಳು ಎಲೆಗಳ ಕೆಲ ಭಾಗ

ವನ್ನೆಲ್ಲ ಕಚ್ಚಿ ತಿಂದು ಅದರಿಂದ ನಿರ್ಮಾಣವಾದ ಛಿದ್ರಗಳಲ್ಲಿ ಅಡಗಿ ಕುಳಿತು ಕೊಳ್ಳುವವು. ಇವು ಸೂರ್ಯ ಕಿರಣಗಳಿಗೆ ಅಳುಕಿ ದಿನವಿಡೀ ವಿಶ್ರಾಂತಿ ಪಡೆಯುವವು. ನಿಶಾಚರವಾಗಿ ರಾತ್ರಿಯೆಲ್ಲ ಪರ್ಣಭಕ್ಷಣ ನಡೆಸುವವು. ಎಲೆಗಳನ್ನು ಮೆದ್ದು ದೊಡ್ಡವಾದ ನಂತರ ದಂಟಿನೊಳಗಾಗಲಿ, ಹೂವಿ ನೊಳಗಾಗಲಿ ಅವಿತು ಅವುಗಳನ್ನು ಜಗಿಯುವವು.

ಒಮ್ಮೆ ಪೂರ್ಣ ಬೆಳೆದ ಕೀಟಗಳು ಬಹುಸಂಖ್ಯಾತವಾಗಿ ತಿನ್ನಲಾರಂಭಿ ಸಿದವೆಂದರೆ ದಂಟು, ಎಲೆ, ಮೊಗ್ಗು, ಹೂವುಗಳನ್ನೆಲ್ಲ ನಾಶ ಮಾಡುವವು. ಮುಂದೆ ಒಂದೆರಡು ದಿನಗಳಲ್ಲಿ ಗಿಡ ಪೂರ್ಣವಾಗಿ ನೆಲಸಮವಾಗುವದು. ಅಲ್ಲಿಂದ ಹುಳಗಳೆಲ್ಲ ಸಪರಿವಾರ ಗಂಟುಮೂಟೆ ಕಿತ್ತುಕೊಂಡು ಆ ತಾಣ ಬಿಟ್ಟು ಇನ್ನೊಂದು ಲಿಲಿ ಗಿಡಕ್ಕೆ ದಾಳಿಯಿಡುವವು. ಒಂದು ತೋಟದೊಳ ಗಿನ ಲಿಲಿ ಗಿಡಗಳನ್ನೆಲ್ಲ ಹಾಳುಗೆಡವಿ, ಇನ್ನೊಂದು ತೋಟಕ್ಕೆ ಹೋಗುವವು. ಹೀಗೆ ವಲಸೆ ಹೋಗುವಾಗ ಹೆಚ್ಚಿನ ಹುಳಗಳು ಹಸಿದು, ಬಳಲಿ ಹಾದಿ ಯಲ್ಲಿ ಇತರ ಆಘಾತಗಳಿಗೆ ಬಲಿಯಾದರೂ ಉಳಿದುಕೊಂಡವುಗಳು ತಮ್ಮ ಭಕ್ಷಣ ಕಾರ್ಯವನ್ನು ಮೊದಲಿನಂತೆಯೇ ಯಥಾವತ್ತಾಗಿ ಸಾಗಿಸುವವು. ಒಮ್ಮೆ ಅವುಗಳ ಹಸಿವು ಹಿಂಗಿತೆಂದರೆ ಅವು ತಮ್ಮ ಆಹಾರದ ಸ್ಥಳ ಬಿಟ್ಟು ವಿಶ್ರಾಂತಿಯ ಸ್ಥಳವನ್ನು ಹುಡುಕುತ್ತ ಹೋಗುವವು.

ಈಗ ಅವು ವಿಶ್ರಾಂತಿಗಾಗಿ ಭೂಮಿಯತ್ತ ಧಾವಿಸುವವು. 8–10 ಸೆಂಟಿಮೀಟರಿನಷ್ಟು ನೆಲದೊಳಗೆ ಹೊಕ್ಕು ತಮ್ಮ ದವಡೆಗಳಿಂದ ಸ್ವಲ್ಪಸ್ವಲ್ಪ ಮೆತ್ತಗಿನ ಮಣ್ಣನ್ನು ಅಗೆದು ಅಗೆದು ಮೈತುಂಬ ಬಳಿದುಕೊಳ್ಳುವವು. ಹೀಗೆ ಪ್ರತಿಯೊಂದು ಕೀಟವೂ ತನ್ನ ಸುತ್ತ ಮಣ್ಣು ಮತ್ತು ಎಂಜಲಿನ ಗೋಡೆ ಯನ್ನೇ ನಿರ್ಮಿಸುವದು. ದಣಿದ ಹುಳ ಈ ಆಶ್ರಮದಲ್ಲಿ 2-3 ದಿನ ವಿಶ್ರಾಂತಿ ಪಡೆಯುವದು. ನಂತರ ಅದರ ದೇಹದಲ್ಲಿ ರಾಸಾಯನಿಕ ಕ್ರಿಯೆ ಪ್ರಾರಂಭವಾಗಿ ತನ್ನ ಹೊರಕವಚವನ್ನು ಹೊರಗೆಡವುವದು. ಅದರ ನಿದ್ರಾ ವಸ್ಥೆಯ ಕವಚವು ಉಳಿದ ಪತಂಗಗಳಂತೆಯೇ ಇದ್ದು ತನ್ನ ಆಂತರಿಕ ಬೆಳ ವಣಿಗೆ ಮುಗಿದ ನಂತರ ಅದು ತನ್ನ ಸುತ್ತಲಿನ ಮಣ್ಣಿನ ಗೂಡನ್ನು ಒಡೆದು

ಪ್ರೌಢ ಪತಂಗದ ರೂಪದಲ್ಲಿ ಹೊರಗೆ ಧಾವಿಸುವುದು. ಹೊರಗೆ ಬಂದ ಪತಂಗ 2–3 ತಾಸು ವಿಶ್ರಮಿಸಿ ನಂತರ ಆಹಾರಕ್ಕಾಗಿ ಸಂಶೋಧನೆ ನಡೆಸುವುದು. ಇದರ ಕೀಟಾವಸ್ಥೆ ಇಷ್ಟೊಂದು ಧ್ವಂಸಕವಾಗಿದ್ದರೂ ಪತಂಗ ಮಾತ್ರ ಸಾಧುಪ್ರಾಣಿಯಂತೆ ಹೂವಿಂದ ಹೂವಿಗೆ ಜಿಗಿದು ಕೇವಲ ಮಧುಪವಾಗಿ ಜೀವಿಸುವುದು. ನಂತರ ಜೀವನದ ಸಂಗಾತಿಯನ್ನು ಹುಡುಕಾಡಿ ಸಂತತಿ ನಿರ್ಮಾಣ ಕಾರ್ಯದಲ್ಲಿ ತೊಡಗುವುದು. ಪ್ರೌಢ ಪತಂಗಗಳು 10–12 ದಿವಸ ಜೀವಿಸಿದ್ದು ರಾತ್ರಿಯಲ್ಲಿ ಮಾತ್ರ ಕಾರ್ಯೋನ್ಮುಖವಾಗುವವು. ದಿನದ ಬೆಳಕಿನಲ್ಲಿ ಅವು ಗಿಡಗಂಟಿಗಳಲ್ಲಿ ಅಡಗಿ ವಿಶ್ರಾಂತಿ ಪಡೆಯುವವು.

ಮೊದಲ ಮಳೆಯಾದ ನಂತರ ಲಿಲ್ಲಿ ಗಿಡಗಳು ಜೀವದಳೆದು ಮೇಲಕ್ಕೇಳುತ್ತಿದ್ದಾಗ ಈ ಪತಂಗಗಳೂ ನೆಲದೊಳಗಿನಿಂದ ಹೊರಬರುವವು. ಆಹಾರ ವಿಪುಲವಾಗಿರುವಾಗಲೇ 4-5 ತಲೆಮಾರುಗಳನ್ನು ತಳೆದು ಮಳೆಗಾಲ ಮುಗಿಯುವಾಗ ತಿರುಗಿ ಭೂಗತವಾಗಿ ನಿದ್ರಾವಸ್ಥೆ ತಳೆಯುವವು. ಈ ಸ್ಥಿತಿಯಲ್ಲಿ ಚಳಿಗಾಲ, ಬೇಸಿಗೆ ಕಳೆದು ತಿರುಗಿ ಮಳೆಗಾಲದಲ್ಲಿ ಕಾರ್ಯೋನ್ಮುಖವಾಗುವವು. ಹೂವುಗಳ ಗಿಡಗಳನ್ನು ನೆಡಲು ನೆಲ ಸಮವಾಗಿ ಹಸನು ಮಾಡುವಾಗ ವಿಶ್ರಾಂತಿ ಪಡೆಯುತ್ತಿರುವ ಕೀಟಗಳು ಕೊಲ್ಲಲ್ಪಡುವದುಂಟು. ಆದರೆ ಒಂದು ಪತಂಗ ನೂರಾರು ತತ್ತಿಗಳನ್ನಿಡುವದರಿಂದ ಕೆಲವೇ ಪತಂಗಗಳು ಮಳೆಗಾಲದ ಪೂರ್ವದಲ್ಲಿ ಹೊರಬಂದರೂ ಧ್ವಂಸ ಕಾರ್ಯ ಯಥಾವತ್ತಾಗಿ ನಡೆದಿರುತ್ತದೆ.

ತಮ್ಮ ಮೆಚ್ಚಿನ ಲಿಲಿಗಳನ್ನು ಈ ಕೀಟ ರಾಕ್ಷಸರಿಂದ ಬದುಕಿಸಿಕೊಳ್ಳಬೇಕಾದರೆ, ಲಿಲಿ ಪ್ರೇಮಿಗಳು ಈ ಕೀಟದ ತತ್ತಿಗಳಿಗಾಗಿ ಎಲೆಗಳ ಮೇಲೆ ಕಣ್ಣಿಡಬೇಕು, ಹುಳಗಳ ಸಂಖ್ಯೆ ಮಿತಿಮೀರಿದೆ ಎನಿಸಿದಾಗ ಕ್ರಿಮಿನಾಶಕ ದ್ರವ್ಯಗಳನ್ನು ಸಿಂಪಡಿಸಬೇಕು. ಎಲ್ಲಕ್ಕೂ ಹೆಚ್ಚಿನ ಫಲಕಾರಿಯಾದ ಉಪಾಯವೆಂದರೆ ಲಿಲಿಗಳನ್ನು ಪ್ರತಿ ವರ್ಷ ಬೆಳೆಸದೇ ಒಂದು ವರ್ಷ ಬಿಟ್ಟು ಒಂದು ವರ್ಷ ಬೆಳೆಸಿದರೆ ಈ ಪತಂಗಕ್ಕೆ ಆಹಾರ ಸಿಗದೇ ಅಲ್ಲಿಂದ ಕಾಲು ತೆಗೆಯುವದು ಇಲ್ಲವೇ ನಾಶ ಹೊಂದುವದು. ಆದರೆ ಲಿಲಿ ಪ್ರೇಮಿಗಳಿಗೆ ಪ್ರತಿ ವರ್ಷ ಅದರ ಕೋಮಲ ಸಾನ್ನಿಧ್ಯವಿಲ್ಲದೆ ನೆಮ್ಮದಿಯಾದೀತೇ?

# 10. ಸಸ್ಯಗಳ ಶತ್ರು ಬೇರಿನ ಕೀಟ

ಮಲೆನಾಡಿನ ತೋಟಗಾರರು ಭೆಟ್ಟಿಯಾದಾಗ ಇತ್ತೀಚೆಗೆ ಸಾಮಾನ್ಯ ವಾಗಿ ಚರ್ಚಿಸುವದು, ಬಹಳ ವರ್ಷಗಳ ನಂತರ ಕಾಣಿಸಿಕೊಂಡ ಫಲಕ್ಕೆ ಬರಲಿರುವ ಅಡಿಕೆ ಮರಗಳನ್ನು ಕೊಲ್ಲುವ ಯಾವದೋ ಗುರುತಿಸಲಾರದ ರೋಗದ ಬಗೆಗೆ. ಧಾನ್ಯದ ಬೆಳೆ ಒಂದು ವರ್ಷ ಕೆಟ್ಟರೆ ಮುಂದಿನ ಹತ್ತು ವರ್ಷ ಸರಿ ಬರಬಹುದೆಂದು ಸಮಾಧಾನ ತಂದುಕೊಳ್ಳಬಹುದು. ಆದರೆ ಐದು–ಹತ್ತು ವರ್ಷಗಳವರೆಗೆ ಬೆವರು ಸುರಿಸಿ ಮಕ್ಕಳಂತೆ ಬೆಳೆಸಿದ ಅಡಿಕೆ ಮರಗಳು ಒಂದರ ಹಿಂದೊಂದು ಸಾವನ್ನು ಅಪ್ಪಿಕೊಂಡರೆ ಮಣ್ಣಿನ ಮಗ ನಿಗೆ ಕಣ್ಣೀರು ಬಾರದೇ ಇರುವದೇ? ಅವನಿಗೆ ತನ್ನ ತಪ್ಪು ಏನು ಎಂದು ತಿಳಿಯದು. ಅಂತೆಯೇ ದೇವರಿಗೆ ಮೊರೆ ಹೋಗುವದೊಂದೇ ಅವನಿ ಗಿರುವ ಮಾರ್ಗ. ಆದರೆ ಇಷ್ಟರಲ್ಲಿಯೇ ಸಮಾಧಾನ ಮಾಡಿಕೊಂಡರೆ ಮುಂದೆಯೂ ಇಂತಹ ಹಾನಿಗೆ ಅವನು ಗುರಿಯಾಗಬೇಕಾಗಬಹುದು. ಗುಣಕಾರಿ ಉಪಾಯಗಳಿಗಿಂತ ನಿರೋಧ ಉಪಾಯಗಳು ಹೆಚ್ಚು ಫಲಕಾರಿ ಎಂದು ಎಲ್ಲರೂ ತಿಳಿದ ವಿಷಯ. ತನ್ನ ಕಳವಳಕ್ಕೆ ಕಾರಣವಾದ ಆ ದೆವ್ವ ಯಾವದು ಎಂಬ ಜ್ಞಾನ ಸಂಪಾದಿಸಿಕೊಳ್ಳಬೇಕು. ಈ ವೈರಿ ಪರ್ಣ, ಬೊಡ್ಡೆಗಳಲ್ಲಿ ಇರದೆ ಬೇರುಗಳಲ್ಲಿಯೇ ಬೀಡು ಬಿಟ್ಟಿದೆ ಎಂದು ಅವನಿಗೂ ಗೊತ್ತು. ಒಂದೆರಡು ಸಲ ಈ ಹುಳಗಳ ದರ್ಶನ ಲಾಭವನ್ನೂ ಪಡೆದಿ ದ್ದಾನೆ. ಆದರೆ ಅದಕ್ಕೂ ಮುಂದೆ ಬುದ್ಧಿ ಓಡಿಸಿಲ್ಲ ಅವನು.

ಬೇರುಹುಳ, ಬಿಳಿಹುಳ ಎಂದು ಈ ಕೀಟಕ್ಕೆ ಕರೆಯುವರು. ಸತ್ತ ಗಿಡವನ್ನು ಜಾಗರೂಕತೆಯಿಂದ ಅಗೆದು ತೆಗೆದರೆ ಇಂಥ 15–20 ಹುಳಗಳು

ಸಿಗುವವು. ಗೊಬ್ಬರಕ್ಕಾಗಿ ಸಂಗ್ರಹಿಸಿದ ಸಗಣಿಯಲ್ಲಿ ಬೆಳೆಯುವ ಹುಳದಂತೆ ಇದು ಕಂಡರೂ ಇವೆರಡೂ ತೀರ ಭಿನ್ನವಾದ ಕೀಟದ ಬಾಲ್ಯಾವಸ್ಥೆಗಳು. ಬೆಳೆದ ಹುಳ 4–5 ಸೆಂಟಿಮೀಟರ್ ಉದ್ದ, 1–1½ ಸೆಂಟಿಮೀಟರ್ ಅಗಲವಿದ್ದರೂ ಮಣ್ಣಿನಲ್ಲಿ ಚಲನವಲನ ನಿರಂಕುಶವಾಗಿ ಸಾಗಬೇಕೆಂದು ದೇಹವನ್ನು ಸದಾಕಾಲ ಮುದುಡಿಸಿಕೊಂಡೇ ಇರುತ್ತದೆ. ಬಿರುಸಾದ ಬೇರುಗಳನ್ನು ಕಡಿದು ತಿನ್ನಬೇಕಾಗುವದರಿಂದ ಅದರ ದವಡೆಗಳು ಬಲಿಷ್ಠ ಸ್ನಾಯುಗಳಿಂದ ನಿರ್ಮಿತವಾಗಿವೆ. ಆದರೆ ಉಳಿದ ದೇಹ ಬೆಣ್ಣೆಯಂತೆ ಮೃದುವಾಗಿದ್ದರಿಂದ ಮೆತ್ತಗಿನ ಹೊಡೆತಕ್ಕೂ ಒಡೆದು ಅವಯವಗಳು ಹೊರ ಬಂದು ಬಿಡುವವು. ಮುಂಭಾಗದಲ್ಲಿ ಮೂರು ಜೋಡಿ ಕಾಲುಗಳು ಚಲನಕ್ಕಿದ್ದರೆ ಶರೀರದ ಕೆಳಭಾಗದಲ್ಲಿ ಏಳು ಜೋಡಿ ವಾಯುನಳಿಕೆ ಶ್ವಾಸೋಚ್ಛ್ವಾಸಕ್ಕಾಗಿ ನಿರ್ಮಿತವಾಗಿವೆ. ಶಿರ, ಕಾಲು, ವಾಯುನಳಿಕೆ, ಛಿದ್ರಗಳು ನಾಸಿಪುಡಿ ವರ್ಣದವು ಇದ್ದರೆ ಉಳಿದ ಮೈ ಬಣ್ಣ ಹಾಲು ಬಿಳಿ ಇಲ್ಲವೇ ತಿಳಿ ಹಳದಿಯಾಗಿರುತ್ತದೆ. ಪ್ರತಿ ದಿನದ ಪಚನವಾಗದ ಆಹಾರವು ಶರೀರದ ಹಿಂಭಾಗದಲ್ಲಿ ಸಂಚಯವಾಗುವುದರಿಂದ ಕೆಲವು ಹುಳಗಳಲ್ಲಿ ಆ ಭಾಗ ಕಪ್ಪು ವರ್ಣಕ್ಕೆ ಪರಿವರ್ತನೆ ಹೊಂದಬಹುದು. ಅಧಕ್ಕೆ ಪ್ರಕಾಶ ಕಂಡರೆ ಆಗದು. ಅಂತೆಯೇ ಹೊರಗೆ ಬರುವಂತೆ ಮಾಡಿದಾಗ ಅವಿತುಕೊಳ್ಳಲು ಕತ್ತಲು ಸ್ಥಳ ಹುಡುಕುವದು. ಪ್ರಖರವಾದ ಸೂರ್ಯನ ಕಿರಣಗಳಿಗೆ ಒಂದು ತಾಸು ಇಟ್ಟರೆ ಶರೀರದ ದ್ರವಗಳನ್ನು ಕಳೆದುಕೊಂಡು ಸಾಯುವುದು. ನೆಲದ ಒಳಕ್ಕೆ ಸುಖವಾಗಿ ಬಾಳುವ ಈ ಹುಳಕ್ಕೆ ನೆಲದ ಮೇಲೆ ಬಂದಾಗ ಸರಿಯಾಗಿ ಚಲಿಸಲಿಕ್ಕೂ ಬಾರದು.

ಈ ಕೀಟದ ಜೀವನ ಎಂಥವನನ್ನೂ ಆಶ್ಚರ್ಯಚಕಿತನನ್ನಾಗಿ ಮಾಡುವಂತಿದೆ. ವರುಣ ದೇವನು ವರ್ಷದಲ್ಲಿ ಮೊದಲ ಬಾರಿಗೆ ಧರೆಗೆ ಇಳಿದು ಬರುತ್ತಿದ್ದಂತೆ ಪ್ರೌಢ ಕೀಟ ಸುರಂಗ ಮಾರ್ಗವನ್ನು ನಿರ್ಮಿಸಿ ಅದರೊಳಗಿನಿಂದ ಹಾರಿ ಭರ್ ಭರ್ ಎಂದು ಪ್ರೇಮಗೀತೆ ಹಾಡುತ್ತ, ಪ್ರಿಯೆಯನ್ನು ಅರಸುತ್ತಾ ಎರಡು ಮೂರು ಕಿಲೋಮೀಟರ್ ದೂರವಿರುವ ನೆರಳಿದ್ದ ಮರಕ್ಕೆ ಧಾವಿಸುವದು. ಆ ಸಂಜೆ ಏಳರಿಂದ ಎಂಟುಗಂಟೆಯವರೆಗೆ

ಸಾವಿರಾರು ಕೀಟಗಳು ಪ್ರಣಯ ಮಂದಿರಕ್ಕೆ ಹೆಚ್ಚಿನ ಹುರುಪಿನಿಂದ ಹಾರಿ ಹೋಗುವವು. ಅಲ್ಲಿ ಪ್ರೇಯಸಿಯನ್ನು ಆರಿಸಿ ವಿಹರಿಸಿದ ನಂತರ ಪರ್ಣಗಳ ವ್ಯಾಪ್ಯಾನ್ನ ಭೋಜನದ ಏರ್ಪಾಡು ಆಗಿರುತ್ತದೆ. ರಾತ್ರಿಯೆಲ್ಲಾ ಮೋಜಾಗಿದ್ದು ಮುಂಜಾವಿನ ಐದು ಗಂಟೆಯ ಹೊತ್ತಿಗೆ ದೂರ ದೂರ ಹಾರಿ ಹೋಗಿ ಸಿಪಾಯಿಗೆ ಹೆದರುವ ಕಳ್ಳರಂತೆ ಭೂಗರ್ಭದಲ್ಲಿ ಸೇರಿ ಬಿಡುವವು ನಂತರದ ಮೂರು ನಾಲ್ಕು ತಿಂಗಳು ಅವೇ ಕೀಟಗಳು ಅವೇ ವೃಕ್ಷಗಳಿಗೆ ಧಾವಿಸುವವು. ಇವುಗಳ ಭೋಜನದಿಂದಾಗಿ ಒಂದು ಮರ ದಿವಾಳಿ ಎದ್ದುದರಿಂದ ಇನ್ನೊಂದು ಮರವನ್ನು ಆಕ್ರಮಿಸುವವು. ಅವುಗಳಿಗೆ ರುಚಿಸುವ ಅಡಿಗೆ ಎಂದರೆ ನೇರಿಳೆ, ಮಾವು, ಬೇವು, ಅಶ್ವತ್ಥ, ಪೇರಲ, ದಾಳಿಂಬ, ಕವಳಿಕಾಯಿ, ಮರಗಿಡ ಕಂಟಿಯ ಎಲೆಗಳು. ಸತತವಾಗಿ ಎಲೆಗಳನ್ನು ಕಳೆದುಕೊಂಡ ಮರ ಸಾವನ್ನಪ್ಪಿಕೊಳ್ಳುವದು. ನವದಂಪತಿ ಕೀಟಗಳು ದೀಪಕ್ಕೆ ಆಕರ್ಷಿತವಾಗಿ ಬರುವದುಂಟು. ಆದರೆ ದಿನಗಳೆದಂತೆ ಈ ಆಕರ್ಷಣೆ ಕಡಿಮೆಯಾಗುವದುಂಟು. ಕಗ್ಗತ್ತಲಿನಲ್ಲಿ ಅವುಗಳ ಕಣ್ಣುಗಳು ಬೆಕ್ಕಿನ ಕಣ್ಣುಗಳಂತೆ ಹೊಳೆಯುವವು. ಬಂಧಿಸಿಟ್ಟ ಬಾಟ್ಲಿಯ ಮುಚ್ಚಳವನ್ನು ಕೊರೆಯುವಷ್ಟು ಶಕ್ತಿ ಅವುಗಳ ದವಡೆಗಿದೆ. ಜೋಡಿ ಕಲ್ಲಿಮಿಾಸೆ, ಜೋಡಿ ಕಣ್ಣು, ಓಡಲು ಆರು ಕಾಲುಗಳು, ಹಾರಲು ಜೋಡಿ ರಕ್ಷಣೆಯ ರೆಕ್ಕೆಗಳು, ಮೈಬಣ್ಣ ಮಣ್ಣು ಕೆಂಪು. ಹೆಣ್ಣು ಗಂಡಿಗಿಂತಲೂ ಉದ್ದವಾಗಿ ದಪ್ಪವಾಗಿ ಇರುವುದು. ಬಂಧನದಲ್ಲಿ 15–20 ದಿನ ಆಹಾರ ವಿಲ್ಲದೇ ಬದುಕಬಲ್ಲವು.

ಪ್ರಸೂತಿ ವೇದನೆ ಕಾಣಿಸಿಕೊಂಡಾಗ ಹೆಣ್ಣು 10-15 ಸೆಂಟಿಮೀಟರ್ ಭೂಗರ್ಭದಲ್ಲಿ ಹೋಗಿ ಹಳದಿ ವರ್ಣದ ಬಿಡಿ ಬಿಡಿಯಾದ ಉದ್ದ ಆಕಾರದ ತತ್ತಿಗಳನ್ನು ಹೊರಗೆ ಹಾಕುವದು. ಯಾವ ಪಾಲನೆ ಪೋಷಣೆ ಇಲ್ಲದೇ 8–10 ದಿನಗಳೊಳಗೆ ಮರಿಕೀಟಗಳು ಹೊರಬಂದು ಎಳೆಬೇರುಗಳನ್ನು ಏಕಚಿತ್ತದಿಂದ ಭಕ್ಷಿಸಲಾರಂಭಿಸುವವು. ಸ್ವಲ್ಪ ಬೆಳೆದ ನಂತರ ತಾಯಿ ಬೇರಿಗೂ ಬಾಯಿ ಹಾಕುವವು.

ಬೇರು ಕಳೆದುಕೊಂಡ ಗಿಡ, ನೀರು, ಕ್ಷಾರಗಳು ಸಿಗದೇ ಮೊದಲು ಹಳದಿ ವರ್ಣಕ್ಕೆ ತಿರುಗಿ ನಂತರ ಒಣಗಿ ಹೋಗುವದು. ಬೇರು ಹುಳು ಸುರಂಗ ತೋಡಿ ಇನ್ನೊಂದು ಗಿಡವನ್ನು ಆಹುತಿ ತೆಗೆದುಕೊಳ್ಳುವದು. 10–15 ಹುಳುಗಳು ಒಂದೇ ಗಿಡದ ಬೇರನ್ನು ತಿನ್ನುತ್ತಿದ್ದರೂ ಅವು ಒಂದ ರಿಂದ ಇನ್ನೊಂದು ದೂರ ದೂರ ಇದ್ದೇ ಈ ಕೆಲಸ ಮಾಡುವವು. ಒಂದನ್ನು ಇನ್ನೊಂದು ಎದುರಿಸಿದಾಗ ಆಜನ್ಮ ವೈರಿಗಳಂತೆ ಹೋರಾಡಿ ಒಂದು ಇನ್ನೊಂದನ್ನು ದವಡೆಯಿಂದ ಕಚ್ಚಿ ಸಾಯಿಸಿಬಿಡುವದು. ಹುಳ ಬೆಳೆದಂತೆ ಮೂರು ಸಲ ಹೊರಗಿನ ಪೊರೆಯನ್ನು ಬಿಡುವವು. ಪ್ರೌಢಕೀಟ ಭಕ್ಷಿಸುವ ವೃಕ್ಷಗಳೇ ಬೇರೆ, ಹುಳ ಭಕ್ಷಿಸುವ ವೃಕ್ಷಗಳೇ ಬೇರೆ. ಹುಳಗಳು ಹೆಚ್ಚಾಗಿ ರೈತನು ನಟ್ಟು ಬೆಳೆಸಿದ ಬೆಳೆಯನ್ನು ತಿನ್ನುವುದೇ ಹೆಚ್ಚು. ಸೇಂಗಾ ಕಬ್ಬು, ಜೋಳ, ಗೋವಿನ ಜೋಳ, ಮೆಣಸು, ಬದನೆಕಾಯಿ, ಬೆಂಡೆಕಾಯಿ ಕುಂಬಳಕಾಯಿ, ಅಡಿಕೆಗಳ ಬೆಳೆಯುವ ಬೇರುಗಳು ಅವಕ್ಕೆ ಬಲುಪ್ರೀತಿ. ಕೆಲವರ್ಷ ಅವು ಅಲ್ಪ ಸಂಖ್ಯೆಯಲ್ಲಿದ್ದಾಗ ಕೆಲವೇ ವೃಕ್ಷಗಳ ಬೇರುಗಳನ್ನು ನಾಶಪಡಿಸುವದರಿಂದ ರೈತನ ದೃಷ್ಟಿಯನ್ನು ಆಕರ್ಷಿಸಲಾರವು. ವರ್ಷ ವರ್ಷಕ್ಕೆ ಅವುಗಳ ಸಂಖ್ಯೆ ಹೆಚ್ಚುತ್ತ, ಹೆಚ್ಚು ಮಳೆ, ಆದ್ರ್ರ ಮತ್ತು ಬೆಚ್ಚಗಿನ ಹವೆ ಇದ್ದ ವರ್ಷ ಪಿಡುಗಿನ ಸಂಖ್ಯೆಯಲ್ಲಿ ಬೆಳೆದು ಮದ್ದಾನೆ ಯಂತೆ ಸಿಕ್ಕ ಗಿಡಗಳನ್ನೆಲ್ಲ ತಿಂದು ತೇಗುವವು. ನಂತರ ಆಹಾರದ ಕೊರತೆ ಯಾದಾಗ ಇಲ್ಲವೇ ವಿಪರೀತ ಚಳಿ ಬಿದ್ದಾಗ ತಮ್ಮ ಎಂಜಲುಗಳನ್ನು ಸೂಸಲು ಮಣ್ಣಿನೊಡನೆ ಕೂಡಿಸಿ ಗೋಲಾಕಾರದ ಗೂಡೊಂದನ್ನು ರಚಿಸಿ ಕೊಳ್ಳುವದು. ಅದನ್ನು ಜಾಗ್ರತೆಯಿಂದ ಕೊಯ್ದರೆ ಒಳಗೆ ತೆಂಗಿನಕಾಯಿಯ ರಚನೆ ಗೋಚರಿಸುವದು. ಅದರೊಳಗಿದ್ದ ಹುಳ ತನ್ನ ಶರೀರದ ಬಹಳಷ್ಟು ದ್ರವ್ಯವನ್ನು ಹೊರಗೆಡವಿ ಕುಂಭಕರ್ಣನ ನಿದ್ರೆ ಮಾಡುತ್ತಿರುವದು. ಮಳೆಗಾಲಕ್ಕೆ 10–15 ದಿನ ಪೂರ್ವದಲ್ಲಿ ಅದು ದೇಹರಚನೆ ಬದಲಿಸಿ ನಿದ್ರಾವಸ್ಥೆ ಹೊಂದುವದು. ಆಗ ಪ್ರೌಢ ಕೀಟದ ಅಂಗಾಂಗಗಳು ಬೆಳೆದು ಪ್ರಥಮ ಮಳೆಯೊಂದಿಗೆ ತಮ್ಮ ಗೂಡು ಒಡೆದು ಹೊರಗೆ ಹಾರುವವು.

ಒಮ್ಮೆ ಈ ಪಿಡುಗು ಹೊಲ ತೋಟಗಳಲ್ಲಿ ಕಾಲು ಇಟ್ಟಿತು ಎಂದರೆ ಅದನ್ನು ಸುಲಭವಾಗಿ ಓಡಿಸುವಂತಿಲ್ಲ. ಒಮ್ಮೆ ಬೇರುಗಳಲ್ಲಿ ಸೇರಿಕೊಂಡಿ

ತೆಂದರೆ ಅದನ್ನು ಹೊರತೆಗೆದು ಕೊಲ್ಲುವ ಮಾತು ಅಸಾಧ್ಯವಾದದ್ದು. ಪ್ರೌಢಕೀಟಗಳು ಮರಗಳನ್ನು ಮೇಯುವಾಗ ಅದನ್ನು ನಾಶಪಡಿಸುವದು ಸುಲಭವಾದದ್ದು. ಮರದ ಟೊಂಗೆಗಳನ್ನು ಅಲುಗಾಡಿಸಿದರೆ ಅವು ಸತ್ತಂತೆ ನಟಿಸಿ ನೆಲಕ್ಕೆ ಉದುರುವುವು. ಇದರಂತೆ ಹೊಲ-ತೋಟಗಳ ನಾಲ್ಕೂ ದಿಕ್ಕಿನಲ್ಲಿ ಗ್ಯಾಸಲಾಯಿಟ್‌ಗಳನ್ನು ಹೊತ್ತಿಸಿದರೆ ಅವು ಆಕರ್ಷಿತವಾಗುವವು. ಅವನ್ನು ಒಂದೆಡೆ ಕಲೆಹಾಕಿ ದಹನ ಮಾಡಿದರೆ ನೇರವಾಗಿ ಸ್ವರ್ಗಲೋಕಕ್ಕೆ ಹೋಗುವವು. ತೀರ ಅಸಹಾಯಕ ಸ್ಥಿತಿಯಲ್ಲಿ ಕೀಟನಾಶಕ ರಸಾಯನ ಗಳನ್ನು ಉಪಯೋಗಿಸಬಹುದು. ಬಿ.ಎಚ್.ಸಿ. ಹೆಪ್ಟಾಕ್ಲೋರ, ಲಿಂಡೇನ, ದಿಂಡೀನ್, ಎಂಡಿನ್, ಕ್ಲೋರೊಡೆನ್‌ಗಳಂತಹ ಕೀಟನಾಶಕಗಳು ಉಪಯೋಗ ಕಾರಿಯಾಗುವವು. ಬಿ. ಎಚ್. ಸಿ. ಪುಡಿಯನ್ನು ಎಕರೆಗೆ 7.5 ಪೌಂಡಿನಂತೆ ಹೆಪ್ಟಾಕ್ಲೋರ 8.0 ಪೌಂಡಿನಂತೆ ಮಣ್ಣಿನಲ್ಲಿ ಮಿಶ್ರಣ ಮಾಡಿದರೆ ಹೆಚ್ಚು ಫಲಕಾರಿಯಾಗುವದೆಂದು ವಿಜ್ಞಾನಿಗಳು ಕಂಡುಹಿಡಿದಿದ್ದಾರೆ. ಈ ನಿವಾರಣೋ ಪಾಯದ ತೊಡಕೆಂದರೆ ಬೇರುಹುಳಗಳು ಈ ವಿಷಕಾರಿ ರಸಾಯನಗಳಿಂದ ರಕ್ಷಿಸಿಕೊಳ್ಳಲು ಅವುಗಳಿಂದದೂರ ದೂರ ಒಂದು ಮೀಟರಗಿಂತ ಆಳದಲ್ಲಿ ಹೋಗಿಬಿಡುವವು ಅವುಗಳ ಸತ್ವ ಕಡಿಮೆಯಾದ ನಂತರ ತಿರುಗಿ ಮೇಲಕ್ಕೆ ಬಂದು ತಮ್ಮ ಧ್ವಂಸ ಕಾರ್ಯವನ್ನು ಪ್ರಾರಂಭಿಸುವವು.

ನಿಶಾಚರ ಕಪ್ಪೆಗಳು, ಕೆಲ ಓತೀಕಾಟಗಳು, ಪ್ರೌಢಕೀಟಗಳನ್ನು ಭಕ್ಷಿಸು ತ್ತವೆ. ಹೊಲವನ್ನು ಊಳುವಾಗ ಮೇಲಕ್ಕೆ ಬಂದವುಗಳನ್ನು ಕಾಗೆಗಳು ನುಂಗಿ ತೇಗುತ್ತವೆ. ಇದರಂತೆ ಷಟ್‌ಪಾದಿಯೊಂದು ದಿನಕ್ಕೆ ಆರೇಳು ಕೀಟ ಗಳನ್ನು ಭಕ್ಷಿಸಿ ತನ್ನ ಹಸಿವೆಯನ್ನು ಹೋಗಲಾಡಿಸಿಕೊಳ್ಳುತ್ತದೆ. ಕೆಲವು ರೋಗ ಜಂತುಗಳು ಬೇರುಹುಳುಗಳನ್ನು ಆಹುತಿ ತೆಗೆದುಕೊಳ್ಳುವದೂ ಉಂಟು. ಆದರೆ ಇವೆಲ್ಲವುಗಳಿಂದ ಉಂಟಾದ ನಿಯಂತ್ರಣ ಹೆಚ್ಚು ಫಲಕಾರಿ ಯಾಗದ್ದರಿಂದ ಕೂಟಕ್ಕಾಗಿ, ಆಹಾರಕ್ಕಾಗಿ ಇರುಳಿನಲ್ಲಿ ಹೊರಬೀಳುವ ಪ್ರೌಢಕೀಟಗಳನ್ನು ನಾಶಮಾಡುವುದು ಏಕಮಾತ್ರ ಫಲಕಾರಿಯಾದ ಉಪಾಯ.

# 11. ಸೌಂದರ್ಯ ಭರಿತ ನಿಂಬೆ ಪತಂಗ

ಸೌಂದರ್ಯಭರಿತ ಹೆಣ್ಣು, ಹೂವು, ಹಕ್ಕಿಗಳು ಕಲಾಕಾರರು, ಸೌಂದರ್ಯೋಪಾಸಕರನ್ನು ಆಕರ್ಷಿಸಿದಂತೆ ಪತಂಗ (ಪಾತರಗಿತ್ತಿ)ಗಳೂ ಆಕರ್ಷಿಸಿವೆ. ನಿಂಬೆ ಪತಂಗವು ಇಂತಹ ಸೌಂದರ್ಯವನ್ನು ಹೊರ ಹೊಮ್ಮಿಸುವ ಜೀವಿಯಾಗಿದೆ. ಅಂತೆಯೇ ಅದನ್ನು ಚಿತ್ರಕಾರರು ಚಿತ್ರಿಸಿದ್ದಾರೆ. ಕಲಾಕಾರರು ಸಂಗ್ರಹಿಸಿದ್ದಾರೆ. ಆದರೆ ಅದರ ಜೀವನ, ಇತಿಹಾಸವನ್ನು ಪರಾಮರ್ಶಿಸಿದರೆ ಅದರ ಸೌಂದರ್ಯ ಆಧುನಿಕ ನಾರಿಯರ ಸೌಂದರ್ಯದಂತೆ ಎಷ್ಟು ಕೃತಕವಾದುದು ಎಂದು ಅರಿವಾಗದೇ ಇರದು. ಇತರ ಕೀಟಗಳಂತೆ ಇದೂ ತನ್ನ ಜೀವನವನ್ನು ಮೊಟ್ಟೆಯಿಂದಲೇ ಪ್ರಾರಂಭಿಸುವುದು. ಹೆಣ್ಣು ಪತಂಗ ನಿಂಬೆ ಎಲೆಯ ಮೇಲ್ಭಾಗದಲ್ಲೂ ಕೆಳಭಾಗದಲ್ಲೂ ಬಿಡಿ ಬಿಡಿಯಾಗಿ ತತ್ತಿಗಳನ್ನಿಡುವುದು ಹೊರ ಬಂದ ಮರಿ ಶ್ವೇತ ಹಾಗು ನಾಸಿಪುಡಿ ವರ್ಣಗಳಿಂದ ಕೂಡಿದ್ದು ನಿಧಾನವಾಗಿ ಚಲಿಸುವ ಬಸವನ ಹುಳದಂತೆ ಕಾಣುವುದು. ಹಸಿದ ಈ ಕೀಟ ಒಂದರ ನಂತರ ಒಂದರಂತೆ ನಿಂಬೆ ಎಲೆಗಳನ್ನು ತಿಂದು ಜೀರ್ಣಿಸಿಕೊಳ್ಳುವದು. ಈ ಕೀಟಗಳು ಹೆಚ್ಚಾಗಿರುವ ಗಿಡಗಳು ತಮ್ಮ ಎಲ್ಲ ಎಲೆಗಳನ್ನು ಕಳೆದುಕೊಂಡು ರೋಧಿಸುವುದೂ ಉಂಟು. ಇದರಿಂದ ನಿಂಬೆ ಹಣ್ಣಿನ ಉತ್ಪಾದನೆಯಲ್ಲಿ ಬಹಳ ಕೊರತೆಯುಂಟಾಗುವುದು. ಸತತವಾಗಿ ಎರಡು ಮೂರು ಸಲ ಹೀಗಾದರೆ ನಿಂಬೆ ಗಿಡ ಸಾಯುವುದೂ ಉಂಟು. ಹೆಚ್ಚು ಹೆಚ್ಚು ಆಹಾರ ಜೀರ್ಣಿಸಿಕೊಂಡಂತೆ ಮತ್ತು ಹಿಂದುಗಡೆ

ತಗಲಿದ ತತ್ತಿಯನ್ನು ಹೊರಗೆಡಹಿದಂತೆ ಹುಳಕ್ಕೆ ಹೆಚ್ಚು ಹಸಿರು ಬಣ್ಣ ಬರುವುದು. ಈ ಸಮಯದಲ್ಲಿ ಹುಳದ ಮುಂಭಾಗದಲ್ಲಿ ಎರಡು ಕರಿಯ ಬಣ್ಣದ ಗೋಲಾಕಾರದ ಬಿಂದುಗಳು ಮೂಡುವುದೂ ಉಂಟು. ದೂರ ದಿಂದ ನೋಡುವವರಿಗೆ ಈ ಹುಳ ಹಾವೆಂದೂ ಬಣ್ಣದ ಬಿಂದುಗಳು ಅದರ ಭಯಾನಕ ಕಣ್ಣುಗಳೆಂದೂ ಅನಿಸದಿರುವುದಿಲ್ಲ ಆದರೆ, ತೀರ ಹತ್ತಿರದಿಂದ ನೋಡಿದಾಗಲಷ್ಟೇ ಅದರ ಶಿರ ತೀರ ಸಣ್ಣದಿದ್ದು ಅಗೋಚರ ಕಣ್ಣುಗಳು ಇರುವ ಸ್ಥಳದ ಕಲ್ಪನೆ ಬರುವುದು. ವೈರಿಗಳು ಈ ಹುಳ ವಿಷಕಾರಿ ಹಾವೆಂದು ತಿಳಿದು ದೂರ ಸರಿದು ಹೋಗುವವೆಂದು ವೈಜ್ಞಾನಿಕರು ನಂಬುತ್ತಾರೆ. ಇದರಲ್ಲಿ ಎಷ್ಟು ಸತ್ಯಾಂಶವಿದೆ ಎಂಬುದು ಆ ಹುಳಕ್ಕಷ್ಟೇ ಗೊತ್ತು.

ಮನದಣಿಯೆ ಉಂಡು ಜೀರ್ಣಿಸಿಕೊಂಡ ನಂತರ ಕೀಟ ಸುಲಭವಾಗಿ ಕಣ್ಣಿಗೆ ಬೀಳುವ ಟೊಂಗೆಯೊಂದಕ್ಕೆ ಧಾವಿಸಿ ತನ್ನ ಎಂಜಲಿನಿಂದ ರೇಶಿಮೆ ಎಳೆ ಯನ್ನು ತಯಾರಿಸಿ ಟೊಂಗೆಗೆ ಬಲವಾಗಿ ಅಂಟಿಕೊಳ್ಳುವುದು. ಈ ಸಮಯ ದಲ್ಲಿ ಅದರ ಕಣ್ಣು ಬಿಂದುಗಳೂ ಶರೀರದ ಹಸಿರು ಬಣ್ಣವೂ ಕಂಡುಬರು ವದು. ನಂತರ ಸತತವಾದ ಶಾರೀರಿಕ ಚಲನಗಳಿಂದ ಹೊರ ಕವಚವನ್ನು ಬಿಸುಟು ಟೊಂಗೆಯ ಬೂದು ಬಣ್ಣವನ್ನು ಧರಿಸುವುದು. ದೂರದಿಂದ ನೋಡಿದಾಗ ಇದೊಂದು ಜೀವಿ ಎಂದು ತಿಳಿಯದೇ ಟೊಂಗೆಯೆಂದೇ ಭಾಸ ವಾಗುವುದು. ಆದರೆ ಅದರೊಳಗೆ ಮಾತ್ರ ಸುಂದರ ನಿಂಬೆ ಪತಂಗದ ವಿವಿಧ ಅಂಗಾಂಗಗಳ ನಿರ್ಮಾಣಕಾರ್ಯ ನಡೆದಿರುವದು. ರೆಕ್ಕೆ ನಿರ್ಮಾಣ ವಾದ ನಂತರ ಕವಚವನ್ನು ಶಿರದತ್ತ ಒಡೆದು ಪತಂಗ ಮನಸ್ಸಿಗೆ ಬಂದತ್ತ ಹಾರುತ್ತ ತನ್ನ ಸಂಗಾತಿಗಾಗಿ ಹುಡುಕುವುದು. ಗಂಡು-ಹೆಣ್ಣಿನ ಮಿಲನದ ನಂತರ ಹೆಣ್ಣು ನಿಂಬೆ ಗಿಡದಲ್ಲಿ ಸರಿಯಾದ ಸ್ಥಳ ಹುಡುಕಿ ಮೊಟ್ಟೆಗಳನ್ನಿಡು ವುದು. ಪ್ರೌಢ ಪತಂಗಗಳು ನಿಂಬೆಗೆ ಯಾವ ರೀತಿಯಿಂದಲೂ ಹಾನಿ ಯುಂಟುಮಾಡದೇ ಹೂವಿನಿಂದ ಹೂವಿಗೆ ಹಾರುತ್ತ ಅವುಗಳ ಮಧು ಸೇವನೆಯಿಂದ ಮತ್ತವಾಗಿ ಮೆರೆದಾಡುವವು. ಇವುಗಳ ಸೌಂದರ್ಯವನ್ನು ನೋಡಿದವರಿಗೆ ಅದರ ಅಪಾಯದ ಕಲ್ಪನೆ ಹೇಗೆ ಬರಬೇಕು ?

ಈ ಕೀಟಗಳಿಂದ ನಿಂಬೆಯನ್ನು ಸಂರಕ್ಷಿಸುವುದು ಕಷ್ಟದ ಕೆಲಸ. ಅವು ಗಳ ತತ್ತಿಗಳನ್ನು ಪಳಗಿದ ಕಣ್ಣುಗಳಷ್ಟೇ ಕಂಡುಹಿಡಿಯುವವಾದರೆ ಅವುಗಳ

ಹುಳಗಳನ್ನು ಯಾರೂ ನೋಡಬಹುದಾಗಿದೆ. ಅರ್ಧ ತಿಂದ ಎಲೆಗಳೂ ಅವುಗಳ ಮೇಲೆ ಸಂಚಿತವಾದ ಹೊರಗೆಡವಿದ 'ಕೀಟಗುಂಪು'ಗಳು ಈ ಕೀಟ ಗಳ ವಸತಿ ಸೂಚಿಸುತ್ತವೆ. ಹಿತ್ತಲಲ್ಲಿ ಒಂದೆರಡು ಗಿಡಗಳಿದ್ದರೆ ಅವುಗಳನ್ನು ಎಲೆಗಳ ಸಹಿತ ಕೂಡಿ ಹಾಕಿ ಬೆಂಕಿಯಿಂದ ಇಲ್ಲವೆ ವಿಷದಿಂದ ಕೊಲ್ಲ ಬಹುದು. ಆದರೆ ಅವುಗಳನ್ನು ದೂರ ಚೆಲ್ಲಿದರೂ ತಿರುಗಿ ಬರುವ ಸಂಭವ ವಿರುವುದರಿಂದ ಹಾಗೆ ಮಾಡಬಾರದು. ಬಹಳಷ್ಟು ಗಿಡಗಳಿದ್ದಾಗ ಕೀಟ ನಾಶಕ ರಸಾಯನಗಳಿಂದ ಅವುಗಳನ್ನು ನಿಯಂತ್ರಣದಲ್ಲಿ ತರಬೇಕಾಗುವುದು.

# 12. ಜೀವಿಗಳಿಂದ ಕೀಟನಿಯಂತ್ರಣ

ಮಾನವನಂ ಬೆಳೆಸಿ ಸಂಗ್ರಹಿಸುವ ಆಹಾರ ಮತ್ತು ಇತರ ದಿನ ಬಳಕೆಯಂ ಸಾಮಗ್ರಿಗಳಿಗೆ ಕೀಟಗಳು ತೀವ್ರ ಪ್ರತಿಸ್ಪರ್ಧಿಗಳು. ಜನವಸತಿ ಹಾಗು ಕೃಷಿ ಉತ್ಪಾದನೆ ಹೆಚ್ಚಿದಂತೆ ಕೀಟಗಳಿಗೆ ಹೊಸ ಆಹಾರ ಲಭ್ಯವಾಗಿ ಅವುಗಳ ಸಂಖ್ಯೆಯೂ ಬೆಳೆಯುತ್ತದೆ. ಮಾನವನು ಬೆಳೆಸಿದ ಶೇಕಡಾ ಹತ್ತರಷ್ಟು ಬೆಳೆಯನ್ನು ಪ್ರತಿ ವರ್ಷವೂ ಈ ಕೀಟ ರಾಕ್ಷಸಗಳು ಆಹುತಿ ತೆಗೆದುಕೊಳ್ಳುತ್ತವೆ ಎಂದು ತಜ್ಞರು ಅಂದಾಜು ಮಾಡಿದ್ದಾರೆ. ಅಂದರೆ ಒಬ್ಬ ಒಕ್ಕಲಿಗ ನೂರು ಕ್ವಿಂಟಲ್ ಧಾನ್ಯ ಬೆಳೆಸಿದರೆ ಅವನಿಗೆ ಸಿಗುವದು ತೊಂಭತ್ತು ಕ್ವಿಂಟಲ್ ಮಾತ್ರ. ಈ ಹಾನಿಯನ್ನು ಕಡಿಮೆ ಮಾಡುವದಕ್ಕೋಸ್ಕರ ವಿಜ್ಞಾನಿಗಳು ಸತತ ಪ್ರಯತ್ನಿಸಿ ಹಲವಾರು ಬಗೆಯ ಕೀಟನಾಶಕ ರಸಾಯನಗಳನ್ನು ತಯಾರಿಸಿ ಉಪಯೋಗಿಸಿದರು. ಅವುಗಳಲ್ಲಿ ಡಿ.ಡಿ.ಟಿ, ಬಿ.ಎಚ್.ಸಿ ಎಲ್‌ಡ್ರಿನ್, ಡಿಲ್‌ಡ್ರಿನ್, ಫೋಲಿಡಾಲಗಳಂತಹವು ಹೆಚ್ಚು ಬಳಕೆಯಲ್ಲಿವೆ. 2ನೇ ಜಾಗತಿಕ ಯುದ್ಧದ ಕಾಲದಲ್ಲಿ ಅವುಗಳನ್ನು ಬಳಸಿದಾಗ ಬ್ರಹ್ಮಾಸ್ತ್ರದಂತೆ ಕೀಟಗಳನ್ನು ಧ್ವಂಸಮಾಡಿದವು. ಆದರೆ ಕೆಲವು ವರ್ಷಗಳ ನಂತರ ಕೀಟಗಳ ಸಂಖ್ಯೆ ಪುನಃ ಬೆಳೆಯ ಹತ್ತಿದಾಗ ವಿಜ್ಞಾನಿಗಳು ತಲೆ ಕೆರೆದುಕೊಂಡು, ಕಣ್ಣಲ್ಲಿ ಕಣ್ಣಿಟ್ಟು ನೋಡಿದಾಗ ಕೆಲವು ಕೀಟಗಳು ಈ ಬೃಹದ್ ವಿಷಕಾರಿ ರಸಾಯನಗಳಿಂದಲೂ ಸಾಯದಿರುವದು ಅವರ ಲಕ್ಷಕ್ಕೆ ಬಂದಿತಲ್ಲದೇ ಅವುಗಳ ಪೀಳಿಗೆ ಕೂಡ ಕೀಟನಾಶಕಗಳಿಂದ ಸಾಯದೇ ಸೌಖ್ಯವಾಗಿ ಇರುವದು ನಂತರದ ಸಂಶೋಧನಗಳಿಂದ ತಿಳಿದು ಬಂದಿತು. ಈ ರಸಾಯನ

ಗಳು ಕೀಟಗಳಿಗಷ್ಟೇ ವಿಷಕಾರಿಯಾಗಿರದೇ ಮೀನು, ದನಕರು, ಸಾಕುಪ್ರಾಣಿಗಳಿಗೆ, ಅದರಂತೆ ಹಣ್ಣು ಹಂಪಲು, ಗಿಡ ಬಳ್ಳಿಗಳಿಗೂ ವಿಷಕಾರಿಯಾದ್ದರಿಂದ, ಕೀಟ ನಿಯಂತ್ರಣದ ಈ ವಿಧಾನವನ್ನು ಜಾಗರೂಕತೆಯಿಂದ ಬಳಸಬೇಕಾಯಿತಲ್ಲದೇ ಕೆಲ ಸಂದರ್ಭಗಳಲ್ಲಿ ಬಿಟ್ಟುಕೊಡಬೇಕಾಯಿತು. ಕೀಟನಾಶಕಗಳನ್ನು ಹೆಚ್ಚು ಪ್ರಮಾಣದಲ್ಲಿ ಬಳಸಿದ ಉತ್ತರ ಅಮೇರಿಕೆ, ವಿವಿಧ ರೀತಿಯಲ್ಲಿ ಹಾನಿ ಎದುರಿಸಬೇಕಾದ್ದರಿಂದ ಜನರು ಈ ರಸಾಯನಗಳ ವಿರುದ್ಧ ಕೂಗೆಬ್ಬಿಸಿದರು. ಈ ಕೂಗು ತೂಕಡಿಸುತ್ತಿದ್ದ ವಿಜ್ಞಾನಿಗಳನ್ನು ಎಚ್ಚರಗೊಳಿಸಿತು.

ಮಾನವನ ಪರಿಸರಕ್ಕೆ ಅಪಾಯಕಾರಿ ಯಲ್ಲದ ಕೀಟ ನಿಯಂತ್ರಣ ಪದ್ಧತಿಯನ್ನು ಶೋಧಿಸುವಾಗ ನಿಸರ್ಗದಲ್ಲಿ ಅದು ತಂತಾನೇ ನಡೆದೇ ಇರುವದು. ಕೀಟ ಪಂಡಿತರ ಲಕ್ಷಕ್ಕೆ ಬಂದಿತು. ಚಿಟ್ಟೆಯಂತಹ ಸಣ್ಣ ಕೀಟಗಳನ್ನು ಒಂಟಿಹುಳ ತಿಂದು ತೇಗುವದು. ಒಂಟಿಹುಳ ಕಪ್ಪೆಗಳ ಉದ್ದ ನಾಲಿಗೆಗೆ ಅಹುತಿಯಾದರೆ, ಹಾವುಗಳು ಕಪ್ಪೆಗಳನ್ನು ಜೀರ್ಣಿಸಿಕೊಂಡು ಬಿಡುತ್ತವೆ. ಎಲ್ಲಿಂದಲೋ ಗಿಡಗವೊಂದು ಬಂದು ಹಾವನ್ನು ನುಂಗಿಬಿಡುತ್ತದೆ. ಇದು ಸದಾಕಾಲವೂ ನಡೆಯುತ್ತಿರುವ ನೈಸರ್ಗಿಕ ವ್ಯವಹಾರ. ಇಲ್ಲಿ ಹಾವುಗಳನ್ನು ಕೊಂದರೆ ಕಪ್ಪೆಗಳ ಸಂಖ್ಯೆ ಹೆಚ್ಚುವದು. ಕಪ್ಪೆಗಳನ್ನು ನಿರ್ಮೂಲಗೊಳಿಸಿದರೆ ಕೀಟಗಳ ಸಂಖ್ಯೆ ಬೆಳೆಯುವದೆಂದು ಬೇರೆ ಹೇಳಬೇಕಾಗಿಲ್ಲ. ಇದಕ್ಕೆ ವಿರುದ್ಧವಾಗಿ ಕೀಟಗಳ ಸಂಖ್ಯೆ ಕಡಿಮೆಯಾಗಬೇಕಾದರೆ ಕಪ್ಪೆಗಳ ಸಂಖ್ಯೆ ಬೆಳೆಯಬೇಕು. ಕಪ್ಪೆಗಳ ಕಾಟ ಹೆಚ್ಚಾದರೆ ಹಾವುಗಳ ಸಂಖ್ಯೆ ಬೆಳೆಯಬೇಕೆಂದು ನಮಗನಿಸದೇ ಇರದು. ಇದೇ ತತ್ವವನ್ನು ಅನುಸರಿಸಿ-ಉಪದ್ರವಿ ಕೀಟಗಳನ್ನು ನಿಯಂತ್ರಿಸಲು ವಿಜ್ಞಾನಿಗಳು ಪ್ರಯತ್ನಿಸುತ್ತಿದ್ದಾರೆ.

ಯಾವಾಗಲೂ ಒಂದನ್ನೊಂದು ತಿಂದು ಜೀವಿಸುವ ಪ್ರಾಣಿಗಳನ್ನೇ ಉಪಯೋಗಿಸಬೇಕೆಂಬ ನಿಯಮವಿಲ್ಲ. ಪರಾವಲಂಬಿ ಪ್ರಾಣಿಗಳನ್ನು, ರೋಗ ಹಬ್ಬಿಸುವ ಜೀವಿಗಳನ್ನು ಧಾರಾಳವಾಗಿ ಬಳಸಬಹುದು. ಒಂದೇ ಜಾತಿಯ ಕೀಟಗಳಿಗೆ ಹಲವಾರು ಭಕ್ಷಕ ಮತ್ತು ಪರಾವಲಂಬಿ ವೈರಿಗಳಿರ

ಬಹುದು. ಉದಾಹರಣೆಗೆ ಅಕ್ಕಿ, ಜೋಳ, ಕಬ್ಬು, ಸಜ್ಜೆ ಮುಂತಾದವುಗಳ ದಂಟಿನೊಳಗಿದ್ದು ಅವನ್ನು ತಿಂದು ತೆನೆ ಬರದಂತೆ ಮಾಡುವ ಕೀಟವರ್ಗ ವನ್ನು ಬೇಟೆಯಾಡುವ ತಗಣಿಯೊಂದಿದೆ. ಅದು ತನ್ನ ಮುಂಗಾಲು ನಡು ವಿನ ಕಾಲುಗಳಿಂದ ಈ ಹುಳವನ್ನು ಹಿಡಿದು ಚೂಪಾದ ತನ್ನ ಸೊಂಡಿಲನ್ನು ಅದರ ದೇಹದಲ್ಲಿ ಸೇರಿಸಿ ಅದರ ಶರೀರದ ದ್ರವವನ್ನು ಹೀರಿ ಹೊರದೊಗಲು ಹಿಂದೆ ಬಿಟ್ಟು ಇನ್ನೊಂದರತ್ತ ಧಾವಿಸುವದು. ಪರಪುಷ್ಟ ಕೀಟವೊಂದು ಈ ಹುಳದ ತೊಗಲಿನ ಮೇಲೆಯೇ ಮೊಟ್ಟೆ ಇಟ್ಟು ಹಾರುವುದು. ಮೊಟ್ಟೆ ಯಿಂದ ಹೊರಗೆ ಬರುವ ಮರಿ ತೊಗಲನ್ನು ದವಡೆಯಿಂದ ಕಡಿದು ದ್ರವ ವನ್ನು ಹೀರಲಾರಂಭಿಸುವುದು. ಹುಳ ಚಡಪಡಿಸಿದರೂ ಪರಪುಷ್ಟ ಕೀಟ ತನ್ನ ಹೀರುವ ಕೆಲಸ ನಿಲ್ಲಿಸದೇ ಒಂದೆರಡು ದಿನಗಳಲ್ಲಿ ದೊಡ್ಡ ದೊಟ್ಟದಾಗಿ ಬೆಳೆದು ಬಿಡುವುದು. ಮುಂದೆ ಅದು ಪ್ರೌಢ ಕೀಟವಾಗಿ ಕಬ್ಬಿನ ಕೀಟ ಹುಡುಕಲು ಹಾರುವುದು. ಕೆಲವು ಪರಪುಷ್ಟ ಕೀಟಗಳು ತಮ್ಮ ಮೊಟ್ಟೆ ಗಳನ್ನು ಹುಳದ ಶರೀರದೊಳಗೇ ಇಡುವವು. ಒಂದು ಹೆಣ್ಣು ೧೦೦-೨೦೦ ಮೊಟ್ಟೆಗಳನ್ನು ಇಡಬಲ್ಲದು. ಅದರೊಳಗಿಂದ ಹೊರ ಬಂದ ಮರಿಗಳು ಹುಳದ ಶರೀರದ ದ್ರವಗಳ ಮೇಲೆ ಬೆಳೆಯಲಾರಂಭಿಸುವವು. ಅಂತಹ ಹುಳಗಳಿಗೆ ಆಹಾರ ರುಚಿಸದು. ಅವುಗಳ ಚಲನವಲನ ಮಂದವಾಗುವುದು. ಕೊನೆಗೆ ಕೀಟದ ಮರಿಗಳು ಹುಳುವಿನ ಮೈದೊಗಲನ್ನು ಹರಿದು ಹೊರ ಬಂದು ಪ್ರೌಢವಾಗುವವು. ಇನ್ನೂ ಕೆಲವು ಪರಾವಲಂಬಿ ಕೀಟಗಳು ಹುಳ ಗಳು ಚೆನ್ನಾಗಿ ಮೆದ್ದು ನಿದ್ರಾವಸ್ಥೆಯಲ್ಲಿ ಇರುವಾಗಲೇ ತನ್ನ ಮೊಟ್ಟೆಗಳನ್ನು ಇಡಲು ಪ್ರಾರಂಭಿಸುವುದು. ಒಂದೇ ಒಂದು ಕೀಟದಿಂದ ೪೦೦-೫೦೦ ಪರಾವಲಂಬಿ ಕೀಟಗಳು ಬೆಳೆದು ಹೊರಗೆ ಬರುವವು. ಈ ಉಪದ್ರವ ಕೀಟ ಗಳನ್ನು ನಿಯಂತ್ರಿಸಲು ಉಪಯುಕ್ತವಾದ ಯಾವದಾದರೊಂದು ಅಥವಾ ಹೆಚ್ಚು ಕೀಟಗಳನ್ನು ವಿಜ್ಞಾನಿಗಳು ಉಪಯೋಗಿಸಬಹುದು. ಇದರಂತೆ ಮೊಟ್ಟೆಯಲ್ಲಿ ತತ್ತಿ ಇಡುವ, ಪ್ರೌಢ ಕೀಟಗಳನ್ನು ಭಕ್ಷಿಸುವ ಕೀಟಗಳೂ ಇವೆ. ಪ್ರಯೋಗಾಲಯದಲ್ಲಿ ಸುಲಭವಾಗಿ ಪೋಷಿಸಬಹುದಾದಂತಹ ಮತ್ತು ತೀವ್ರವಾಗಿ ಬೆಳೆಯುವ ಕೀಟಗಳನ್ನು ಆರಿಸುವುದು ರೂಢಿಯಾಗಿದೆ.

ಪರಪುಷ್ಟ ಕೀಟಗಳ ದೊಡ್ಡ ಪ್ರಮಾಣದ ಉತ್ಪತ್ತಿ ಕುತೂಹಲಕಾರಿಯಾಗಿದೆ. ಕಬ್ಬಿನ ಕೀಟದ ಮೊಟ್ಟೆಯಲ್ಲಿ ತತ್ತಿ ಇಡುವ ಜೇನ್ನೊಣವರ್ಗಕ್ಕೆ ಸೇರಿದ ಕೀಟವೊಂದು ಪೂರ್ಣವಿರಾಮದ ಬಿಂದುವಿನಷ್ಟು ಚಿಕ್ಕದಾಗಿದೆ. ಅಸಂಖ್ಯಾತವಾಗಿ ಅವನ್ನು ಬೆಳೆಸಲು, ಮೊದಲಿಗೆ ಅಕ್ಕಿಯ ಕೀಟಗಳನ್ನು ಸಾಕಿ ಅವುಗಳ ತತ್ತಿಗಳನ್ನು ಸಂಗ್ರಹಿಸಲಾಗುತ್ತದೆ. ಒಂದು ಅಂಚೆ ಕಾರ್ಡಿನ ಮೇಲೆ ಒಂದು ಲಕ್ಷಕ್ಕೂ ಮಿಕ್ಕಿದ ಅವುಗಳ ತತ್ತಿಗಳು ಹಿಡಿಸುವವೆಂದು ಅಂದಾಜು ಮಾಡಲಾಗಿದೆ. ಇಂಥ ಕಾರ್ಡುಗಳ ಸಮೀಪದಲ್ಲಿ ಈ ಪರಪುಷ್ಟ ಕೀಟಗಳನ್ನು ತಂದರೆ ಅವು ಹಗಲು ರಾತ್ರಿ ಮೊಟ್ಟೆ ಇಡುವುದರಲ್ಲಿ ತನ್ಮಯವಾಗುವವು. ಸಮೀಪದಲ್ಲಿಯೇ ಜೇನುತುಪ್ಪದಲ್ಲಿ ಅದ್ದಿದ ಅರಳೆಯಿಟ್ಟರೆ ಅದರಿಂದ ಆಹಾರವನ್ನು ಸವಿಯುತ್ತ ಸಂತಾನ ಉತ್ಪತ್ತಿಯಲ್ಲಿ ನಿರತವಾಗಿ ಬಿಡುವವು. ಬೆಳೆಯುವ ಮರಿಗಳನ್ನು ಹೊತ್ತ ಕಾರ್ಡುಗಳನ್ನು ಕೀಟದ ಬಾಧೆ ಹೆಚ್ಚಿರುವ ಹೊಲದಲ್ಲಿ ಇಟ್ಟರೆ ಹೊರಗೆ ಬರುವ ಪ್ರೌಢ ಕೀಟಗಳು ಕಬ್ಬಿನ ಕೀಟಗಳನ್ನು ಹುಡುಕಿ ಅವುಗಳಲ್ಲಿ ತತ್ತಿಗಳನ್ನು ಇಡುವುದರಿಂದ ಕೀಟ-ಬಾಧೆ ಕಡಿಮೆಯಾಗುವುದು. ಇದರಂತೆ ಕೀಟಾವಸ್ಥೆ-ನಿದ್ರಾವಸ್ಥೆಗಳ ಮೇಲೆ ಬೆಳೆಯುವ ಕೀಟಗಳನ್ನು ಪ್ರಯೋಗಾಲಯದಲ್ಲಿ ಅಸಂಖ್ಯಾತವಾಗಿ ಸಾಕಿ ಅವುಗಳನ್ನು ಹೊಲದಲ್ಲಿ ಬಿಡಲಾಗುತ್ತದೆ. ನಿಯಂತ್ರಣಕ್ಕಾಗಿ ಬಳಸಿದ ಕೀಟ ಬೆಳೆಗೆ ಅಪಾಯ ಮಾಡಲಾರದು ಎಂದು ಮನವರಿಕೆ ಮಾಡಿಕೊಳ್ಳುವ ಸಲುವಾಗಿ ಇಂಥ ಕೀಟಗಳ ಪೂರ್ವೇತಿಹಾಸವನ್ನು ಸಂಪೂರ್ಣವಾಗಿ, ವಿವರವಾಗಿ ಅಭ್ಯಸಿಸುವುದು ಅತ್ಯವಶ್ಯ. ಹೆಚ್ಚಿನ ಜ್ಞಾನದ ಅಭಾವದಿಂದಾಗಿ ನಿಯಂತ್ರಣಕಾಗಿ ಬಳಸಿದ ಕೀಟಗಳೇ ಕೆಲಸಲ ಬೆಳೆಗೆ ಮಾರಕವಾಗಿ ಪರಿಣಮಿಸಿದ ಅನೇಕ ಉದಾಹರಣೆಗಳಿವೆ.

ಮಾನವನು ವಿಶ್ವಕುಟುಂಬಿಯಾಗುತ್ತಿದ್ದಂತೆ ಕೀಟಗಳೂ ಅವನನ್ನು ಅನುಸರಿಸುತ್ತವೆ ! ಒಂದು ದೇಶದಿಂದ ಇನ್ನೊಂದು ದೇಶಕ್ಕೆ ಹೂಗಿಡ, ಹಣ್ಣು, ಕಾಯಿ ಧಾನ್ಯಗಳನ್ನು ಸಾಗಿಸುವಾಗ ಮಾನವನ ಕಣ್ಣು ತಪ್ಪಿಸಿ ಭಕ್ಷಕ ಕೀಟಗಳೂ ವಿದೇಶ ಯಾತ್ರೆ ಕೈಕೊಳುತ್ತವೆ. ಹುಟ್ಟುದೇಶದಲ್ಲೇ ಅವುಗಳ ವೈರಿಗಳೂ ಹೇರಳವಾಗಿರುವುದರಿಂದ ಅವುಗಳ ಬೆಳವಣಿಗೆ ನಿಯಂತ್ರಿತ

ವಾಗಿರುತ್ತದೆ. ಆದರೆ ಈ ಹೊಸ ದೇಶಗಳಲ್ಲಿ ವೈರಿಗಳೇ ಇರದ್ದರಿಂದ ದೈತ್ಯ ಪ್ರಮಾಣದಲ್ಲಿ ಬೆಳೆಯಲಾರಂಭಿಸುತ್ತವೆ. ತಮಗೆ ರೂಢಿಯಿರುವ ಆಹಾರದ ಅಭಾವವಾದೊಡನೆ, ಈ ಕೀಟಗಳು ಇತರ ಬೆಳೆಗೂ ಹರಡಿ ಕೊಳ್ಳುತ್ತವೆ. ಈ ಪರಿಸ್ಥಿತಿಯಿಂದ ಕಂಗಾಲಾದ ವಿಜ್ಞಾನಿಗಳು ಈ ಕೀಟಗಳ ತವರೂರಿನಲ್ಲೇ ಸಂಶೋಧನೆ ಕೈಕೊಂಡು ಅವುಗಳ ವಿರೋಧಿಗಳನ್ನು ದೊಡ್ಡ ಪ್ರಮಾಣದಲ್ಲಿ ಆಯಾತಮಾಡಿಕೊಂಡಾಗಲೇ ಈ ಕೀಟಬಾಧೆ ಕಡಿಮೆ ಯಾಗುವುದು. ಹೊರನಾಡಿನ ಸಸ್ಯಗಳನ್ನು ಸ್ವದೇಶಕ್ಕೆ ಕೊಂಡೊಯ್ಯುವುದ ರಲ್ಲಿ ಅಮೇರಿಕನ್ನರು ಯಾವಾಗಲೂ ಮುಂದೆ. ಅಂತೆಯೇ ಅವರಲ್ಲಿ ಹೊರ ನಾಡಿನ ಕೀಟಗಳ ಬಾಧೆ ವಿಪರೀತ. ಅಮೇರಿಕೆಯಲ್ಲಿ ಬೆಳೆಯುತ್ತಿದ್ದ ಕಿತ್ತಳೆ ಹಣ್ಣಿಗೆ ಹುರುಪೆ ಕೀಟದ ಬಾಧೆಯಿಂದಾಗಿ ವಿಪರೀತ ಹಾನಿಯುಂಟಾಯಿತು. ವಿಜ್ಞಾನಿಗಳು ಹುರುಪೆ ಕೀಟದಮೇಲೆ ಬೆಳೆಯುವ ಅನೇಕ ಕೀಟಗಳನ್ನು ಅಭ್ಯಸಿಸಿ ಆಸ್ಟ್ರೇಲಿಯದ ಜೀರುಂಡೆ ಜಾತಿಯ ಕೀಟವನ್ನು ಬಳಸಿದಾಗ ಹುರುಪೆಯ ಬಾಧೆ ಕಡಿಮೆಯಾಗಿ ತೋಟಗಾರರಿಗೆ ಕೀಟ ಲಾಭವಾಗ ಲಾರಂಭಿಸಿತು. ಹಾಗೆಯೇ ಆಸ್ಟ್ರೇಲಿಯದಲ್ಲಿ ಮೂಲಂಗಿಯನ್ನು ಧ್ವಂಸ ಮಾಡುವ ಜಿಟ್ಟೆಯನ್ನು, ಯುರೋಪ ಖಂಡದಿಂದ ತಂದ ಜೇನು ಹುಳದ ಜಾತಿಗೆ ಸೇರಿದ ಕೀಟದಿಂದ ನಿಯಂತ್ರಿಸಲಾಯಿತು. ಇದರಂತೆ ಮೀನು, ಕಪ್ಪೆ, ಓತಿಕಾಟ, ಹಕ್ಕಿ, ಪಶುಗಳನ್ನು ಬಳಸಿ ಭಕ್ಷಕ ಕೀಟಗಳನ್ನು ಅಂಕಿತದಲ್ಲಿ ಯಿಡುವುದುಂಟು.

ಇದಲ್ಲದೇ ಹಾನಿಕಾರಕ ಕೀಟಗಳಲ್ಲಿ ರೋಗ ಉತ್ಪಾದನೆಯನ್ನುಂಟು ಮಾಡಲು ಹಲವಾರು ತರದ ಬ್ಯಾಕ್ಟೀರಿಯಾ. ಬೂರಸು ಮತ್ತು ವೈರಸ ಗಳನ್ನು ಉಪಯೋಗಿಸುವುದುಂಟು. ಇದಕ್ಕಾಗಿ ನಿಸರ್ಗದಲ್ಲಿ ಸಾಯುತ್ತಿರುವ ಕೀಟಗಳನ್ನು ತಂದು, ಅವುಗಳಿಗೆ ತಗಲಿದ ರೋಗಗಳನ್ನು ವಿವರವಾಗಿ ಪರಿಶೀಲಿಸಿ ಅವುಗಳನ್ನು ಪ್ರಯೋಗಾಲಯದಲ್ಲಿ ಅಸಂಖ್ಯಾತವಾಗಿ ಬೆಳೆಸಿ, ಕೀಟಬಾಧೆ ಹೆಚ್ಚಾಗಿರುವಲ್ಲಿ ಅವುಗಳನ್ನು ಯಾವುದಾದರೂ ದ್ರವಗಳಲ್ಲಿ ಮಿಶ್ರಣಮಾಡಿ ಸಿಂಪಡಿಸುವರು. ಇಲ್ಲವೇ ಗಾಳಿಯಲ್ಲಿ ತೂರಿ ಬಿಡುವರು. ಇವುಗಳ ಸಂಗಡ ಕೀಟಗಳ ಸಂಪರ್ಕ ಬಂದಾಗ ಅವು ರೋಗ ಪೀಡಿತವಾಗಿ ಸಾಯುವವು.

ಕೀಟಬಾಧೆಗೆ ತುತ್ತಾಗದ ಸಸ್ಯಗಳನ್ನು ಬೆಳೆಸುವುದೂ ಜೀವಿ ನಿಯಂತ್ರಣದ ಇನ್ನೊಂದು ವಿಧಾನ. ಉದಾಹರಣೆಗೆ ಕಬ್ಬಿನಲ್ಲಿ ನೂರಾರು ಜಾತಿಗಳಿವೆ. ಮಿದುವಾದ ಸಿಪ್ಪೆಯ ಕಬ್ಬಿಗೆ ಕೀಟಬಾಧೆ ಅತಿ ಹೆಚ್ಚಾದರೆ ಗಟ್ಟಿ ಸಿಪ್ಪೆಯ ಕಬ್ಬುಗಳು ಕೀಟಗಳಿಂದ ರಕ್ಷಿತವಾಗಿವೆ. ಆದ್ದರಿಂದ ಈ ಜಾತಿಯ ಕಬ್ಬನ್ನು ಬೆಳೆಸಿದರೆ ಕೀಟಗಳಿಗೆ ಆಹಾರ ಸಿಗದೇ ಸಾಯುವವು.

ನಮ್ಮಲ್ಲಿ ಜೀವಿ ನಿಯಂತ್ರಣ ಹೊಸದು. ಕೆಲವು ಕಡೆ ಅದಕ್ಕೆ ಸಂಪೂರ್ಣ ಯಶಸ್ಸು ಸಿಕ್ಕರೆ, ಉಳಿದೆಡೆ ಅವು ಕೀಟಗಳನ್ನು ನಿಯಂತ್ರಿಸಲು ಅಸಮರ್ಥವಾಗಿವೆ. ಉಷ್ಣತಾಮಾನ ಮತ್ತು ಆರ್ದ್ರತೆ ಮೊದಲಾದವು ಜೀವಿಗಳ ಚಟುವಟಿಕೆಗಳನ್ನು ನಿಯಂತ್ರಿಸುವುದರಿಂದ ನಿರೀಕ್ಷಿಸಿದ ಪರಿಣಾಮವೇ ಸಿಗುತ್ತದೆಂದು ಹೇಳಲಾಗದು. ಆದ್ದರಿಂದ ಈ ವಿಧಾನಕ್ಕೆ ಸಂಪೂರ್ಣ ಯಶಸ್ಸು ಸಿಗಬೇಕಾದರೆ ತುಂಬ ಆಳವಾದ ಸಂಶೋಧನೆ ನಡೆಸಬೇಕು. ಜೀವಿ ನಿಯಂತ್ರಣವನ್ನು ಉಳಿದ ವಿಧಾನಗಳ ಪೂರಕವೆಂದು ಬಳಸಬಹುದು.

# 13. ಪತಂಗದ ಕ್ಷಣವೈಭವದ ಪ್ರಪಂಚ

ವಸಂತ ಋತು ಆಗಮಿಸುತ್ತಿದ್ದಂತೆ ವಿವಿಧ ಬಣ್ಣಗಳನ್ನು ಧರಿಸಿದ ಅಸಂಖ್ಯ ಪಾತರಗಿತ್ತಿಗಳು ಆ ಹೂವಿನಿಂದ ಈ ಹೂವಿಗೆ ಹಾರಿ, ಮಧು ಹೀರಿ ಎಲ್ಲಿಂದಲೋ ಬಂದು ಎತ್ತಲೋ ಹಾರಿಹೋದವು. ಹೂ–ಹಣ್ಣು ಗಳು. ನದಿ–ಸರೋವರಗಳು, ಹಕ್ಕಿ–ಪಕ್ಕಿಗಳು ನಿಸರ್ಗಕ್ಕೆ ತಂದು ಕೊಡುವ ಸೌಂದರ್ಯವನ್ನು ಪತಂಗಗಳೂ ತಂದುಕೊಡುತ್ತವೆ. ಅವುಗಳ ಚಂಚಲ ವೃತ್ತಿ, ಕ್ಷಣಿಕ ಜೀವನ, ಕೈಯೊಡ್ಡಿದಾಗ ಜಾರುವ ಸ್ವಭಾವಗಳಿಂದ ಅವುಗಳ ಒಳಗುಟ್ಟು ಬಹಳ ಜನ ಕವಿ-ಕಲಾಕಾರ-ಸಾಹಿತಿ-ವಿಜ್ಞಾನಿಗಳಿಗೆ ತಿಳಿಯದೇ ಉಳಿದಿದೆ.

ಪತಂಗಗಳದು ಬೆರಗುಗೊಳಿಸಬಹುದಾದ ಜೀವನಕ್ರಮ. ಚಿಟ್ಟೆ ಜಿರಲೆಗಳ ಮರಿಗಳು ಎಲ್ಲ ಬಗೆಯಲ್ಲೂ ತಂದೆ-ತಾಯಿಗಳನ್ನು ಹೋಲಿದರೆ ಪಾತರಗಿತ್ತಿಗಳ ಮರಿಗಳು ಯಾವ ರೀತಿಯಲ್ಲೂ ಹೋಲವು. ತತ್ತಿಗಳ ನ್ನಿಡುವಾಗ ಗರ್ಭವತಿ ಪಾತರಗಿತ್ತಿ ತಾಯಿ ಎಲ್ಲಿಂದಲೋ ಹಾರಿ ಬಂದು ಭಾವೀ ಸಂತಾನಕ್ಕೆ ರುಚಿಸಬಹುದಾದ ಪರ್ಣಗಳುಳ್ಳ ಮರವನ್ನೇ ಹುಡುಕಿ ವೈರಿಗಳಿಗೆ ಕಾಣದ ರೀತಿಯಲ್ಲಿ ತತ್ತಿಗಳನ್ನು ಇಡುತ್ತದೆ. ಹುಳುವಿನ ಆಕಾರ ದಲ್ಲಿರುವ, ಹೂ ಕಾಯಿ ಎಲೆಗಳನ್ನು ಸೇವಿಸುವ ಮರಿಗಳು ಬೆಡಗುಗಾತಿ ತಾಯಿಯನ್ನು ಯಾವ ವಿಧದಲ್ಲೂ ಹೋಲುವುದಿಲ್ಲ. ಬೇಗ ಬೆಳೆದು

ದೊಡ್ಡದಾಗುವ ಆತುರತೆಯಲ್ಲಿ 'ಪೋಲಿಫಿಮಸ್' ಕೀಟವು ತನ್ನ ಜೀವನದ ಪ್ರಥಮ 24 ದಿನಗಳಲ್ಲಿ ತನ್ನ ತೂಕದ ಎಂಬತ್ತೈದು ಸಾವಿರಪಟ್ಟು ಆಹಾರ ಸೇವಿಸುತ್ತದೆ. ಈ ಆಹಾರವನ್ನೆಲ್ಲ ದಕ್ಕಿಸಿಕೊಂಡಿದ್ದರೆ ಈ ಪತಂಗಗಳು ಗರುಡನ ಗಾತ್ರವನ್ನು ಪಡೆದಿರುತ್ತಿದ್ದವು! ಪುಣ್ಯಕ್ಕೆ ಅತಿ ಸ್ವಲ್ಪ ಆಹಾರ ವನ್ನು ಜೀರ್ಣಿಸಿಕೊಂಡು ಉಳಿದದ್ದನ್ನು ಮಲದ ರೂಪದಲ್ಲಿ ಅವು ಹೊರ ಗೆಡಹುವವು. ಪತಂಗವಾಗುವ ಮೊದಲು ಈ ಹುಳುಗಳು ಚೆನ್ನಾಗಿ ಎಲೆ ಗಳನ್ನು ಮೆದ್ದು ನಿದ್ರಾವಸ್ಥೆಯನ್ನು ಪಡೆಯುವವು. ಬಳಿಕ ಅಂಗಾಂಗಗಳಲ್ಲಿ ಸಂಗ್ರಹಿಸಿಟ್ಟ ಆಹಾರವನ್ನು ಉಪಯೋಗಿಸಿ, ಪ್ರೌಢಾವಸ್ಥೆಗೆ ಒಪ್ಪಲಾರದ ಕೈಕಾಲುಗಳನ್ನು ತ್ಯಜಿಸಿ ಬಳಕುವ ದೇಹ, ಶೋಭಿಸುವ ಮೀಸೆ, ಹಾರಲು ಆಕರ್ಷಣೀಯ ರೆಕ್ಕೆ ಪಡೆದು ಹಿಂದಿನದನ್ನೆಲ್ಲ ಹೋಳಿ ಮಾಡಿ, ಹೊಸಜೀವನ ಪ್ರಾರಂಭಿಸುವವು.

ಈ ವೈಯಾರಿಯರಲ್ಲಿ ಪ್ರಕಾರಗಳೆಷ್ಟು ? ಕಣ್ಣು ಕಪ್ಪಡಿಯಷ್ಟು ದೊಡ್ಡವು, ಗುಂಗಾಡಿನಷ್ಟು ಸಣ್ಣವು, ಅಪ್ಸರೆಯರಂತೆ ಸುಂದರಿಯರು ಕಾಗೆಯಷ್ಟು ಕಪ್ಪಗೆ, ಗುಬ್ಬಿಯಂತೆ ಪ್ರಭಾಕರ ಪ್ರಿಯ, ಗೂಬೆಯಂತೆ ನಿಶಾಪ್ರಿಯ ಪತಂಗಗಳಿವೆ. ಒಂದು ಲಕ್ಷ ನಲವತ್ತು ಸಾವಿರ ಪತಂಗದ ಜಾತಿಗಳಿವೆಯೆಂದು ಕೀಟ ವಿಜ್ಞಾನಿಗಳು ಹೇಳುತ್ತಾರೆ. ಇವುಗಳಲ್ಲಿ ಹತ್ತರಲ್ಲಿ ಒಂದು ಪಾಲು ಪತಂಗಗಳು ಹಗಲಿನಲ್ಲಿ ವಿಹರಿಸಿದರೆ ಉಳಿದವು ನಿಶಾಚರರು.

ಪತಂಗದ ಶರೀರವನ್ನು ಮುಖ್ಯವಾಗಿ ಮೂರು ಭಾಗಗಳನ್ನಾಗಿ ವಿಭಾಗಿಸಬಹುದು. 1) ಸಂಪರ್ಕ ಅವಯವಗಳು ಕೇಂದ್ರಿತವಾಗಿರುವ ಶಿರ, 2) ನಡೆಯಲು ಮೂರು ಜೋಡಿ ಕಾಲು ಮತ್ತು ಎರಡು ಜೋಡಿ ರೆಕ್ಕೆಗಳುಳ್ಳ ನಡು, ಮತ್ತು, 3) ಸಂತತಿ ನಿರ್ಮಾಣದ ಅವಯವವುಳ್ಳ ಕೊನೆಯ ಭಾಗ. ಎಲ್ಲಕ್ಕೂ ಮೊದಲು ಕಾಣುವುದು ಜೋಡಿಮೀಸೆ. ಇವು ಪುರುಷತ್ವ ಎತ್ತಿ ತೋರಿಸುವ ಮೀಸೆಗಳಾಗಿರದೇ ಸಂಪರ್ಕ ಸಾಧನ ವಾದ್ದರಿಂದ ಗಂಡಿಗೂ ಹೆಣ್ಣಿಗೂ ಇರುವವು. ಮೀಸೆಗಳ ರಚನೆಯ ಮೇಲೆ ಪತಂಗಗಳಲ್ಲಿ ಮುಖ್ಯ ಮೂರು ಗುಂಪುಗಳನ್ನು ಮಾಡಬಹುದು. ಸೂರ್ಯ ಪ್ರೇಮಿಗಳಲ್ಲಿ ಮೀಸೆ ತುದಿ ಗುಂಡಾಗಿದ್ದರೆ ನಿಶಾಪ್ರಿಯರಲ್ಲಿ ಸಪಾಟಾಗಿ

ಇಲ್ಲವೆ ಗರಿಗಳಂತೆ ಹರಡಿಕೊಂಡಿರುವವು. ಜಿಗಿಯುವ ಪತಂಗ (skipper) ಗಳ ಮೀಸೆಗಳು ಕೊಕ್ಕೆಯಂತೆ ಮೊನಚಾಗಿ ಬಾಗಿರುವವು.

ಕೆಲವೊಮ್ಮೆ ಒಂದೇ ಒಂದು ವರ್ಗಕ್ಕೆ ಸೇರಿದ ಪತಂಗಗಳಲ್ಲಿ ಹೆಣ್ಣಿಗಿಂತ ಗಂಡುಗಳ ಮೀಸೆ ಹೆಚ್ಚು ಅಲಂಕಾರಭರಿತವಾಗಿರುವವು. ಇದಕ್ಕೆ ಮುಖ್ಯ ಕಾರಣವೆಂದರೆ ಇಂತಹ ಪತಂಗಗಳಲ್ಲಿ ಪ್ರೌಢ ಹೆಣ್ಣು ಮೈಯಿಂದ ಸುಗಂಧವನ್ನು ಬೀರುವುದು. ಈ ದ್ರವ ಬಾಷ್ಪರೂಪಹೊಂದಿ ಹವೆಯೊಂದಿಗೆ ದೂರ ದೂರ ಹರಡಿಕೊಳ್ಳುತ್ತದೆ. ಈ ಸುವಾಸನೆಯನ್ನು ಗೊತ್ತು ಹಚ್ಚುವ ರಂಧ್ರಗಳು ಗಂಡು ಮೀಸೆಯಲ್ಲಿರುವುದರಿಂದ ತೊಂದರೆಯಿಲ್ಲದೇ ತನ್ನ ಪ್ರೇಯಸಿಯನ್ನು ಹುಡುಕಬಲ್ಲದು

ಕವಿಗಳು, ಸಾಹಿತಿಗಳು ನವಿಲಿಗೆ ಸಾವಿರ ಕಣ್ಣು ಎಂದು ಹಾಡಿದರೂ ಅದಕ್ಕೆ ಇರುವುದು ಎರಡೇ ಕಣ್ಣು. ಆದರೆ ಉಳಿದ ಷಟ್‌ಪಾದಿಗಳಂತೆ ಪತಂಗಗಳು ಎರಡು ಸಾವಿರ ಕಣ್ಣುಗಳಿಂದ ನಮ್ಮನ್ನು ನೋಡುತ್ತವೆಯೆಂದರೆ ಯಾರು ನಂಬಿಯಾರು ? ಚಲಿಸದ, ರೆಪ್ಪೆಗಳಿಲ್ಲದ ಈ ಕಣ್ಣುಗಳು ಪ್ರತಿಯೊಂದು ವಸ್ತುವನ್ನು ಭಾಗಗಳಲ್ಲಿ ನೋಡುವುದರಿಂದ ಅದಕ್ಕೆ ಒಂದು ವಸ್ತುವಿನ ಸಾಧಾರಣ ಕಲ್ಪನೆ ಬರುತ್ತದೆ. ಎರಡು ಮೂರು ಅಡಿಗಳ ಅಂತರದಲ್ಲಿರುವ ವಸ್ತುಗಳನ್ನು ಗುರುತಿಸುವುದಕ್ಕಿಂತ ವಸ್ತುವಿನ ಆಕಾರವನ್ನು ಅದು ಗುರುತಿಸಬಲ್ಲದು. ಸ್ಥಿರವಾದ ವಸ್ತುಗಳಿಗಿಂತ ಹಾರುವ ಚಲಿಸುವ ಜೀವಿಗಳು ಅದರ ಲಕ್ಷ್ಯವನ್ನು ಸೆಳೆಯುವವು. ಹೀಗಾಗಿ ತಮ್ಮ ಆಹಾರಕ್ಕಿಂತ ವೈರಿಗಳನ್ನು ಅವು ಬಲು ಬೇಗ ಪತ್ತೆ ಮಾಡಬಲ್ಲವು. ಪಾತರಗಿತ್ತಿಗಳು ಅನೇಕ ಬಣ್ಣಗಳನ್ನು ತಿಳಿದರೂ ಅವುಗಳ ಕಣ್ಣಿಗೆ ಒಂದರಿಂದ ಇನ್ನೊಂದು ಬಣ್ಣವನ್ನು ವಿಂಗಡಿಸಲಾಗುವುದಿಲ್ಲ. ಕೆಲವು ಪತಂಗಗಳು ಮಾನವನಿಗೆ ಗೋಚರಿಸದ ನೀಲಾತೀತ (ultraviolet) ಕಿರಣಗಳನ್ನು ಗುರುತಿಸುವುದರಿಂದ ತಮ್ಮ ದಿಕ್ಕುಗಳನ್ನು ಸುಲಭವಾಗಿ ಕಂಡುಹಿಡಿಯುವವು. ಹೂವಿನಿಂದ ಹೂವಿಗೆ ಹಾರುವಾಗ ಸೂರ್ಯನ ಕಿರಣಗಳಿಗನುಸಾರವಾಗಿ ತಮ್ಮ ಹಾದಿಯನ್ನು ಬದಲಿಸುವವು. ಮುಂಜಾನೆ ಹಿಡಿದಿಟ್ಟ ಪಾತರಗಿತ್ತಿಗಳನ್ನು ಮಧ್ಯಾಹ್ನ ಬಿಡುಗಡೆ ಮಾಡಿದರೆ ತನ್ನ ಸರಿಯಾದ ದಾರಿ

ಕಂಡುಕೊಳ್ಳದೇ ಅದು ಕಂಗಾಲಾಗಿಬಿಡುತ್ತದೆ. ಈ ಕಣ್ಣುಗಳ ಹೊರತಾಗಿ ಶಿರದ ಮೇಲ್ಭಾಗದಲ್ಲಿ ಅದಕ್ಕೆ ಎರಡು ಅಥವಾ ಮೂರು ಚುಕ್ಕೆಯಂತಹ ಕಣ್ಣುಗಳಿರುತ್ತವೆ. ಅವಕ್ಕೆ ಈ ಕಣ್ಣುಗಳ ಉಪಯೋಗವೇನು ಎಂಬುದು ಸರಿಯಾಗಿ ತಿಳಿದಿಲ್ಲ.

ಪತಂಗಕ್ಕೆ ಗುಂಗಾಡಿನ ಚುಚ್ಚುವ ಬಾಯಿಯಾಗಲೀ, ನೊಣದ ಸ್ಪಂಜ್ ಬಾಯಾಗಲೀ, ಜಿರಳೆಯ ಕಡಿಯುವ ಬಾಯಾಗಲೀ ಇರದೆ ಗ್ಲಾಸಿನಿಂದ ಶರಬತ್ತು ಹೀರುವ ಹುಲ್ಲಿನಂತಹ ಪೊಳ್ಳಾದ ಬಾಯಿ ಇದೆ. ಅಂತಹ ಬಾಯಿ ನಮಗಿದ್ದರೆ ಟೇಬಲ್ಲಿನ ಒಂದು ಅಂಚಿಗೆ ಕುಳಿತವನು ಇನ್ನೊಂದು ಅಂಚಿಗೆ ಕುಳಿತವನ ಕಪ್ಪಿನಿಂದ ಚಹವನ್ನು ಹೀರಬಹುದಾಗಿತ್ತು! ಹೂವಿನ ಮಧು ತೀರ ಕೆಳಗೆ ಇದ್ದರೂ ಯಾವ ಅಡಚಣೆಯೂ ಇಲ್ಲದೇ ಕ್ಷಣಮಾತ್ರದಲ್ಲಿ ಪತಂಗಗಳು ಹೀರಿ ಹೋಗಿ ಬಿಡುವವು. ಉಪಯೋಗಿಸದೇ ಇದ್ದಾಗ ಬಾಯಿಯನ್ನು ಸುರುಳಿಯಂತೆ ಸುತ್ತಿ ಅದನ್ನು ಶಿರದ ಅಡಿಯಲ್ಲಿ ಹಿಡಿದಿರುತ್ತವೆ.

ಪತಂಗದ ಜೋಡಿ ರೆಕ್ಕೆಗಳು ಅತಿ ಆಕರ್ಷಣೀಯವಾದ ಅವಯವಗಳು. ಅವುಗಳನ್ನು ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಮಾಡಿಗೆ ಹಾಸಿದ ಹಂಚುಗಳ ಸಾಲಿನಂತೆ ವಿವಿಧ ಬಣ್ಣದ ಸಿಂಪುಗಳು ಗೋಚರಿಸುವವು. ಈ ಸಿಂಪುಗಳು ಜೋರಾದ ಗಾಳಿಗೆ ಉದುರಿ ಬೀಳುವವು, ಮುಟ್ಟಿದರೆ ಕೈಗೆ ಅಂಟಿಕೊಳ್ಳುವವು. ಬಿಳಿ, ಕೆಂಪು, ಕೇಸರಿ, ಹಳದಿ, ಹಸಿರು, ನೀಲಿ ಬಣ್ಣದ ರೆಕ್ಕೆಗಳು ಸಾಮಾನ್ಯವಾದರೂ ಮಿಶ್ರ ಬಣ್ಣಗಳು ಅಸಂಖ್ಯ.

ಪತಂಗಗಳ ಈ ವರ್ಣವೈವಿಧ್ಯ ವಿವಿಧ ದೇಶಗಳ ವಿಜ್ಞಾನಿಗಳನ್ನು ಆಕರ್ಷಿಸಿದೆ. ಡಾ. ಸಿ. ವಿ. ರಾಮನ್ನರು ತಮ್ಮ ಜೀವನದ ಅನೇಕ ವರ್ಷಗಳನ್ನು ಪತಂಗದ ಬಣ್ಣದ ಬೆನ್ನು ಹತ್ತಿ ಕಳೆದಿದ್ದಾರೆ. ಬಣ್ಣದ ಕಣಗಳನ್ನು ಸಂಗ್ರಹಿಸುವುದರಿಂದ, ಸೂರ್ಯಪ್ರಕಾಶದ ಬಣ್ಣದ ಕಿರಣಗಳನ್ನು ಪರಾವರ್ತಿಸುವುದರಿಂದ, ಇಲ್ಲವೇ ಸಿಂಪುಗಳು ಯುವ (lens) ದಂತೆ ವರ್ತಿಸುವುದರಿಂದ ಈ ವರ್ಣವೈವಿಧ್ಯ ಉಂಟಾಗುವುದೆಂದು ಈಗ ಎಲ್ಲರೂ ಒಪ್ಪುತ್ತಾರೆ. ಆದರೆ ಯಾವ ಬಣ್ಣ ಯಾತರಿಂದ ಉಂಟಾಗುವುದೆಂದು

ಪೂರ್ಣ ಅರ್ಥವಾಗಿಲ್ಲ. ಆದರೆ ಬಹುಸಂಖ್ಯಾತ ಚಿಟ್ಟೆಗಳ ಆತ್ಮರಕ್ಷಣೆ ಇವುಗಳಿಂದ ತುಂಬ ಸುಲಭವಾಗುವುದು. ಮರಗಳ ಬೊಡ್ಡೆ, ಎಲೆ, ಒಣ ಟೊಂಗೆಗಳ ಮೇಲೆ ವಾಸಿಸುವ ಪಾತರಗಿತ್ತಿಗಳ ಬಣ್ಣ ಹಿನ್ನೆಲೆಗೆ ಹೊಂದಾಣಿಕೆಯಾಗುವುದರಿಂದ ಭಕ್ಷಕ ವೈರಿಗಳಿಗೆ ಸುಲಭವಾಗಿ ಗೋಚರಿಸುವುದಿಲ್ಲ.

ದಿನದಲ್ಲಿ ಹೂವಿನಿಂದ ಹೂವಿಗೆ ಹಾರುವ ಪತಂಗಗಳಿಗೆ 'ರಬ್ಬಾ'ದ ಬಣ್ಣಗಳಿದ್ದರೆ ರಾತ್ರಿಯ ಮಂದ ಬೆಳಕಿನಲ್ಲಿ ಹಾರುವವುಗಳಿಗೆ ನಾಶೀಪುಡಿ ಬಣ್ಣವಿರುತ್ತದೆ. ಒಟ್ಟಿಗೆ ಆಹಾರ ಸೇವಿಸಿ ಬೆಳೆದ ನೂರಾರು ಪತಂಗಗಳ ಮೈಬಣ್ಣ ಮತ್ತು ಪ್ರತ್ಯೇಕವಾಗಿ ಸಾಕಿ ಬೆಳೆಸಿದ ಪತಂಗಗಳ ಬಣ್ಣ ಬೇರೆ ಬೇರೆ ಇರುತ್ತದೆ. ಈ ಅಂತರ ಕಂಬಳಿ ಹುಳಗಳಲ್ಲೂ ಎದ್ದು ಕಾಣುತ್ತದೆ. ಒಟ್ಟಿಗೆ ಪೊದೆಯಲ್ಲಿ ಬೆಳೆದವು ಕೆಂಬಣ್ಣ ತಾಳಿದರೆ ಎರಡನೆಯವು ಕಪ್ಪಾಗಿ ತೋರುವುವು. ಅದರಂತೆ ಬಿಸಿಲಿನಲ್ಲಿ ಬೆಳೆದವು ಕಟ್ಟಡದ ಒಳಗಡೆ ಬೆಳೆಸಿದವುಗಳಿಗಿಂತ ಸ್ಫುಟವಾದ ಬಣ್ಣ ಪಡೆದಿರುವವು. ಶೀತ ಪೆಟ್ಟಿಗೆಯಲ್ಲಿ ಸಾಕಿದವುಗಳು ಉಷ್ಣ ಪೆಟ್ಟಿಗೆಯಲ್ಲಿ ಬೆಳೆದವುಗಳಿಗಿಂತ ತಿಳಿಯಾಗಿ ಕಾಣುವವು. ಕೆಲವು ಪತಂಗಗಳಿಗೆ ರೆಕ್ಕೆಗಳ ಮೇಲೆ ಭವ್ಯವಾಗಿ ಕಣ್ಣುಗಳಿಗೆ ಹೊಡೆಯುವ ಬಣ್ಣ ಇರುವುದರಿಂದ ವೈರಿಗಳು ಅವುಗಳತ್ತ ಸುಳಿಯುವುದಿಲ್ಲವೆಂದು ನಂಬಲಾಗಿದೆ.

ಹೆಣ್ಣು ಅಸಂಖ್ಯಾತ ತತ್ತಿಗಳನ್ನು ಹೊತ್ತಿರುವುದರಿಂದ ಅದರ ದೇಹ ಗಂಡಿನದಕ್ಕಿಂತ ದೊಡ್ಡದಾಗಿರುತ್ತದೆ. ಬಹುಸಂಖ್ಯಾತ ಹೆಣ್ಣುಗಳಿಗೆ ಹಿಂಬದಿಗೆ ಸುಗಂಧ ಬೀರುವ ಗ್ರಂಥಿಗಳಿರುತ್ತವೆ. ಈ ಸುವಾಸನೆಗೆ ಗಂಡು ಪತಂಗ ಹಾರಿ ಬರುತ್ತದೆಂದು ಈ ಮೊದಲೇ ಹೇಳಿದೆ. ಒಂದು ಹೊಲದಲ್ಲಿ ಇಲ್ಲವೇ ಅಡವಿಯಲ್ಲಿ ಹಲವು ಜಾತಿಯ ಪತಂಗಗಳಿದ್ದರೂ ಗಂಡು ತನ್ನ ಪ್ರೇಯಸಿಯ ಜಾಡನ್ನು ತಪ್ಪದೇ ಹಿಡಿಯುವುದು. ಮೀಸೆ ಕಳೆದುಕೊಂಡ ಗಂಡಿಗೆ ಸುವಾಸನೆ ಬಡಿದರೂ ದಿಕ್ಕು ತೋರದೇ ಚಡಪಡಿಸುವುದು. ರೆಕ್ಕೆ, ಮೀಸೆ ಎರಡೂ ಕಳೆದುಕೊಂಡರೆ ಈ ಸುವಾಸನೆ ಅವಕ್ಕೆ ತಿಳಿಯದು. ಹೆಣ್ಣು ಪತಂಗದ ಮೀಸೆ, ಕಣ್ಣು, ರೆಕ್ಕೆ, ಕಾಲುಗಳನ್ನು ಕಿತ್ತು ಹಿಂಭಾಗವನ್ನಷ್ಟೇ ಇಟ್ಟರೂ ಗಂಡು ಒಂದು ಶೃಂಗಾರ ಚೇಷ್ಟೆಯನ್ನು ಪ್ರಾರಂಭಿಸುವುದು. ಹೆಣ್ಣನ್ನು ಒಂದು ಪಾತ್ರೆಯೊಳಗೆ ಅರ್ಧ ತಾಸು ಇಟ್ಟು ಆಮೇಲೆ

ತೆಗೆದರೆ ಗಂಡು ಆ ಖಾಲಿ ಪಾತ್ರೆಯತ್ತ ಆಕರ್ಷಿತವಾಗುವುದು. ಕಾಜಿನ ಕೊಳವೆಯಲ್ಲಿ ಹೆಣ್ಣು ಪತಂಗವನ್ನು ಭದ್ರವಾಗಿಟ್ಟರೆ, ಗಂಡು ಪಕ್ಕದಲ್ಲೇ ಹಾರಾಡುತ್ತಿದ್ದರೂ ಹೆಣ್ಣಿನ ಸುವಾಸನೆ ಹೊರಬಾರದ್ದರಿಂದ ಅದರ ಹತ್ತಿರ ಸುಳಿಯದು.

ಸರ್ವಸಾಧಾರಣವಾಗಿ ಪಾತರಗಿತ್ತಿಗಳು ತಾಸಿಗೆ 18 ರಿಂದ 40 ಕಿಲೋ ಮೀಟರ್ ಹಾರುವವು. ಈ ವೇಗ ಪ್ರೇಯಸಿಯೊಡನೆ ಇದ್ದಾಗ ನಿಧಾನ ವಾಗಿದ್ದರೆ ವೈರಿಗಳ ಸುಳಿವು ಹತ್ತಿದ ಕೂಡಲೇ ತೀವ್ರವಾಗುವುದು. ಯಾವ ಸಂದರ್ಭದಲ್ಲೂ ಯಾರ ಗೊಡವೆಗೂ ಹೋಗದ ಪತಂಗ ಪ್ರೇಯಸಿಗಾಗಿ ಇನ್ನೊಂದು ಪತಂಗದೊಡನೆ ಹೋರಾಡದು. ಆದರೆ ದುನಸ್ಸು ಮಾಡಿದರೆ ತಮ್ಮ ಅಳತೆಯ ಬೇರೆ ಕೀಟಗಳನ್ನು ಸೋಲಿಸುವ ಸಾಮರ್ಥ್ಯ ಕೆಲವೊಂದು ಪಾತರಗಿತ್ತಿಗಳಲ್ಲಿವೆ. ಒಮ್ಮೆ ಗಂಡು ಮಧುಪಾನ ಮಾಡಿ ತನ್ಮಯತೆಯಲ್ಲಿ ನಿಧಾನವಾಗಿ ಹಾರಾಡುತ್ತಿದ್ದಾಗ ಗುಬ್ಬಿಯೊಂದು ಅಡ್ಡ ಬಂದದ್ದರಿಂದ ಪತಂಗ ಅದನ್ನು ಬೆನ್ನಟ್ಟಿತು. ಗುಬ್ಬಿ ತಾಸಿಗೆ 40 ಕಿ. ಮೀ. ವೇಗದಿಂದ ಹಾರಿದರೆ ಪತಂಗ ಸರಳ ರೇಖೆಯಲ್ಲಿ ಅಷ್ಟೇ ವೇಗದಿಂದ ಹಾರಿ ಅದನ್ನು ಬೆನ್ನಟ್ಟಿತು. ಕಂಗಾಲಾದ ಗುಬ್ಬಿ ಯಾವುದೋ ಪೊದೆಯಲ್ಲಿ ಆಶ್ರಯ ಪಡೆದಾಗಲೇ ಪತಂಗ ತನ್ನ ಹಾದಿ ಹಿಡಿಯಿತು.

ಪತಂಗಕ್ಕೆ ಸರಿಯಾಗಿ ಹಾರಲು ಶರೀರದಲ್ಲಿ 120 ಡಿಗ್ರಿ ಉಷ್ಣತಾ ಮಾನ ಬೇಕು. ಅದು ರೆಕ್ಕೆಗಳ ಚಲನದಿಂದ ಈ ಉಷ್ಣತೆಯನ್ನು ನಿರ್ಮಿಸಿ ಕೊಳ್ಳುತ್ತದೆ. ಆದ್ದರಿಂದ ವಿಶ್ರಾಂತಿಯಲ್ಲಿದ್ದ ಪತಂಗ ಒಮ್ಮೆಲೇ ಹಾರಲಾ ರದೆ ನೆಲಕ್ಕೆ ಕುಪ್ಪಳಿಸುತ್ತದೆ.

ಸೂರ್ಯಕಿರಣಗಳಿಗೆ ಸಮಾಂತರವಾಗಿ ಹಾರುವುದರಿಂದ ಹಗಲು ಪತಂಗಗಳ ಎಲ್ಲ ಅಂಗಗಳು ಒಂದೇ ರೀತಿಯ ಪ್ರಕಾಶದಲ್ಲಿ ಇರುವವು. ನಿಶಾ ಪತಂಗಗಳು ಕತ್ತಲಲ್ಲೇ ಹಾರಬೇಕಾದ್ದರಿಂದ ತಮ್ಮ ಶರೀರವನ್ನು ಬೆಳಕಿಗೆ ತರುವ ಯತ್ನದಲ್ಲಿ ನಿರ್ದಿಷ್ಟ ಕೋನದಲ್ಲಿ ಹಾರುವವು. ಅವು ಹೀಗೆ ಪರಿವರ್ತುಲ (spiral) ವಾಗಿ ಹಾರುತ್ತ ದೀಪದ ಸುತ್ತಲೂ ಸುಳಿಯುವುದ

ರಿಂದ ಧಗಧಗಿಸುವ ದೀಪದಲ್ಲಿ ಬಿದ್ದು ಚಿಟ್ಟೆ ಸುಟ್ಟುಹೋಗುವವು. ಈ ವಿಚಿತ್ರ ವರ್ತನಕ್ಕೆ ಪತಂಗಕ್ಕಿರುವ ವಿಚಾರಶಕ್ತಿಯ ಅಭಾವವೇ ಕಾರಣ. ಮೇಣಬತ್ತಿಗಿಂತ ವಿದ್ಯುತ್ ದೀಪ, ನಿಯೋನ್ ದೀಪಗಳತ್ತ ಇವು ಹೆಚ್ಚು ಆಕರ್ಷಿತವಾಗುತ್ತವೆ. ವಿಧ್ವಂಸಕ ಪತಂಗಗಳನ್ನು ಹಿಡಿಯಲು ದೀಪದ ಪಂಜುಗಳನ್ನು ಹೊಲಗಳಲ್ಲಿ, ಅಡವಿಗಳಲ್ಲಿ ಇರಿಸುವರು. ಹೀಗೆ ಹಿಡಿದವು ಗಳನ್ನು ವಿಷದ್ರವ್ಯಗಳಿಂದ ಸುಲಭವಾಗಿ ನಾಶಮಾಡಬಹುದಾಗಿದೆ.

ಈ ಷಟ್‌ಪಾದಿಗಳಲ್ಲಿ ಧ್ವನಿ ಹೊರಡಿಸುವ ಇಂದ್ರಿಯವಿಲ್ಲದಿದ್ದರೂ ಕೇಳುವ ಇಂದ್ರಿಯವಿದೆ. ಕಣ್ಣುಕಪ್ಪಡಿ ಮುಂತಾದವು ಮಾನವನಿಗೆ ಕೇಳದ ಪ್ರತಿಧ್ವನಿ ನಿರ್ಮಿಸಿ ತಮ್ಮ ಆಹಾರ ಮತ್ತು ವೈರಿಗಳ ಪತ್ತೆಹಚ್ಚುವವು. ಆದರೆ ಈ ಧ್ವನಿ ಪಾತರಗಿತ್ತಿಗಳಿಗೆ ಕೇಳಿಸುವುದರಿಂದ ಅವು ಕಪ್ಪಡಿಗಳಿಂದ ತಮ್ಮನ್ನು ರಕ್ಷಿಸಿಕೊಳ್ಳುವವು. ಒಂದು ಪಾತರಗಿತ್ತಿಯ ದೇಹದಲ್ಲಿ ಸುಮಾರು ಮೂವತ್ತು ಸಾವಿರ ಜ್ಞಾನತಂತುಗಳು ಇರುತ್ತವೆ. ಇವುಗಳೆಲ್ಲ ಅತಿ ಸೂಕ್ಷ್ಮವಾಗಿರುವುದರಿಂದ ಸೂಕ್ಷ್ಮದರ್ಶಕದಿಂದ ನೋಡಿದಾಗಲೇ ಗೋಚರಿಸುವವು. ಆದರಂತೆ ಮೀಸೆಗಳಲ್ಲಿ, ರೆಕ್ಕೆಗಳಲ್ಲಿ ಧಡದಲ್ಲಿ ಇಡುವ ಈ ಜ್ಞಾನತಂತುಗಳು ವಿವಿಧ ಆಕಾರವವು. ಬಿಸಿ ಪದಾರ್ಥ, ರಾಸಾಯನಿಕ ಪದಾರ್ಥ, ಹಣ್ಣುಗಳ ಸುಗಂಧ ಇವುಗಳ ಸ್ಪರ್ಶವಾದ ಕೂಡಲೇ ಈ ಜ್ಞಾನ ತಂತುಗಳು ಕಾರ್ಯೋನ್ಮುಖವಾಗಿ ಮಿದುಳಿಗೆ ತಿಳಿಸುವವು. ಕೆಲವು ಪತಂಗ ಗಳಿಗೆ ಮಧುವಿನ ಸಾನ್ನಿಧ್ಯವನ್ನು ಅರಿಯುವ ಜ್ಞಾನೇಂದ್ರಿಯಗಳು ಮುಂಗಾಲುಗಳಿಗೇ ಇರುವುದರಿಂದ ಈ ಕಾಲುಗಳಿಗೆ ಸ್ವಲ್ಪ ಮಧು ಸವರಿದರೆ ಅವು ಮಧು ತಮ್ಮ ಮುಂದೆಯೇ ಇರುವುದೆಂಬ ಭ್ರಮೆಯಲ್ಲಿ ತಮ್ಮ ನಾಲಿಗೆ ಗಳನ್ನು ಸದಾಕಾಲ ಮುಂದೆ ಚಾಚುತ್ತಿರುವವು.

ತೀರ ಅಲ್ಪ ಕಾಲ ಜೀವಿಸುವ ಕೆಲವು ಪತಂಗಗಳು ಪ್ರೌಢಾವಸ್ಥೆಯಲ್ಲಿ ಯಾವ ಆಹಾರವನ್ನೂ ಸೇವಿಸದೇ ತಮ್ಮ ಜೀವನದ ಏಕಮಾತ್ರ ಧ್ಯೇಯವಾದ ಸಂತತಿನಿರ್ಮಾಣ ಕಾರ್ಯಮಾಡಿ ದೇವನಲ್ಲಿ ಐಕ್ಯವಾಗುವವು. ಕೆಲ ಮಾಂಸಾ ಹಾರಿ ಪತಂಗಗಳು ಚಿಕ್ಕ ಪುಟ್ಟ ಹುಳ ಹುಪ್ಪಡಿ ತಿಂದು ಜೀವಿಸುವುದೂ ಉಂಟು. ಬಹುಸಂಖ್ಯಾತ ಪತಂಗಗಳು ಮಧುಪಗಳು. ನಿರಾಹಾರಿಯಾಗಿದ್ದ

ವುಗಳು ಬಹುಬೇಗ ಸಾವನ್ನಪ್ಪಿಕೊಳ್ಳುವುದಲ್ಲದೇ ತತ್ತಿಗಳನ್ನು ತೀರ ಕಡಿಮೆ ಪ್ರಮಾಣದಲ್ಲಿ ಇಡುವವು. ಅದೇ 5% ಸಕ್ಕರೆಯು ನೀರು ಮತ್ತು 5% ಜೇನುತುಪ್ಪ ಆಹಾರವಾಗಿ ಕೊಟ್ಟರೆ ದೀರ್ಘಕಾಲ ಬದುಕುವವು. ರೇಶಿಮೆ ಪತಂಗದಂತಹ ಉಪಯೋಗಕಾರಿ ಕೀಟಗಳಿಗೆ ಆಹಾರದ ಜೊತೆ ವಿಟಾಮಿನ್ ಪ್ರೋಟೀನುಗಳನ್ನು ಕೊಟ್ಟು ಹೆಚ್ಚಿನ ತತ್ತಿಗಳನ್ನು ಪಡೆಯುತ್ತಾರೆ.

ಸರ್ವಸಾಧಾರಣವಾಗಿ ಪ್ರೌಢ ಪತಂಗಗಳು 35–40 ದಿನಗಳವರೆಗೆ ಬಾಳಿ ಬದುಕುವವು. ಶೀತ ದೇಶದಲ್ಲಿ ಇದಕ್ಕೂ ಹೆಚ್ಚು ಉಷ್ಣ ಪ್ರದೇಶದಲ್ಲಿ ಇದಕ್ಕೂ ಕಡಿಮೆ ಅವಧಿಯ ಕಾಲ ಅವು ಬದುಕುವವು. ಕಡು ಚಳಿಯಲ್ಲಿ, ಕಡು ಬೇಸಿಗೆಯಲ್ಲಿ ಅವು ತಮ್ಮ ಕಾರ್ಯಕಲಾಪಗಳನ್ನು ಸ್ಥಗಿತಗೊಳಿಸಿ ಶೀತನಿದ್ರೆ (hibernation) ಅಥವಾ ಉಷ್ಣನಿದ್ರೆ (aestivation) ಯಲ್ಲಿ ತೊಡಗುವವು. ನಂತರ ಹವಾಮಾನ ಸುಧಾರಿಸಿದಾಗ ಕಾರ್ಯೋನ್ಮುಖವಾಗುವವು. ಕೆಲವು ಹಕ್ಕಿಗಳು ಚಳಿಗಾಲದಲ್ಲಿ ದೇಶಾಂತರ ಮಾಡಿ ಉಷ್ಣ ಪ್ರದೇಶಗಳಿಗೆ ಹೋಗುವುದುಂಟು. ಮೊನಾರ್ಕ್ ಪತಂಗ ಸ್ಥಳಾಂತರಕ್ಕಾಗಿ (migration) ಖ್ಯಾತಿ ಪಡೆದಿದೆ. ಉತ್ತರ ಅಮೇರಿಕದಲ್ಲಿ ಕಂಡುಬರುವ ಈ ಪತಂಗಗಳು ಚಳಿಗಾಲದ ಮೊದಲಲ್ಲಿ ಹಿಂಡುಗಟ್ಟಿಕೊಂಡು ದಕ್ಷಿಣಕ್ಕೆ ಸಾಗುವವು. ಆಹಾರವಿಲ್ಲದೇ ಇಡೀ ದಿನ ಹಾರುವವು. ಕತ್ತಲೆಯಾದೊಡನೆ ಮರ ಒಂದರಲ್ಲಿ ಬೀಡು ಬಿಟ್ಟು ನಿದ್ರಿಸುವವು. ದಣಿವಿನಿಂದ, ಪಕ್ಷಿಗಳ ಆಹಾರವಾಗಿ ಬಹಳಷ್ಟು ಸತ್ತು ಹೋದರೂ ಉಳಿದವು ತಮ್ಮ ನಿರ್ಧಾರ ಬದಲಿಸದೇ ಹಾರುವವು. ನದಿ, ಕೊಳ್ಳ, ಗುಡ್ಡ, ಸಮುದ್ರಗಳನ್ನು ದಾಟಿ ಇವು ತಮ್ಮ ಗುರಿ ಸೇರುವುದನ್ನು ನೋಡಿ ವಿಜ್ಞಾನಿಗಳು ಸೋಜಿಗಪಡುವಂತಾಗಿದೆ. ಸದಾ ಸೂರ್ಯನ ಕಿರಣಗಳ ನಾಡಾದ ಫ್ಲೋರಿಡಾ ಅಥವಾ ಬರಮುಡಾಕ್ಕೆ ಅವು ತಲುಪಿದಾಗ 600 ಮೈಲಿಗಿಂತ ಹೆಚ್ಚು ಸುತ್ತಿದಂತೆ ಆಗುವುದು. ಚಳಿಗಾಲ ಮುಗಿಯಲು ಅವು ತಮ್ಮ ಸಂತತಿಯೊಡನೆ ತಿರುಗಿ ತಮ್ಮ ನೆಲೆಗೆ ಮರಳುವವು.

ಪಾತರಗಿತ್ತಿಗಳು ಕೋಮಲ ಕೀಟಗಳಾದರೂ ಅವುಗಳ ಹುಳಗಳು ಬಲವುಳ್ಳವಿದ್ದು ತಮ್ಮ ತೂಕದ ಐವತ್ತುಪಟ್ಟು ಭಾರವುಳ್ಳ ವಸ್ತುಗಳನ್ನು

ಸುಲಭವಾಗಿ ಎತ್ತಬಲ್ಲವು. ಈ ಹುಳುಗಳ ಶಕ್ತಿ ಮಾನವನಿಗೆ ಇದ್ದರೆ ಅವನು ತನ್ನ ತೂಕ ಎತ್ತರಗಳ ಪ್ರಕಾರ ಹತ್ತು ಟನ್ ಭಾರವನ್ನು ಎತ್ತ ಬೇಕೆಂದು ಗಣಿತ ಪಂಡಿತ ಹೇಳುವನು! ಇಂಥ ಶಕ್ತಿಗೆ ಕಾರಣವಿಲ್ಲದೇ ಇಲ್ಲ. ಮಾನವನ ಶರೀರದಲ್ಲಿ ದಣಿಯುದ ಎಂಟುನೂರು ತರ ಮಾಂಸಖಂಡಗಳಿದ್ದರೆ ಪಟ್‌ಪಾದಿಗಳಲ್ಲಿ ನಾಲ್ಕು ಸಾವಿರಕ್ಕೂ ಮಿಕ್ಕಿ ಮಾಂಸಖಂಡಗಳಿವೆ.

ಪಾತರಗಿತ್ತಿಗಳಲ್ಲಿ ಆಗುವ ದೈಹಿಕ ರಚನೆಯು ಬದಲಾವಣೆಗಳನ್ನು ವಿಜ್ಞಾನಿಗಳು ವಿವಿಧ ರೀತಿಗಳಲ್ಲಿ ಅಭ್ಯಸಿಸಿದ್ದಾರೆ. ಚೆನ್ನಾಗಿ ಆಹಾರ ಸೇವಿಸಿ ನಿದ್ರಾವಸ್ಥೆ ಪಡೆಯುವ ಮೊದಲು ರೇಶಿಮೆ ಹುಳದಂತಹ ಕೀಟದ ವಿವಿಧ ಭಾಗಗಳಲ್ಲಿ ಕೂದಲೆಳೆಗಳಿಂದ ಬಿಗಿದರೆ (ligaturing) ಅದರ ಜೀವನದ ಗುಟ್ಟುಗಳು ಬಯಲಾಗದೇ ಇರವು. ವಿಶ್ರಾಂತಿ ಪಡೆಯಲಿರುವ ಹುಳದ ಮೆದುಳಿನಲ್ಲಿ ಕೆಲವು ಹಾರ್‌ಮೋನುಗಳು ಉತ್ಪಾದಿತವಾಗಿ ರಕ್ತದ ಜೊತೆ ಹರಿದಾಡಿ ಅಂಗಾಂಗಗಳಿಗೆ ಮುಟ್ಟುವವು. ಈ ಸಮಯದಲ್ಲಿ ಅದನ್ನು ಕಟ್ಟಿದರೆ ಮಿದುಳಿನತ್ತ ಇರುವ ಭಾಗ ಪರಿವರ್ತನೆ ಹೊಂದಿದರೂ ಹಿಂಭಾಗ ಹುಳದಂತೆಯೇ ಇರುವುದು. ನಂತರ ಶಿರೋಭಾಗದಿಂದ ಹೊರ ಬಿದ್ದ ಪತಂಗಕ್ಕೆ ಶಿರ ಮತ್ತು ನಡುಗಳಷ್ಟೇ ಇರುವವು. ಇದರಂತೆ ವಿಶ್ರಾಂತಿ ಪೂರ್ವದ ಕೀಟಗಳನ್ನು ಇಬ್ಭಾಗ ಮಾಡಿ ರಕ್ತಸಂಚಾರಕ್ಕೆ ಅನುವು ಮಾಡಿ ಕೊಡಲು ಕೊಳವೆಯನ್ನು ಜೋಡಿಸಿದರೆ ಸಂಪೂರ್ಣ ಸಿದ್ಧವಾಗುವ ಪತಂಗದ ನಡುಗಳು ಉಳಿದ ದೇಹದ ಭಾಗಕ್ಕೆ ಕೊಳವೆಯಿಂದ ಜೋಡಿಸಲ್ಪಟ್ಟಿರು ತ್ತವೆ. ಇಂತಹ ಅಕರಾಳ ವಿಕರಾಳ ಹೆಣ್ಣಿನೊಂದಿಗೆ ಕೂಡ ಗಂಡು ಪ್ರಣಯ ದಲ್ಲಿ ತೊಡಗಿರುತ್ತದೆ.

ಪತಂಗಗಳು ಕಲಾಕಾರರಿಗೆ, ಛಾಯಾಗ್ರಹಣಕಾರರಿಗೆ ಆಕರ್ಷಕವಾಗಿ ಕಂಡರೂ ಅವುಗಳ ನಿಜಜೀವನ ಕರುಣಾಜನಕವಾಗಿದೆ. ನೂರಾರು ತತಿ ಗಳು ಬಿಸಿಲಿನ ತಾಪಕ್ಕೆ, ಚಳಿಮಳೆಗೆ ನಾಶವಾಗುವವು. ನಂತರ ನಿರ್ದಿಷ್ಟ ಆಧಾರ ದೊರೆಯದೇ ಕೀಟಗಳಿಗೆ ಬಹುಸಂಖ್ಯೆಯಲ್ಲಿ ಸಾವು ಬರುವುದು. ಬೇವಿನ ಪರ್ಣದ ಹುಳಗಳು ಬೇವು ದೊರೆಯದಿದ್ದರೆ ಮಾವಿನ ಪರ್ಣಗಳಿಗೆ ಎಂದೂ ಬರಲಾರವು (ಆದರೆ ಮಾವಿಗೆ ಬೇವಿನ 'ಸುಗಂಧ' ಸವರಿದರೆ ಅವು

ಹೊಂದಿಕೊಳ್ಳುವವು). ಆದರೆ ಈ ಆಹಾರದಿಂದ ಅವುಗಳ ಸಾವುನೋವು ಗಳ ಸಂಖ್ಯೆ ಏರುವುದು. ನಂತರದ ಪೀಳಿಗೆಗಳು ಮಾವಿನ ಪರ್ಣಗಳ ಮೇಲೆಯೇ ಜೀವಿಸಲು ಕಲಿಯುವವು. ಪಾತರಗಿತ್ತಿಗಳಿಗೆ ಷಟ್‌ಪಾದಿ ವೈರಿಗಳು ಅನೇಕ. ಬರಿಗಣ್ಣಿಗೆ ಕಾಣಿಸದ ಕೀಟಗಳು ಇವುಗಳ ತತ್ತಿಯಲ್ಲಿ ತಮ್ಮ ಸಂತತಿಯನ್ನು ಸಾಕುವವು. ನಿದ್ರಾವಸ್ಥೆಯಲ್ಲಿ ವೈರಿಗಳು ಪೀಡಿಸು ವುದು ಸಾಮಾನ್ಯ. ಜೇಡ, ಓತಿಕಾಟ, ಕಪ್ಪೆ, ಪಕ್ಷಿಗಳು ಸದಾಕಾಲ ಪತಂಗ ಗಳನ್ನು ತಿಂದು ತೇಗುತ್ತವೆ. ಅಲ್ಲದೇ ಅನೇಕ ರೋಗಗಳಿಂದ ತತ್ತಿ, ಹುಳ, ನಿದ್ರಾವಸ್ಥೆ ಮತ್ತು ಪ್ರೌಢಾವಸ್ಥೆಗಳಲ್ಲೂ ಈ ಕೀಟ ಸಾಯುವುದುಂಟು. ಇಷ್ಟೆಲ್ಲ ಕಷ್ಟ-ನಷ್ಟ ಸಾವು-ನೋವು ಅನುಭವಿಸಿದರೂ ಬಣ್ಣದಿಂದ ಮೆರೆ ಯುತ್ತದೆ ಮೆರುಗಿನ ಈ ಕೀಟ. ಪಾತರಗಿತ್ತಿಗಳಿಲ್ಲದೇ ಸೃಷ್ಟಿಸೌಂದರ್ಯ ಪೂರ್ಣವಾಗಲಾರದು.

# 14. ಮೀಸೆ ಮಂಡೋದರಿಯರು

ಇಪ್ಪತ್ತನೆಯ ಶತಮಾನದ ಅಂತ್ಯದಲ್ಲಿಯೂ ಸ್ತ್ರೀಯರು ತಮ್ಮ ಸ್ವಾತಂತ್ರ್ಯಕ್ಕಾಗಿ ಹೂಡಿದ ಚಳವಳಿ ಯಶಸ್ವಿಯಾಗದ್ದರಿಂದ ಕೀಟಪ್ರಪಂಚದಿಂದ ಅವರು ಕಲಿಯಬೇಕಾದದ್ದು ಅಸಂಖ್ಯಾತ. ಸ್ತ್ರೀಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ ಎಂದು ಮನು ಸಾರುವ ಸಹಸ್ರಾರು ವರ್ಷಗಳ ಪೂರ್ವದಿಂದಲೇ ಕೀಟಕನ್ಯೆಯರು ಸಮಾನತೆ ಸಾಧಿಸಿದರಷ್ಟೇ ಅಲ್ಲ, ಪುರುಷಕೋಟಿಯನ್ನು ಅಂಕಿತದಲ್ಲಿಟ್ಟು, ಸ್ವೇಚ್ಛೆಯ ಸ್ವತಂತ್ರ ಜೀವನ ನಡೆಸುತ್ತ ಬಂದಿದ್ದಾರೆ. ಮಹಮ್ಮದಾಲಿ, ಕಿಂಗ್‌ಕಾಂಗ್, ದಾರಾಸಿಂಗರು ಬಾಕ್ಸಿಂಗ್, ಕುಸ್ತಿಯ ಚಕ್ರವರ್ತಿಗಳಾದರೆ, ಕೀಟಜಗತ್ತಿನಲ್ಲಿ ಗೆದ್ದಲು, ಜೇನು, ಇರುವೆರಾಣಿಯರು ಭಾರ-ಶಕ್ತಿಗಳ ಪ್ರತೀಕವಾಗಿದ್ದಾರೆ. ಕೂಳಿಗೆ ದಂಡ, ಗೂಡಿಗೆ ಭಾರವಾದ ಗಂಡನ್ನು ಗೂಡಿನಿಂದ ಹೊಡೆದೋಡಿಸುವಂತೆ ಆಜ್ಞಾಪಿಸಲು ಜೇನುರಾಣಿ ಎಂದೂ ಹಿಂದೆ-ಮುಂದೆ ನೋಡುವುದಿಲ್ಲ. ರಶಿಯನ್ ಗೃಹಿಣಿಯಂತೆ ಕಟ್ಟುಮಸ್ತಾದ ಕೀಟನಾರಿ, ಪತಿಗಿಂತ ಭವ್ಯವಾಗಿರುವುದರಿಂದ ಸುಲಭವಾಗಿ ಪುರುಷವರ್ಗವನ್ನು ನಿಯಂತ್ರಿಸಬಲ್ಲಳು. ಆದ್ದರಿಂದ ಸ್ತ್ರೀಯರು ಪುರುಷರೊಂದಿಗೆ ಸರಿಸಮಾನರಾಗುವ ಜೊತೆಗೆ ಅವರನ್ನು ನಿಯಂತ್ರಿಸುವುದನ್ನು ಧ್ಯೇಯವಾಗಿಟ್ಟುಕೊಂಡರೆ, ತಮ್ಮ ಶಾರೀರಿಕ ಶಕ್ತಿ ಬೆಳೆಸಿಕೊಳ್ಳದೇ ಬೇರೆ ಮಾರ್ಗವೇ ಇಲ್ಲ. ಸ್ತ್ರೀಯರನ್ನು ಅಬಲೆಯರೆಂದು ಕರೆದು, ಆಕರ್ಷಣೆ ಹೆಚ್ಚಿಸುವ ನೆಪದಿಂದ, ಅವರನ್ನು ಲತಾಂಗಿ, ಕೃಶಾಂಗಿಯರೆಂದು ಹೊಗಳಿ

ಶಕ್ತಿಹೀನರನ್ನಾಗಿ ಮಾಡುವುದರಲ್ಲಿ ಪುರುಷರು ಯಶಸ್ವಿಯಾಗಿದ್ದಾರೆ. ಈ ಕುತಂತ್ರ ಸ್ತ್ರೀ-ಸ್ವಾತಂತ್ರ್ಯ ಹೋರಾಟಗಾರರ ಲಕ್ಷ್ಯಕ್ಕೆ ಯಾಕೆ ಬಂದಿಲ್ಲ ಎಂಬುದು ತಿಳಿಯದಾಗಿದೆ !

ಮೀಸೆ ಇದ್ದವ ಗಂಡು, ಅದಿಲ್ಲದಿದ್ದವಳು ಹೆಣ್ಣು ಎಂದು ಒಪ್ಪುವ ಮಾನವನ ಸಮಾಜದಲ್ಲಿ ಸ್ತ್ರೀಯೊಬ್ಬಳ ಮೇಲ್ತುಟಿಯನ್ನು ಎಳೆ ಮೀಸೆ ಅಲಂಕರಿಸಿದಾಗ ಅವಳಿಗೆ ಜಂಗು ಹತ್ತಿದ ಬ್ಲೇಡನ್ನು ಕಾಣಿಕೆಯಾಗಿ ಕೊಟ್ಟು, "ಮೀಸೆ ಬೋಳಿಸಿಕೊಳ್ಳೇ ಮಂಡೋದರಿ !" ಎಂದು ಚುಡಾಯಿಸುವುದು ಶಾಲೆ-ಕಾಲೇಜುಗಳಲ್ಲಿ ತೀರ ಸಾಮಾನ್ಯ. ಇದನ್ನೇ ಕೀಟಲೋಕದಲ್ಲಿ ಮಾಡ ಹೋದರೆ ಮೀಸೆಯೊಂದಿಗೆ ಕೈಕಾಲು ಮುರಿದುಕೊಳ್ಳುವುದು ಖಂಡಿತ ! ಷಟ್‌ಪಾದಿ ಕೀಟವನಿತಾ ವರ್ಗವಂತೂ ಮೀಸೆ ಬೆಳೆಸುವುದಷ್ಟೇ ಅಲ್ಲ, ಪುಂಕೀಟಕ್ಕಿಂತ ಘನವಾದವನ್ನು ಅಭಿಮಾನದಿಂದ ಹೊತ್ತು ತಿರುಗಾಡುತ್ತ ಹಾರಾಡುತ್ತಿರುತ್ತದೆ. ಗಂಡು ರೇಶಿಮೆ ಪತಂಗಕ್ಕೆ ತಿದ್ದಿದ ದಾರದಂತಹ ಮೀಸೆಗಳಿದ್ದರೆ ಹೆಣ್ಣಿಗೆ ಪೊದೆ ಪೊದೆಯಾಗಿ, ಗೊಂಚಲು ಗೊಂಚಲಾಗಿ ಮೀಸೆಗಳಿರುತ್ತವೆ. ಕೀಟಸಮಾಜದ ಈ ಗುಟ್ಟು ಸ್ತ್ರೀ ವಿಮೋಚನಾ ಚಳವಳಿ ಗಾರರ ಲಕ್ಷ್ಯಕ್ಕೆ ಬಂದಂತಿಲ್ಲ. ತಮಗೆ ಮೀಸೆ ಇಲ್ಲದಿರುವುದೇ ಅಬಲೆಯ ರಾಗಲು ಮುಖ್ಯ ಕಾರಣವೆಂದು ಅರಿತಿದ್ದರೆ, ಲಲನಾಮಣಿಯರು ಪುರುಷ ರನ್ನು ಎಂದೋ ಸರಿಗಟ್ಟಿ ಹಿಂದೆಯೂ ಹಾಕಿ ಬಿಡುತ್ತಿದ್ದರು ! "ಶಾರೀರಿಕ ಉಬ್ಬು-ತಗ್ಗುಗಳನ್ನು ಆಕರ್ಷಕವಾಗಿ ತೋರಿಸುವ ಬಟ್ಟೆಗಳನ್ನು ಧರಿಸದಿರಿ. ಸುಗಂಧ ದ್ರವ್ಯಗಳನ್ನು ಲೇಪಿಸಿಕೊಳ್ಳದಿರಿ. ಸಿಂಪಕಟಿಗಾಗಿ ಯತ್ನಿಸದಿರಿ. ಕಲೆಯ ಹೆಸರಿನಲ್ಲಿ ಕಾಮಪ್ರಚೋದನೆಗೆ ಕಾರಣವಾಗದಿರಿ" ಎಂದು ಕರೆ ಕೊಟ್ಟವರು "ಪುರುಷಕೋಟಿಗೆ ನಾಚಿಕೆ ಬರುವಂತಹ ಮೀಸೆ ಬೆಳೆಸಿ" ಎಂದು ಸಾರುವುದು ಮಕ್ಕಳ ತಾಯಿ ಆಗದಿರಿ ಎಂದು ಸಾರುವಷ್ಟೆ ಅಸಾಧ್ಯ ಮತ್ತು ಅವ್ಯವಹಾರಿಕವೆಂದು ಅರಿತಂತಿದೆ.

ನಮ್ಮಲ್ಲಿ ಕುಡಿಮೀಸೆ, ಕಪ್ಪಿಮೀಸೆ, ಕಡ್ಡಿಮೀಸೆ, ಕತ್ತರಿಮೀಸೆಗಳು ಖ್ಯಾತಿ ಪಡೆದಂತೆ ಪ್ರಾಣಿಪ್ರಪಂಚದಲ್ಲಿ ಕೀಟ ಮೀಸೆಗಳು ಹೆಸರುವಾಸಿ ಯಾಗಿವೆ. ಪರಿಸರದಲ್ಲಿ ಒಮ್ಮೆ ಕಣ್ಣು ಬಿಟ್ಟು ನೋಡಿದರೆ ಈ ರಂಜಕ

ಮೀಸೆಗಳಲ್ಲಿ ಕೆಲವಾದರೂ ಕಣ್ಣಿಗೆ ಬೀಳುವಂತಿವೆ. ಅಡಿಗೆ ಮನೆಯಲ್ಲಿ ಯಾವ ಸೋಗೂ ಇಲ್ಲದೇ ಕನ್ಯಾ ಶಿಕಾರಿಯಲ್ಲಿ ತೊಡಗಿರುವ ರಸಿಕ ನೊಣ ರಾಯನಿಗಿರುವುದು ತಲವಾರ ಮೀಸೆ. ಕತ್ತಲೆಮೂಲೆಯಲ್ಲಿ ಆಳುತ್ತ ಇರುವ ಸರ್ವ ಖಾದ್ಯ ಭಕ್ಷಕಜೊಂಡಿಗರಾಜ, ಚಾವಟಿಗೆ ಮೀಸೆಯಲ್ಲಿ ಶೋಭಿ ಸುತ್ತಾನೆ. ಏಕತಾರಿ ನಾದ ಹೊರಡಿಸುತ್ತ ಹಾರುವ ಅಲೆಮಾರಿ ಸೊಳ್ಳೆ ಗಿರುವುದು ಶರಮೀಸೆ. ನಾರೀಮಣಿಗಳ ತಲೆಯಲ್ಲೇ ಶೋಭಿಸುವ ಹೇನು, ಅಭಿಮಾನದಿಂದ ತಿರುಗಿಸುವುದು ಕುಡಿಮೀಸೆ. ಮಲಗಿ ನಿದ್ರಿಸುವಾಗ ತನ್ನ ಇರುವಿನತ್ತ ಲಕ್ಷ್ಯ ಸೆಳೆಯುವ ತಗಣಿಗೆ ಇರುವುದು ಬೋಳುಮೀಸೆ. ಪೋಣಿ ಸಿದ ಮುತ್ತಿನಂತಹ ಮೀಸೆ ಗೆದ್ದಲಿಗಿದ್ದರೆ ಇರುವೆಗೆ ಇರುವಂಥವು ರಾಮನ ಬಿಲ್ಲಿಗೆ ನಾಚಿಕೆ ತರುವಂಥವು. "ಚುಚ್ಚುತ್ತೆ ರಾಯರೇ" ಅನ್ನುವಷ್ಟು ಹರಿತ ವಾದ ಮೀಸೆಗಳು ಚಿಟ್ಟೆಯವಾದರೆ ಹಸುವಿನ ಬಾಲದ ಆಕಾರದ ಮೀಸೆ ಪತಂಗದ್ದು. ಧಾನ್ಯಕೀಟಕ್ಕೆ ಬೀಸಣಿಗೆಯಂಥವಿದ್ದರೆ ಅಕ್ಕಿ ಕೀಟಕ್ಕೆ ಕುಂಚ ದಂಥವು. ಕೀಟ ಮೀಸೆಗಳ ವೈವಿಧ್ಯ ನೋಡಿ ಆನಂದಿಸಬೇಕೇ ಹೊರತು ಎಂತಹ ಕವಿಯಿಂದಲೂ ಅವುಗಳನ್ನೆಲ್ಲ ವಿವರಿಸಲು ಅಸಾಧ್ಯವಾದ ಮಾತು. ಮೋಜಿನ ಮಾತೆಂದರೆ ಎಲ್ಲ ಹೆಣ್ಣು ಕೀಟಗಳಿಗೆ ಮೀಸೆ ಇರುವದಲ್ಲದೇ ಅವು ಗಂಡಿನ ಮೀಸೆಗಿಂತಲೂ ಭವ್ಯ ಮತ್ತು ಆಕರ್ಷಕವಾಗಿರುತ್ತವೆ. ಉದಾ ಹರಣೆಗೆ ಎಲ್ಲರೂ ನೋಡಿರಬಹುದಾದ ಗಂಡು ರೇಶಿಮೆ ಪತಂಗಕ್ಕೆ ಸರಳ ಮೀಸೆಗಳಿದ್ದರೆ ಹೆಣ್ಣು ಪತಂಗಕ್ಕೆ ಪೊದೆ ಪೊದೆಯಾಗಿರುವ ಭಾರೀ ಮೀಸೆ ಗಳಿರುತ್ತವೆ ! ಇಂಥ ಮೀಸೆಗಳ ವೈವಿಧ್ಯ ನಮ್ಮ ನಾರಿಮಣಿಗಳಿಗಿದ್ದರೆ ಹೇಗೆ ಇರುತ್ತಿತ್ತು ಎಂಬ ವಿಚಾರವೇ ತಮಾಷೆಯದು.

ಆಧುನಿಕ ಮಾನವರು, ಹೆಣ್ಣನ್ನು ಅನುಕರಿಸಿಯೋ ಆಕೆಯ ಆಕ್ಷೇಪಣೆ ಯಿಂದಲೋ ಬೋಳುಮೀಸೆಯವರಾಗಿ ಮುಂದರಿಯುತ್ತಿದ್ದಾರೆ. ಕ್ಯಾಲೆಂಡ ರುಗಳಲ್ಲಿ ದೇವಾಧಿದೇವತೆಗಳ ಮುಖಗಳೂ ಮೀಸೆರಹಿತವಾದವು. ಆದರೆ ಹಿಂಗಳೆಯರು ಮೀಸೆಗಳನ್ನು ಗೌರವದಿಂದ ಕಾಣುವ ಕಾಲ ಒಂದಿತ್ತು. ಅಂತೆಯೇ ಯೋಧವರ್ಗದಲ್ಲಿ ರಜಪೂತರಲ್ಲಿ ಸ್ಪರ್ಧೆಯಿಂದ ಭಾರೀ ಮೀಸೆ ಗಳನ್ನು ಬೆಳೆಸುತ್ತಿದ್ದರು. ರಾಣಿ ರೂಪಮತಿ ಬಾಝು ಬಹಾದೂರನ

ಮೀಸೆಯು ಓರಣಕ್ಕೆ ಮನಸೋತಿದ್ದರೆ ಆಶ್ಚರ್ಯವಿಲ್ಲ. ಉದಯಸಿಂಗ್, ಪ್ರತಾಪ್‌ಸಿಂಗ್, ಸೂರಜಮಲ್ ಜಾಟರ ಶೌರ್ಯದಷ್ಟೇ ಮೀಸೆಗಳೂ. ಪ್ರಖ್ಯಾತ ವೀರರ ಯುಗ ಮುಗಿದಂತೆ ಮೀಸೆಯ ವೈಭವವೂ ಇಳಿಮುಖ ವಾಯಿತು. ಇತ್ತೀಚೆಗೆ ಪೋಲೀಸ್ ಖಾತೆಯ ಕೆಲವರಾದರೂ ಈ ಪೌರುಷದ ಸಂಕೇತವನ್ನು ಬೆಳೆಸಲೆತ್ನಿಸುವುದು ಆಶಾದಾಯಕವಾಗಿದೆ. ಒಂದು ಕಾಲೇಜ ಕನ್ಯೆಯರು ಇಂಥ ಮೀಸೆಗೆ ಮನಸೋತೋ, ಮಹತ್ವಕೊಟ್ಟೋ, ತಮ್ಮ ಕಾಲೇಜಿನ ಎದುರು ಚೌಕಿನಲ್ಲಿ ಮೀಸೆ ಪೋಲೀಸರನ್ನೇ ನೇಮಿಸಬೇಕೆಂದು ಅಧಿಕಾರಿಗಳಿಗೆ ಮನವಿ ಮಾಡಿಕೊಂಡಿದ್ದಾರಂತೆ. ವಿದೇಶಿ ಪ್ರಯಾಣಿಕರನ್ನು ಸ್ವಾಗತಿಸುವ ಪಂಚತಾರಾ ಹೋಟೇಲಿನವರೂ ಇದೇ ಬಿನ್ನಹ ಪೋಲೀಸ ಖಾತೆಗೆ ತಲುಪಿಸಿದ್ದಾರಂತೆ ! ಕೀಟಜಗತ್ತಿನಲ್ಲಿ ಈ ಮಾನದಂಡದಿಂದ ಪ್ರಜೆ ಗಳಿಗಿಂತ ಪೋಲೀಸರೇ ಅಧಿಕ ಪ್ರಮಾಣದಲ್ಲಿ ಕಂಡು ಬರುತ್ತಾರೆ.

ಮೀಸೆ ಬಂದಾಗ ಮಕ್ಕಳು ತಮ್ಮನ್ನು ಅಲಕ್ಷಿಸಬಹುದೆಂಬ ಭೀತಿ ಕೀಟ ಪಿತನಿಗಿಲ್ಲ. ಆ ಪ್ರಪಂಚದಲ್ಲಿ ಮೀಸೆ ತಾರುಣ್ಯದ ಸಂಕೇತವಾಗಿರದೇ ಕೈ-ಕಾಲುಗಳಂತೆ ಹುಟ್ಟಿನಿಂದ ಬರುವಂತಹುದು. ನಮ್ಮಲ್ಲಿ ಲಕ್ಷಕ್ಕೊಬ್ಬಳು ಮೀಸೆ ಮಂಡೋದರಿಯಿದ್ದರೆ ಇಷ್ಟೊಂದು ಗೋಳಾಡಿಸುತ್ತಾರೆ. ಎಲ್ಲ ರಿಗೂ ಇರುವಂತಾಗಿದ್ದರೆ, ಮಾನವ ಮನ್ಮಥರ ಮೀಸೆ ಎಂದೋ ಮಣ್ಣಾಗು ತ್ತಿದ್ದವು. ಕೀಟಗಳಲ್ಲಿ ಮೀಸೆಗಳು ಪ್ರಣಯ ಜೀವನಕ್ಕೆ ಧಕ್ಕೆ ಬಾರದಂತೆ ಮೇಲ್ದುಟಿಯ ಮೇಲಿರದೇ, ಶಿರವನ್ನು ಅಲಂಕರಿಸಿರುತ್ತವೆ. ಅವಕ್ಕೆ ಓಡಾಟದ ಅವಯುವದಂತೆ ಸ್ಪರ್ಶ ಸಾಧನವಾಗಿ ಬಳಸಿಕೊಳ್ಳಲು ಅನುಕೂಲ ವಾಗಿದೆ. ತಮ್ಮ ಸಂಗಾತಿಗಳನ್ನು ಮೀಸೆಯ ಗಂಧದಿಂದಲೇ ಗುರುತಿಸು ತ್ತವೆ. ಉಷ್ಣ, ಶೀತ, ಗಂಡಾಂತರ ಸನ್ನಿವೇಶಗಳನ್ನು ಅವು ಮೀಸೆಗಳಿಂದಲೇ ಅರಿತು ಪ್ರತಿಕ್ರಿಯೆ ವ್ಯಕ್ತಪಡಿಸುವವು. ಕೀಟಮೀಸೆಗಳು ಬೆಳೆಯದ್ದರಿಂದ ಅವುಗಳನ್ನು ಕತ್ತರಿಸುವ ಸಮಸ್ಯೆ ಕೀಟವರ್ಗಕ್ಕಿಲ್ಲ. ಧೂಳು ದ್ರವ್ಯ ಝಾಡಿಸಿ ಡುವುದು ಸುಲಭ.

ಚಲಚ್ಚಿತ್ರ ಪ್ರಭಾವದಿಂದಾಗಿ ಅತ್ಯಾಧುನಿಕರೆನಿಸಿಕೊಳ್ಳುವವರಿಗೆ ಹೊಸ ಫ್ಯಾಶನ್‌ಗಳ ಹಪಾಪಿ. ಕಲಾತ್ಮಕವಾದ ಕೀಟಮೀಸೆಗಳನ್ನು ಪ್ರಚಾರ

ದಲ್ಲಿ ತಂದು ಬೊಕ್ಕಸ ತುಂಬಿಕೊಳ್ಳುವುದು ಸಾಧ್ಯವಿದೆ ಎಂದು ಧನಲೋಭಿ ವ್ಯಾಪಾರಿ ವರ್ಗಕ್ಕೆ ತಿಳಿದಂತೆ ಇಲ್ಲ. ಬೊಕ್ಕ ತಲೆಯುವರು "ವಿಗ್" ಧರಿಸುವಂತೆ ದೇಶ, ಕಾಲ, ಪ್ರಸಂಗಕ್ಕನುಸರಿಸಿದ ಮೀಸೆ ಧರಿಸುವ ಪದ್ಧತಿ ಪ್ರಾರಂಭವಾದದ್ದೇ ಆದರೆ ಫ್ಯಾಶನ್ ಜಗತ್ತಿನಲ್ಲಿ ದೊಡ್ಡ ಕ್ರಾಂತಿಯೇ ಆದೀತು ! ಅಂಥ ದಿನಗಳಲ್ಲಿ ನಾಪಿತರು ಸೆಲೂನಗಳಲ್ಲಿ ವಿವಿಧ ಮುಖಗಳಿಗೆ ಅನುರೂಪವಾದ ಕೀಟಮೀಸೆ ಯಾವುದು ಎಂದು ಸೂಚಿಸುವ ಚಿತ್ರಪಟ ತೂಗುಹಾಕಬೇಕಾಗುವುದು. ಸ್ತ್ರೀಪುರುಷ ಸಮಾನತೆ ಪ್ರತಿಪಾದಿಸುವ ಮಹಿಳೆಯುರು ಪಟದಲ್ಲಿ ಸೂಚಿಸಿದ ಮೀಸೆ ಧರಿಸುವುದರಲ್ಲಿ ಹಿಂದೆ ಬೀಳಲಿಕ್ಕಿಲ್ಲ. ಇದರಿಂದಾಗಿ ಕೀಟ ಮೀಸೆಯು ಮಾದರಿಯು ಮೀಸೆಗಳನ್ನು ಉತ್ಪಾದಿಸುವ, ಜೋಡಿಸುವ, ಹಂಚುವ ದೊಡ್ಡ ಉದ್ದಿಮೆಯೇ ಬೆಳೆದೀತು.

ಸಮವಸ್ತ್ರಗಳನ್ನು ಜಾರಿಗೆ ತರಲಾಗದ ಶಾಲೆ-ಕಾಲೇಜು ಕಾರಖಾನೆಗಳಲ್ಲಿ ಸಮ ಮೀಸೆಗಳನ್ನು ಸುಲಭವಾಗಿ ಜಾರಿಯಲ್ಲಿ ತರಬಹುದಾಗಿದೆ. ಆಸಕ್ತಿ, ಚಟುವಟಿಕೆಗಳನ್ನು ಲಕ್ಷದಲ್ಲಿಟ್ಟು ಒಂದು ಕೀಟಮೀಸೆ ಆರಿಸಿ ತಮಗಷ್ಟೇ ಅದು ಮೀಸಲಾಗಿರುವಂತೆ ರಜಿಸ್ಟರ ಮಾಡಿ ಬಿಡಬಹುದು. ಒಂದು ವರ್ಗದವರು ಏಕಪ್ರಕಾರವಾದ ಮೀಸೆ ಇಡುವಂತೆ ನಿಯಮ ಮಾಡಬಹುದು. ಇದರಿಂದಾಗಿ ಚನ್ನಬಸಪ್ಪ, ಚಂದ್ರಶೇಖರ ಮತ್ತು ಚಂಪಾವತಿಯುರೆಲ್ಲ ಒಂದೇ ವರ್ಗದಲ್ಲಿ ಕಲಿಯುತ್ತಾರೆ ಎಂದು ಥಟ್ಟನೆ ಹೊಳೆಯುವುದು ! ನಾವಿಕರು, ವೈಮಾನಿಕರು, ಸರಕಾರಿ ನೌಕರರು ಸಮಮೀಸೆ ಧರಿಸಿದರೆ ಅವರಲ್ಲಿ ಹೆಚ್ಚಿನ ಐಕ್ಯತೆ ಸಾಧಿಸಿತು. ವಿವಿಧ ಖಾತೆಯುವರು ವಿವಿಧ ಮೀಸೆಯು ಪ್ರತೀಕವಾಗಿ ಮೆರೆಯಬಹುದು. ವಿದ್ಯುತ್ ಖಾತೆಯುವರು ಗದ್ದಲು ಮೀಸೆ, ಸಾರಿಗೆಯುವರು ಜೊಂಡಿಗ್ಯಾ, ಟೆಲಿಫೋನಿನವರು ಚಿಟ್ಟೆ, ಆಕಾಶವಾಣಿಯುವರು ಸೊಳ್ಳೆಮೀಸೆ ಧರಿಸಬಹುದು. ಪ್ರತಿಯೊಂದು ಕಾರಖಾನೆಯುವರು ಈ ಮೇಲ್ಪಂಕ್ತಿ ಅನುಸರಿಸಿದರೆ ಕೀಟಮೀಸೆಯು ಉದ್ದಿಮೆ ಎಂಥ ಬೃಹದ್ಧಾಕಾರದ್ದಾಗಿ ಬೆಳೆಯಬಹುದಿತ್ತು !

ದಿನಕ್ಕೊಂದು ಬಗೆಯು ಮೀಸೆ ಹೊತ್ತು ತಿರುಗುವ ಸಂಯೋಗ ಈ ತಲೆಮಾರಿನವರದು ಆಗುತ್ತಿತ್ತೊ ಇಲ್ಲವೋ ಹೇಳುವುದು ಕಷ್ಟ. ಆದರೆ

ಈಗಿನಿಂದಲೇ ಯತ್ನಿಸಿದರೆ, ಮುಂದಿನ ಪೀಳಿಗೆಯುವರಿಗೆ ಈ ಅವಕಾಶ ಸಿಕ್ಕೀತು. ಯಕ್ಷಗಾನದ ಹಾಸ್ಯಗಾರರು, ಬಾಲನಟರು ಹೊಸ ಬಗೆಯು ಮೀಸೆಯುಲ್ಲಿ ಒಳ್ಳೇ ಮನರಂಜನೆ ನೀಡಿಯಾರು. ಚಲಚ್ಚಿತ್ರ ಖಳನಾಯುಕ ನಾಯುಕಿಯುರು ಧರಿಸಿ ಆಯಾ ಪಾತ್ರಗಳಿಗೆ ಹೊಸ ಆಯಾಮ ಒದಗಿಸಿ ಯಾರು. ಹತ್ತು ಪೈಸೆಯು ಮೀಸೆಗಳು ಮತ್ತು ರೂಪಾಯಿಗಳಿಗೆ ಮಾರಾಟ ವಾದರೆ ಆಶ್ಚರ್ಯವಿಲ್ಲ. ಎಷ್ಟೆಂದರೂ ಆಧುನಿಕರಿಗೆ ಹೊಸತನದ ಹಪಾಪಿ, ನೋಡಿ !

## 15. ಕೀಟ ಕನ್ಯೆಯರು

ವಿವಿಧ ಕಾರಣಗಳಿಗಾಗಿ ನಗರವಾಸಿ ದಂಪತಿಗಳು ಸರಸ-ಸಂಭಾಷಣೆಯ ಕಲೆಯನ್ನೇ ಮರೆಯುತ್ತಿದ್ದಾರೆ. ಭಾರೀ ಬೆಲೆ ಏರಿಕೆಗಳಿಂದಾಗಿ ಹಣ ಗಳಿಕೆಯ ಒತ್ತಡಕ್ಕೆ ಕೆಲವರು ಒಳಗಾಗಿದ್ದಾರೆ. ಸಾಂಸ್ಕೃತಿಕ ಚಟುವಟಿಕೆಗಳು, ಚಲನಚಿತ್ರಗಳು, ವಿಹಾರ, ಹೋಟೆಲುಗಳ ದರ್ಶನದಲ್ಲಿ ವ್ಯಸ್ತರು ಹಲವರು. ಮುಂಬಯಿ, ದಿಲ್ಲಿ, ಕಲಕತ್ತಾ ನಗರಗಳಲ್ಲಿ ಇರುವವರಿಗಂತೂ ದೂರದರ್ಶನದ ಸೆಟ್ಟುಗಳಿಗೆ ಅಂಟಿ ಕುಳಿತುಕೊಳ್ಳುವುದು ಚಟವಾಗಿಬಿಟ್ಟಿದೆ. ಇಂಥ ಬಿಡು ವಿಲ್ಲದ ದಿನಗಳಲ್ಲಿ ಹೊಸ ಚಟುವಟಿಕೆಯೊಂದಕ್ಕೆ ವೇಳೆಯೊದಗಿಸುವುದು ಮಹಾಸಾಹಸವಾಗಿ ಬಿಡುತ್ತದೆ. ದುಡಿಯುವ ಪತಿ-ಪತ್ನಿಯರಿದ್ದರಂತೂ ವಿಚಾರ ವಿನಿಮಯ, ಸರಸ ಸಂಭಾಷಣೆಗೆ ಎಲ್ಲಿ ಅವಕಾಶ ? ಆದರೆ ದಿನದಲ್ಲಿ ಅರ್ಧ ತಾಸಾದರೂ ಈ ಚಟುವಟಿಕೆಗೆಂದು ಮೀಸಲಿಟ್ಟರೆ ಜೀವನಕ್ಕೆ ಇದ್ದ ಅರ್ಥವನ್ನು ಕೊಂಚವಾದರೂ ಗಮನಿಸಲು ಸಾಧ್ಯವಾದೀತೆಂದು ಯತ್ನಿಸಿ ನೋಡಿದಾಗಲೇ ಅರಿಯಬೇಕು.

ಮಾತುಕತೆಗೆ ವಿಷಯ ಮುಖ್ಯವಲ್ಲ; ಪ್ರತಿಪಾದನೆ, ವಿವೇಚನೆ, ಲಘು ಹಾಸ್ಯ ದೃಷ್ಟಿಕೋನಗಳಿಂದ ಸಂಭಾಷಣೆಗೆ ಮೆರಗು ಬರುತ್ತದೆ. ದೇಶದ ರಾಜಕೀಯ, ಸಮಾಜದ ಸೋಗು, ವೃತ್ತಪತ್ರಿಕೆಗಳ ಸಮಾಚಾರ, ಓದಿದ ಪುಸ್ತಕಗಳು ಇವೇ ಬೇಕಾದಷ್ಟು ವಸ್ತು ಪೂರೈಸಬಲ್ಲವು. ಪರಿಸರದ ಆಗು-ಹೋಗುಗಳಲ್ಲಿ ಆಸಕ್ತಿ ಇದ್ದರಂತೂ ಕಲ್ಪನಾ ಶಕ್ತಿಗೆ ಪುಟ ಕೊಟ್ಟಂತೆ ಆಗು

ತ್ತದೆ. ಸ್ತ್ರೀ ಸ್ವಾತಂತ್ರ್ಯ ಹೋರಾಟ, ಸ್ತ್ರೀ-ಪುರುಷರ ಸಮಾನತೆ, ಪುರುಷ ಆಕ್ರಮಣಶೀಲತೆ, (MALE CHAUVINISM) ಸುಶಿಕ್ಷಿತ ದಂಪತಿಗಳಿಬ್ಬರೂ ಎಂದಿಗೂ ಚರ್ಚೆಯ ತಾಜಾ ವಿಷಯಗಳೇ! ಸದಾಕಾಲ ಮನೆಯಲ್ಲಿದ್ದು ಅಡಿಗೆಯಂತಹ ಸಣ್ಣ ಜವಾಬ್ದಾರಿಯನ್ನೇ ಹಿಮಾಲಯವೆಂಬಂತೆ ಏರಿಸಿ ತೋರಿಸುತ್ತಾಳೆ ಎಂದು ಪತಿ ಅಂದುಕೊಂಡರೆ, ಗಂಡಸರು ಸ್ವತಃ ಪ್ರಯತ್ನ ಮಾಡದೆ, ಸಂಪು, ಬಂದ್, ಘೇರೇವೊಗಳಿಂದಲೇ ಸುಲಭದಲ್ಲಿ ಹೆಚ್ಚಿನ ಸಂಪಾದನೆಯ ಲಾಭ ಪಡೆದು ಕಾಫಿ, ತಿಂಡಿ, ಹರಟೆಗಳಲ್ಲಿಯೇ ಕಾಲ ಕಳೆಯುತ್ತಾರೆಂದು ನಂಬಿದ ಪತ್ನಿ, ಅವಕಾಶ ಸಿಕ್ಕಾಗಲೆಲ್ಲ ಪುರುಷರ ನಾಲಾಯಕತೆಯ ಬಗ್ಗೆ ಅಧಿಕಾರವಾಣಿಯಿಂದ ಮಾತನಾಡದೇ ಇರುವುದಿಲ್ಲ. ಪತ್ನಿಯಿಂದ ಚುಡಾಯಿಸಿಕೊಂಡ ಪತಿಗೆ ಸ್ವಪ್ರತಿಷ್ಠೆ ಕೆರಳಿ, ಬುದ್ಧಿ ಚುರುಕಾಗಿ ಅವನು ವಾದ ಗೆಲ್ಲುವುದಕ್ಕಾಗಿ ಕಲಿತ ವಿದ್ಯೆಯ ಮೊರೆ ಹೋಗಬೇಕಾಗುತ್ತದೆ.

ಈ ಗೃಹಿಣಿಯನ್ನು ನೋಡಿ. ಈಕೆ- ದುಡಿಯುವಾಕೆ; ಸಾಹಿತ್ಯ-ಲಲಿತಕಲೆಗಳಲ್ಲಿ ಅಭಿರುಚಿ, ತನ್ನ ಸಾಧನೆಯ ಬಗ್ಗೆ (ಜಂಬ) ಜಾಗೃತಿಯಿದ್ದಾಕೆ. ಕೀಟಪಂಡಿತನಾದ ತನ್ನ ಪತಿಯನ್ನು ರೇಗಿಸಲು, ಒಂದು ಭಾನುವಾರ, ಬಿಡುವಿನ ಸಮಯದಲ್ಲಿ ಹಸಿ ಬಟಾಣಿ ಸುಲಿಯುತ್ತ ಪತಿಯನ್ನು ಗಂಡು ಜೇನಿಗೆ ಹೋಲಿಸಿದಳು. ಮುನ್ನಾ ದಿನವೇ ಸ್ತ್ರೀವಿಮೋಚನಾ ಚಳುವಳಿಯ ಅಂಗವಾಗಿ ಅವಳ ಕ್ಲಬ್ಬಿನಲ್ಲಿ ನಡೆದ ಭಾಷಣದಿಂದ ಪ್ರಭಾವಿತಳಾಗಿದ್ದಳೆಂದು ತೋರುತ್ತದೆ! ಪತಿಗಾದರೋ ಕಾಲೇಜು ದಿನಗಳಲ್ಲಿಯ ಕೀಟಪ್ರೀತಿ ಉಕ್ಕಿ ಹರಿದು, "ಕೀಟಕನ್ಯಾ ಪ್ರಪಂಚದ ಅರಿವು ನಿಮ್ಮ ವಿಮೋಚನಾ ಮುಖಂಡರಿಗೆ ಕೊಂಚವಾದರೂ ಇದ್ದಿದ್ದರೆ, ಅವರು ಅರ್ಥವಿಲ್ಲದ ಈ ಗುಲ್ಲು ಎಬ್ಬಿಸುತ್ತಿರಲಿಲ್ಲ" ಎಂದು ಕೀಟದ ಗುಟ್ಟುಗಳ ರಮ್ಯ ಕಥೆಯನ್ನು ಸ್ವಗತವೆಂಬಂತೆ ವಿವರಿಸಲಾರಂಭಿಸಿದ :

"ಕೇಳಲೆ ಮನದನ್ನೆ" ಇಂಥ ಆಶುಭಾಷಣಗಳ ರೂಢಿ ಆಕೆಗೆ ಇದ್ದದ್ದೇ. ಇಂದಿನದು ಹೊಸ ವಿಷಯವಾದ್ದರಿಂದ ಹೆಚ್ಚಿನ ಉತ್ಸಾಹದಿಂದ ಕಿವಿಗೊಟ್ಟಳು.

"ಕೀಟ ಸಮಾಜದ ಸಕಲ ಸೂತ್ರಗಳನ್ನೂ ಹೆಣ್ಣು ತನ್ನವನ್ನಾಗಿ ಮಾಡಿಕೊಂಡಿದ್ದಾಳೆ. ಇದರಿಂದ ಗಂಡು ಸೋತಿಲ್ಲ, ಗೆದ್ದಿದ್ದಾನೆ. ಅವಳೇ ಅವನ ಸಕಲ ಬೇಡಿಕೆಗಳನ್ನೂ ಪೂರೈಸುವುದರಿಂದ ಬದುಕಿದಷ್ಟು ಕಾಲ ನೆಮ್ಮದಿಯಿಂದ ಇರುವಂತಾಗಿದೆ. ಸಾಮಾಜಿಕ, ಸಾಮೂಹಿಕ ಜೀವನ ನಡೆಸುವ ಕೀಟಗಳನ್ನು ಹತ್ತಿರದಿಂದ ಪರೀಕ್ಷಿಸಿದಾಗ ಈ ಮಾತಿನ ಅರ್ಥ ವಾಗದೇ ಇರದು. ಗಂಡು ಜೇನಿಗೆ ನಾಲ್ಕು ದಿನ ಗೆಲುವು ಕೊಡುವುದಕ್ಕಾಗಿ ಹೆಣ್ಣು ಎಷ್ಟು ದುಡಿಯುತ್ತದೆ ಎಂದು ನೆನೆಸಿಕೊಂಡಾಗ ಅಯ್ಯೋ ಎಂದು ಅನಿಸದೇ ಇರದು. ಗೂಡಿನ ಎಲ್ಲ ಕಾರ್ಯ ಕಲಾಪಗಳನ್ನೂ ಏಕಮೇವ ರಾಣಿ ನಿಯಂತ್ರಿಸುತ್ತಾಳೆ. ಸಂತಾನೋತ್ಪತ್ತಿ ಅವಳ ಜೀವನದ ಏಕಮಾತ್ರ ಧ್ಯೇಯ. ಮಾತೃಸ್ಥಾನದಲ್ಲಿರುವುದರಿಂದ ಗೂಡಿನ ಸಕಲ ಸದಸ್ಯರು ಅವಳ ಆಜ್ಞೆಯನ್ನು ಚಾಚೂ ತಪ್ಪದೇ ನಿರ್ವಹಿಸುತ್ತಾರೆ. ಹೆಣ್ಣು ಕೆಲಸಗಾರ್ತಿ ಯರು ತಮ್ಮವೇ ಬೇರೆ ಸಂಸಾರ ಮಾಡಿಕೊಂಡರೆ ಸ್ವಾರ್ಥಕ್ಕೆ ಇಂಬು ಕೊಟ್ಟಂತಾಗುವುದೆಂದು ಬಂಜೆಯರಾಗಿಯೇ ಬಾಳುತ್ತಾರೆ! ಪುಷ್ಪಪರಾಗ ಸಂಗ್ರಹಿಸುವ ಹೆಣ್ಣು ಕೀಟಗಳು ಅದನ್ನು ತಾತ್ಕಾಲಿಕವಾಗಿ ಸಂಗ್ರಹಿಸಲು ಹಿಂಗಾಲುಗಳನ್ನು ಗೋದಾಮಿನಂತೆ ಬಳಸುತ್ತವೆ. ಮಧು ಸಂಚಯಿಸುವ ವರ್ಗ ಅದನ್ನು ಹೀರುವ ಬದಲಾಗಿ ನಾಲಿಗೆಯಲ್ಲಿ ಶೇಖರಿಸಿ ಗೂಡಿಗೆ ಒಯ್ಯುತ್ತದೆ. ಇನ್ನೊಂದು ಕೀಟ ಪರಿಚಾರಕವರ್ಗ ತಮ್ಮ ಎಂಜಲು, ಪರಾಗ ಮತ್ತು ಮಧುವಿನ ಮಿಶ್ರಣವನ್ನ ಜೇನುತುಂಪ್ಪವಾಗಿ ಪರಿವರ್ತಿಸಿ ರಾಣಿಯ ಭಾವೀ ಪೀಳಿಗೆಗಾಗಿ ಸಂಗ್ರಹಿಸುತ್ತದೆ. ಇದೆಂತಹ ತ್ಯಾಗಬುದ್ಧಿ! ಗಂಡಿಗೆ ಗಂಡಾಂತರ ಒದಗಿದಾಗ, ಇಲಿ–ಇಣಚಿಗಳಂತಹ ಸಣ್ಣ ಪ್ರಾಣಿಗಳು ದಾಳಿ ಇಟ್ಟಾಗ ಈ ಕೀಟಾಂಗನೆಯರೇ ವೈರಿಗಳ ಮೇಲೆ ದಾಳಿಮಾಡಿ ಅಂಬು ಗಳಿಂದ ಸಾವು-ನೋವು ಉಂಟು ಮಾಡುತ್ತಾರೆ. ಈ ಅಂಬುಗಳನ್ನು ಬಿಟ್ಟ ಕೆಲಸಗಾರ್ತಿಯರಿಗೆ ಸಾವು ಕಟ್ಟಿಟ್ಟದ್ದು. ಇದನ್ನು ಅರಿತಿದ್ದೂ ಅವು ಕರ್ತವ್ಯಚ್ಯುತವಾಗುವುದಿಲ್ಲ. ಎಂಥ ತ್ಯಾಗಿಗಳು ! !"

ಪತ್ನಿ ನಡುವೆಯೇ ಬಾಯಿಹಾಕಿ, "ನಿಮ್ಮ ಗಂಡು ತ್ಯಾಗಿಗಳಿಗೆ ಬೆಂಕಿ ಹಾಕ. ಮೂರು–ನಾಲ್ಕು ದಶಕಗಳ ಹಿಂದೆ ಸ್ವಾತಂತ್ರ್ಯ ಸಂಗ್ರಾಮದ ಹೆಸರಿನಲ್ಲಿ ಅಂಚೆ ಕಛೇರಿ ಸುಟ್ಟು ಹಾಕಿಯೋ, ರೇಲ್ವೆ ಹಳಿ ತಪ್ಪಿಸಿಯೋ

ಅನಾಹುತ ಮಾಡಿದ ರೌಡಿಗಳು, ಈಗ ತ್ಯಾಗಿಗಳೆಂದು ಬಿರುದು ಪಡೆದು, ಸರಕಾರದ ಯಾವತ್ತೂ ಸವಲತ್ತುಗಳನ್ನು ಹೊಂದಿ ನಮ್ಮ ಕರದ ಮೇಲೆ ಪರಿಪುಷ್ಟರಾಗಿ ಜೀವಿಸಲು ಒಂದಿಷ್ಟೂ ನಾಚಿಕೆಯಿಲ್ಲದವರು" ಎಂದಾಗ ಜೇನಿನ ತ್ಯಾಗದ ಬಗ್ಗೆ ಮಾತು ತೆಗೆಯದಿದ್ದರೇ ಚೆನ್ನಾಗಿರುತ್ತಿತ್ತು ಎಂದು ಅವನಿಗೆ ಅನ್ನಿಸಿತು.

"ಜೇನುಗೂಡಿನ ಸಕಲ ಚಟುವಟಿಕೆಗಳೂ ರಾಣಿಯ ಮುಂದಾಳ್ತನದಲ್ಲಿ ನಡೆಯುವುದರಿಂದ, ರಾಣಿಯಿಲ್ಲದ ಗೂಡು ದೇವರಿಲ್ಲದ ಗುಡಿಯಂತೆ ಅರ್ಥ ವಿಲ್ಲದ್ದು. ಇದರ ಲಾಭ ಪಡೆದು ಜೇನು ಸಾಕುವವರು ರಾಣಿಯನ್ನು ಅಪಹರಿಸಿ, ಕೃತಕ ಗೂಡಿನಲ್ಲಿ ವಸತಿ ಕಟ್ಟುವಂತೆ ಮಾಡಿ, ನಮ್ಮ ಬಾಯಿ ಸಿಹಿ ಮಾಡಿ, ತಮ್ಮ ಜೇಬನ್ನು ತುಂಬಿಸಿಕೊಳ್ಳುತ್ತಾರೆ. ಗೂಡಿಗೆ ಒಬ್ಬಳೇ ರಾಣಿ ಇರುವುದರಿಂದ ಅವಳು ಪದತ್ಯಾಗ ಮಾಡಿದರೆ, ಅಪಘಾತ ರೋಗ ಗಳಿಂದ ಕೊಲ್ಲಲ್ಪಟ್ಟರೆ ಅರಾಜಕತೆ ಆಗಬಾರದೆಂದು, ಮೂರು-ನಾಲ್ಕು ಭಾವೀ ರಾಣಿಯರನ್ನು ಮೊದಲೇ ಗುರುತಿಸಲಾಗುತ್ತದೆ. ಆಪತ್ ಕಾಲದಲ್ಲಿ ಅಂತಹ ಒಬ್ಬಳಿಗೆ ವಿಶಿಷ್ಟವಾದ 'ರಾಣಿಭೋಗ್' (ಪ್ರೋಟೀನ್ ಭರಿತ ಪೌಷ್ಟಿಕ ಆಹಾರ) ಪೂರೈಸಿ ಫಲವತಿಯನ್ನಾಗಿ ಮಾಡಲಾಗುತ್ತದೆ. ಈ ಯುವರಾಣಿಗೆ ಎಲ್ಲ ಬಗೆಯ ಸೇವೆ ಸಂದಾಯವಾಗುತ್ತದೆ. ಅವಳ ವೈಯಕ್ತಿಕ ಸ್ವಚ್ಛತೆ, ಆಹಾರ ಪೂರೈಕೆ, ಸಂರಕ್ಷಣೆ, ಪ್ರಸೂತಿಯಲ್ಲಿ ನೆರವು-ಎಲ್ಲವೂ ಕೆಲಸಗಾರ್ತಿಯರದ್ದೇ ಜವಾಬ್ದಾರಿ. ರಾಣಿಗೆ ಉರಿಬಿಸಿಲು ತೊಂದರೆ ಕೊಟ್ಟಾಗ ತಮ್ಮ ರೆಕ್ಕೆಗಳನ್ನೇ ಬೀಸಣಿಕೆ ಮಾಡಿ ಅವಳನ್ನು ತಂಪಾಗಿ ಇಡುವವಲ್ಲದೇ ವಿವಿಧ ಬಗೆಯಲ್ಲಿ ನೃತ್ಯಮಾಡಿ ಆಹಾರ ಪೂರೈಕೆ, ಸಂತಾನೋತ್ಪತ್ತಿ ಇವುಗಳ ಬಗ್ಗೆ ಕೆಲಸಗಾರ್ತಿಯರು ಅರಸಿಯೊಡನೆ ವಿಚಾರ ವಿನಿಮಯ ಮಾಡುತ್ತಾರೆ. ಗೂಡಿನಲ್ಲಿ ವಸತಿ ಹೆಚ್ಚಾಗಿ, ಆಹಾರದ ಕೊರತೆ ಯೆನಿಸಿದಾಗ, ಗಂಡು ಕೀಟದ ಉತ್ಪತ್ತಿಗೆ ಬೇರೆಯೇ ಆಹಾರ ಬಳಸಲಾಗು ತ್ತದೆ. ರತಿಕ್ರೀಡೆ ಗಂಡಿನ ಏಕಮಾತ್ರ ಕರ್ತವ್ಯ. ಇದಕ್ಕಾಗಿ ಸಕಲ ಸೌಕರ್ಯ ಸೌಲಭ್ಯಗಳನ್ನೂ ಪೂರೈಸಲಾಗುತ್ತದೆ. ಇಂತಹ ಸುಖಲೋಲುಪತೆ, ಬಡ ಮಾನವ ಪಡೆದು ಬರಲಿಲ್ಲ. ಆದರೆ ಇದೆಲ್ಲ ಕ್ಷಣಿಕ ವೈಭವ. ಅರಸಿಗೆ

ಪತಿಯು ಅವಶ್ಯಕತೆ ಇನ್ನಿಲ್ಲವೆಂದು ಅರಿತಾಗ ಗಂಡಿಗೆ ಆಹಾರ ಕೊಡದೇ ಹಿಂಸಿಸಿ, ಪೀಡಿಸಿ, ರೇಗಿಸಿ ಗೂಡಿನಿಂದ ಹೊರದೂಡಲು ಎಂದೂ ಹಿಂದೆ ಮುಂದೆ ನೋಡುವುದಿಲ್ಲ."

"ನಾಲಾಯಕ್ ಪತಿಗೆ ಕಸಬರಿಗೆ, ಚಪ್ಪಲಿಯೇಟು ಹಾಕಿ ಮನೆಯಿಂದ ಹೊರಹಾಕುವ ಅಧಿಕಾರ ನಮ್ಮ ಭಗಿನಿಯರಿಗಿದ್ದರೆ ಅವರು ಇಷ್ಟೆಲ್ಲ ಕಣ್ಣೀರು ಹಾಕುವ ಪ್ರಸಂಗವೇ ಬರುತ್ತಿರಲಿಲ್ಲ. ಆದರೆ ನಮ್ಮ ಸಮಾಜದಲ್ಲಿ ಪತಿಯೇ ಶ್ರೇಷ್ಠ, ಹೆಣ್ಣು ಪಾತಿವ್ರತ್ಯ ಆಚರಿಸಬೇಕು. ಗಂಡಿಗೆ ಯಾವ ನಿರ್ಬಂಧವೂ ಇಲ್ಲ" ಎಂದು ಪತ್ನಿ ಕೊಂಕು ನುಡಿದಳು.

"ಗೆದ್ದಿಲು ಪತ್ನಿಯು ಭವ್ಯಾಕಾರ ನಿನ್ನದಾಗಿದ್ದರೆ, ಮುತ್ತು ಕೊಡಲು ಏಣಿ ಬಳಸಬೇಕಾಗಿತ್ತು-" ಗಿಡ್ಡ ಆಕೃತಿಯ ಪತ್ನಿಯನ್ನು ಆತ ರೇಗಿಸಲೆತ್ನಿಸಿದ. ಆಕೆ, "ಅಂತಹ ಹಿಡಿಂಬೆಯನ್ನೇ ಹುಡುಕಿ ಕೈಹಿಡಿಯಬೇಕಾಗಿತ್ತು" ಎಂದು ಮೂದಲಿಸಿದಳು.

"ವರಲೆ ರಾಣಿಯ ಭವ್ಯಾಕಾರ ಅವಳು ಹೊತ್ತ ಬೃಹತ್ ಜವಾಬ್ದಾರಿಯ ಪ್ರತೀಕ. ಮೈ ಆಕಾರದಂತೆ, ಅವಳ ಗೃಹ, ಕುಟುಂಬದ ಸದಸ್ಯರ ಸಂಖ್ಯೆ, ಎಲ್ಲವೂ ದೊಡ್ಡವೇ. ಲಕ್ಷಾವಧಿ ಮೊಟ್ಟೆಗಳನ್ನು ಹೊತ್ತಿದ್ದರಿಂದ ಕೀಟಲೋಕದಲ್ಲಿ ಅವಳು ಒಂದು ಪೆಡಂಭೂತದಂತೆ. ಅಸಂಖ್ಯಾತ ತತ್ತಿಗಳನ್ನು ಹೊಂದಿ ಪ್ರೋಟೀನ್‌ಭರಿತಳಾದ ರಾಣಿಯನ್ನು ಭಕ್ಷಿಸಿದರೆ ಕ್ಷಯದಂತಹ ಕಾಯಿಲೆ ಗುಣಮುಖವಾಗುವುದೆಂಬ ಪ್ರತೀತಿ ಇದೆ. ಆದರೆ ರಾಣಿಯನ್ನು ಹಸ್ತಗತ ಮಾಡಿಕೊಳ್ಳುವುದು ಅಷ್ಟೊಂದು ಸುಲಭಸಾಧ್ಯವಾದ ಮಾತಲ್ಲ. ಗೆದ್ದಲಿನ ಹುತ್ತ ಭೂಮಿಯ ಮೇಲುಭಾಗದಲ್ಲಿ ಇರುವುದಕ್ಕಿಂತ ಹೆಚ್ಚು ನೆಲದ ಆಳದಲ್ಲಿ ಬೇರೂರಿರುತ್ತದೆ. ಈ ಭವ್ಯ ಅರಮನೆಯ ಆಳದ ಕೊಠಡಿಯಲ್ಲಿ ರಾಣಿಯ ನಿವಾಸ. ಆಕೆ ಸದಾಕಾಲ ಪ್ರಸೂತಿಯಲ್ಲಿ ತೊಡಗಿರುವುದರಿಂದ ಸೂಲಗಿತ್ತಿಯರು, ವೈದ್ಯರು, ಸೇವಕರಿಂದ ಸುತ್ತುವರಿಯಲ್ಪಟ್ಟಿರುತ್ತಾಳೆ. ಪುಟ್ಟ ಪುಟ್ಟ ಕೆಲಸಗಾರ್ತಿಯರು ದವಡೆ ಹಲ್ಲು

ಗಳಲ್ಲಿ ಹಿಡಿಯುವಷ್ಟು ಸೂಸುಮಣ್ಣಿನೊಂದಿಗೆ ಎಂಜಲು ಸೇರಿಸಿ ಭವ್ಯ ಅರಮನೆ ಕಟ್ಟುವುದರಿಂದ, ಈ ಅರಮನೆ ಉಕ್ಕು, ಸಿಮೆಂಟ್ ಎಂದು ಬೊಬ್ಬಿಡುವ ಆಧುನಿಕ ಎಂಜಿನಿಯರರಿಗೇ ಸವಾಲಿನಂತೆ ಇದೆ. ಆಫ್ರಿಕಾ, ಆಸ್ಟ್ರೇಲಿಯಾ ಖಂಡಗಳಲ್ಲಿ ಈ ಹುತ್ತಗಳು ಅತಿ ಎತ್ತರವಾಗಿ ಕಟ್ಟಲಾಗುವುದರಿಂದ ಆಸೆಬುರುಕ ಮಾನವನು ಇದನ್ನೂ ತನ್ನ ವಾಸಸ್ಥಾನಕ್ಕಾಗಿ ಬಳಸುವುದುಂಟು! ಅನೇಕ ಬಾರಿ ಗೆದ್ದಲು ತನ್ನ ಹುತ್ತ ತ್ಯಜಿಸಿ, ಬೇರೆಡೆಗೆ ಹೋಗುವುದರಿಂದ ಓತಿಕಾಟ, ಹಾವು, ಇನ್ನಿತರ ಪ್ರಾಣಿಗಳು ಸಿದ್ಧವಿದ್ದ ಈ ಮನೆಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳುತ್ತವೆ. ಇದರಿಂದಾಗಿ ಹಾವುಗಳೇ ಹುತ್ತಕಟ್ಟುತ್ತವೆಂಬ ಭ್ರಮೆ ಎಷ್ಟೋ ಜನರಲ್ಲಿ ಮನೆಮಾಡಿಕೊಂಡಿರುತ್ತವೆ.

"ದಂಡಿಮೆ ಮಾಡುವ ಕೀಟ ಹೆಂಗಳೆಯರು ಬಂಜೆಯರಿದ್ದಂತೆ ಕುರುಡಿಯರೂ ಹೌದು. ಆದ್ದರಿಂದ ಪರಿಚಯದ ದಾರಿಯಲ್ಲಿಯೇ ಓಡಾಡಿ ತಮ್ಮ ಚಟುವಟಿಕೆ ಪೂರೈಸಿಕೊಳ್ಳುತ್ತಾರೆ. ಈ ಕೋಮಲೆಯರಿಗೆ ಅಂಗರಕ್ಷಕರೆಂದು ಸೈನಿಕರೂ ಅವರೊಂದಿಗೆ ಓಡಾಡಿಕೊಂಡು ಇರುತ್ತಾರೆ. ಮದ್ದು-ಗುಂಡು, ಕೋವಿಗಳನ್ನು ಹೊತ್ತು ತಿರುಗುವ ಬದಲಾಗಿ ಇರುವೆಗೆ ಭಾರೀ ದವಡೆಗಳಿರುವುದರಿಂದ ಇವರನ್ನು ಗುರುತಿಸುವುದು ತೀರಾ ಸುಲಭ. ಗಂಡಾಂತರ ಕಾಲದಲ್ಲಿ ಅಪಾಯಕಾರಿ ವೈರಿಗೆ ಕಚ್ಚಿದರೆ ಸುಲಭವಾಗಿ ಬಿಡುಗಡೆ ಪಡೆಯಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಕೆಲಕಡೆಗೆ ಆದಿವಾಸಿ ವೈದ್ಯರು ಆಳ ಅಗಲದ ಗಾಯಂಗಳನ್ನು ಹೊಲೆಯಲು ಈ ಸೈನಿಕರನ್ನು ಬಳಸಿಕೊಳ್ಳುತ್ತಾರೆ. ತುಂಡಾದ ಚರ್ಮ ಜೋಡಿಸಿ ಅದನ್ನು ಸೈನಿಕರಿಗೆ ಕಚ್ಚುವಂತೆ ಮಾಡಿ ದಢವನ್ನು ಬೇರ್ಪಡಿಸಿಬಿಡುವುದರಿಂದ ಅದರ ಹಲ್ಲಿನಿಂದ ಶಾಶ್ವತವಾದ ಹೊಲಿಗೆ ಹಾಕಿದಂತಾಗುತ್ತದೆ !

"ಈ ಸ್ತ್ರೀಮಲೆಯಾಳದಲ್ಲಿ ಪುರುಷರಿಗೆ ಯಾವ ಗೌರವ ಸ್ಥಾನವೂ ಇಲ್ಲ. ಆದರೆ ವರುಣನು ಧರೆಗೆ ಇಳಿದು ಬರುವ ಪೂರ್ವದಲ್ಲಿ ನೂರಾರು ಭಾವೀ ರಾಣಿಯರು ರೆಕ್ಕೆಗಳನ್ನು ತಳೆದು ಪ್ರೇಮಿಗಳನ್ನು ಹುಡುಕುತ್ತ ಅಲೆಯುತ್ತಾರೆ. ಸ್ವಯಂವರದಲ್ಲಿ ಯಶಸ್ವಿಯಾದ ದಂಪತಿಗಳು ಭೂಮಿಗಿಳಿದು ತಮ್ಮ ಪಕ್ಕ ತೊರೆದು ರತಿಕ್ರೀಡೆ ಪೂರೈಸಿಕೊಳ್ಳುತ್ತಾರೆ. ಗರ್ಭವತಿ ಕೀಟ

ಹುತ್ತಕಟ್ಟಲು ಹೊಸತಾಣ ಹುಡುಕಿ ಸಂತಾನೋತ್ಪತ್ತಿಯಲ್ಲಿ ತೊಡಗು ವುದು. ಮುಂದಿನ ಚಟುವಟಿಕೆಯಲ್ಲಿ ಗಂಡಿಗೆ ಯಾವ ಜವಾಬ್ದಾರಿಯೂ ಇಲ್ಲದ್ದರಿಂದ, ಹಾರಾಡಿ ಬೇರೆ ಹೆಣ್ಣಿನ ಸಹವಾಸ ಮಾಡಲು ರೆಕ್ಕೆಗಳು ಇಲ್ಲದ್ದರಿಂದ ಹಸಿವೆ–ಬಾಯಾರಿಕೆ–ಬಳಲಿಕೆಗಳಿಂದ ಸಾವನ್ನು ಅಪ್ಪುವುದು.

"ಗಂಡು ಜಾತಿಯನ್ನು ಇದೇ ರೀತಿಯಿಂದ ನಡೆಸುವ ಅಧಿಕಾರ ಪ್ರತಿ ಗೃಹಿಣಿಗೆ ಇದ್ದರೆ ಪ್ರತಿವರ್ಗಕ್ಕೆ ತಾವೇ ಸರ್ವಾಧಿಕಾರಿಗಳೆಂದು ನಡೆದು ಕೊಳ್ಳಲು ಆಸ್ಪದವೇ ಇರುತ್ತಿರಲಿಲ್ಲವಲ್ಲವೇ ? ಎಂದು ನುಡಿದ ಪತ್ನಿ ಆನಂದಿಸಿದಳು.

"ಇರುವೆಯಂತಹ ಚಟುವಟಿಕೆಯ ಜೀವನ ನಡೆಸುವ ಪ್ರಾಣಿ ಇನ್ನೊಂ ದಿರಲಿಕ್ಕಿಲ್ಲ. ಆದರ ಪ್ರಪಂಚದಲ್ಲಿ ಅರಸಿ, ಸೇನಾಧಿಕಾರಿ, ಸೈನಿಕ, ಕೃಷಿಗಾರ, ಎಲ್ಲರೂ ಮಹಿಳೆಯರೇ ! ರಾಣಿ ಗೂಡಿನ ಎಲ್ಲ ಚಟುವಟಿಕೆಗಳನ್ನೂ ನಿಯಂ ತ್ರಿಸಿದರೆ ಭಾವೀ ರಾಣಿಯರು ಪಟ್ಟಕ್ಕೇರುವ ಅವಕಾಶ ಎಂದಾದರೂ ಬಂದೀತೇ ? ಎಂದು ಆಕಳಿಸುತ್ತ ದಿನ ಕಳೆಯುವವು. ಬಂಜೆ, ಕುರುಡ ಕೆಲಸಗಾರ ಇರುವೆಗಳು ಅರಸಿಯರ ಸೇವೆ, ಮೊಟ್ಟೆ ಮರಿಗಳ ಆರೈಕೆ, ಗೂಡಿನ ಸ್ವಚ್ಛತೆ, ಬುರುಸಲಿನ ಕೃಷಿ, ಆಹಾರ ಶೋಧ, ಸಂಪಾದನೆ, ಸಾಗಾಟ, ಸಂಗ್ರಹದಲ್ಲಿ ಸದಾಕಾಲವೂ ತೊಡಗಿರುತ್ತವೆ."

"ನೀವು ಇಂಥ ಕೆಲಸಗಾರ್ತಿ ಪತ್ನಿಯನ್ನು ಪಡೆದಿದ್ದರೆ ಎಷ್ಟೊಂದು ಸುಖಿಗಳಾಗುತ್ತಿದ್ದಿರಲ್ಲವೇ ?" ಎಂದು ಪತ್ನಿ ಅರ್ಧಕೊಂಕು, ಅರ್ಧ ತೋರಿ ಕೆಯ ಸಹಾನುಭೂತಿಯ ರಾಗವನ್ನು ಎಳೆದಳು.

"ಹೆಣ್ಣಾಳುಗಳು ಹೊಲದಿಂದ ಕಾಳು–ಕಡ್ಡಿಗಳನ್ನು ಸಂಗ್ರಹಿಸಿ, ಮೊಳಕೆ ಬಿಡದಂತೆ ಅವನ್ನು ಕಟೆದು ಸಂಗ್ರಹಿಸುವವು. ಕೆಲಜಾತಿಯ ಇರುವೆಗಳು ಜೇನ್ನೊಣಗಳಂತೆ ಹೂವು–ಹಣ್ಣುಗಳಿಂದ ಮಧು ಕಲೆಹಾಕಿ, ಅದನ್ನು ಸಂಗ್ರಹಿಸುವುದಕ್ಕಾಗಿಯೇ ಜನ್ಮವೆತ್ತಿ ಬಂದ, ಜೀವಂತ ಕೊಡಗ ಳಂತಿರುವ ಕೆಲಸಗಾರ್ತಿಯರಿಗೆ ಪೂರೈಸುವವು. ತಮ್ಮ ಉದರದಲ್ಲಿ ಇಷ್ಟು

ಅಮೃತದ ಶೇಖರಣೆ ಇದ್ದರೂ ತಮ್ಮ ಪಾಲಿಗೆ ಬಂದದ್ದನ್ನು ಬಿಟ್ಟು ಉಳಿದ ದ್ದಕ್ಕೆ ಕೈ ಹಚ್ಚದಷ್ಟು ಪ್ರಾಮಾಣಿಕತೆ ಈ ಕೀಟಗಳದ್ದು."

ಈ ಮಾತಿಗೆ ಪತ್ನಿ, "ಗಂಡಸರ ಲೋಭ-ಅಪ್ರಾಮಾಣಿಕತೆಗಳಿಂದ ಸ್ವಾರ್ಥಿ ರಾಜಕಾರಣಿಗಳಿಗೆ ಅವಕಾಶವಾಗಿದೆ. ಬದಲಾಗಿ ಸ್ತ್ರೀಯರಿಗೆ ಆ ಅವಕಾಶ ಇದ್ದಿದ್ದರೆ ದೇಶದ ವಾತಾವರಣ ಕಲುಷಿತವಾಗುತ್ತಿರಲಿಲ್ಲ" ಎಂದು ದೇಶದ ಅಧೋಗತಿಗೆ ಕಾರಣರಾದ ಪುರುಷವರ್ಗವನ್ನು ಹೀಗಳೆದಳು.

"ಬೇರೆ ಕೆಲವು ಇರುವೆಗಳು ಗಿಡಗಳಿಂದ ಪರ್ಣಗಳನ್ನು ಕಟ್ಟಿತಂದು ಗೂಡಿನಲ್ಲಿ ಎಂಜಲಿನೊಂದಿಗೆ ಕೊಳೆ ಹಾಕುವವು. ಅದರ ಮೇಲೆ ಬೆಳೆದ ಬೂರಸನ್ನು ಸದಸ್ಯರಿಗೆ ಆಹಾರವಾಗಿ ಹಂಚುವವು. ಕೆಲವು ವರ್ಗಗಳಲ್ಲಿ ಸಸ್ಯತಗಣೆಗಳನ್ನು ಗೋವುಗಳಂತೆ ಸಾಕುವ ಪದ್ಧತಿ ಬೆಳೆದು ಬಂದಿದೆ. ಅವುಗಳನ್ನು ಹೊತ್ತುತಂದು ಆಹಾರ ಪೂರೈಸಿ, ಅವು ಹೊರಡಿಸುವ ಸಿಹಿದ್ರವ್ಯವನ್ನು ಪೇಯದಂತೆ ಸೇವಿಸುವವು. ಇರುವೆಗಳು ಪರ್ಣ, ಕಟ್ಟಿಗೆ, ಮಣ್ಣಿನಲ್ಲಿ ಗೂಡು ನಿರ್ಮಿಸಬಲ್ಲವು. ಅವು ವಂಶಪರಂಪರೆಯಂತೆಯೇ ನಡೆದುಕೊಳ್ಳುವವು ಎಂಬ ಪ್ರತೀಕವಿದ್ದರೂ ಸಮಯ ಬಂದಾಗ ಅವು ಪ್ರಸಂಗಾವಧಾನ ತೋರಿಸುವವು ಎಂಬುದಕ್ಕೆ ಅನೇಕ ಉದಾಹರಣೆಗಳಿವೆ. ಅವುಗಳ ವಸಾಹತು ನೀರಿನಿಂದ ತುಂಬಿದಾಗ ಸತ್ತ ಇರುವೆಗಳದೇ ಸೇತುವೆ ನಿರ್ಮಿಸಿ ಸುರಕ್ಷಿತ ಸ್ಥಳಕ್ಕೆ ರಾಣಿ, ಮಕ್ಕಳು-ಮರಿಗಳನ್ನು ಸಾಗಿಸಬಲ್ಲವು. ಕೆಲವು ಇರುವೆಗಳು ಎಲೆಗಳನ್ನು ಕಟೆದು, ನೀರಿನಲ್ಲಿ ತೇಲಿಬಿಟ್ಟು ನಾವೆಯಂತೆ ಬಳಸಿದ ಉದಾಹರಣೆಗಳಿವೆ.

"ಕೆಲಸದಲ್ಲಿ ಮೈಮರೆತ ಕಾಮಗಾರ್ತಿಯರಿಗೆ (ಸ್ತ್ರೀಕಾಮಗಾರರಿಗೆ) ಸಂರಕ್ಷಣೆ ನೀಡುವ ಭಾರ ಸ್ತ್ರೀ ಸೈನಿಕರದ್ದು. ಹೋಗಿಬರುವ ಇರುವೆಗಳು, ಪರಸ್ಪರ ಭೇಟಿಯಾದಾಗ ಮೀಸೆಗಳ ಸ್ಪರ್ಶದಿಂದ ವಿಚಾರ ವಿನಿಮಯ ಮಾಡಿಕೊಳ್ಳುವವು. ಸಾಲಾಗಿ ಹೊರಟ ಇರುವೆಗಳು ಮುಂದಿನವು ಬಿಟ್ಟ ರಾಸಾಯನಿಕ ವಾಸನೆಯ ಜಾಡನ್ನು ಹಿಡಿದು ಮುಂದುವರಿಯುವುದರಿಂದ, ಅದನ್ನು ನಿರ್ಮೂಲನ ಮಾಡಿದರೆ ದಾರಿತಪ್ಪಿ ಕಂಗೆಟ್ಟಿಬಿಡುವವು. ಆಗ ಸುತ್ತಿ ಸುತ್ತಿ

ಹಸಿವು-ಬಳಲಿಕೆಯಿಂದ ಸಾವನ್ನಪ್ಪುವುದು ತೀರ ಸಾಮಾನ್ಯ. ಕೆಲವು ಇರುವೆಗಳಲ್ಲಿ ದಾಸ್ಯಪದ್ಧತಿ ಬೆಳೆದು ಬಂದಿದೆ. ಶಕ್ತಿಯುತ ಕಟ್ಟಿರುವೆಗಳ ಸೈನ್ಯ ಅಶಕ್ತ ಗುಂಪಿನ ಮೇಲೆ ದಾಳಿ ಮಾಡಿದಾಗ ಘನ ಘೋರ ಕಾಳಗವಾಗಿ ಸಾವು-ನೋವು ತಪ್ಪಿದ್ದಲ್ಲ. ಶರೀರದಲ್ಲಿ ಉತ್ಪನ್ನವಾಗುವ ಫೋರ್‌ಮಿಃತ್ ಆಮ್ಲ ಮತ್ತು ದವಡೆಹಲ್ಲುಗಳೇ ಕಾಳಗದಲ್ಲಿ ಬಳಸುವ ಮುಖ್ಯ ಆಯುಧಗಳು. ಇನ್ನಷ್ಟು ರಕ್ತಪಾತಕ್ಕೆ ಸಿದ್ಧರಿಲ್ಲದೇ ದುರ್ಬಲ ತಂಡ ಶರಣಾಗತವಾದಾಗ ಕಪ್ಪು ಇರುವೆಗಳು ತಮಗೆ ಬೇಕಾಗುವಷ್ಟು ಕೆಲಸಗಾರ್ತಿಯರೊಂದಿಗೆ ಗೂಡಿಗೆ ಹಿಂದಿರುಗುವವು. ಮುಂದೆ ಅವು ಚಾಚೂತಪ್ಪದೇ ತಮ್ಮ ಧನಿಗಳ ಸೇವೆಯಲ್ಲಿ ತೊಡಗಿರುತ್ತವೆ.

"ಗಗನಮಂಡಲ ಕಾರ್ಮೋಡಗಳಿಂದ ಅಲಂಕೃತವಾದಾಗ, ಮಿಂಚೇ ಬೆಳಕಾಗಿ, ಗುಡುಗೇ ವಾದ್ಯವಾಗಿ, ತುಂತುರುಮಳೆಯೇ ಗುಲಾಬಿದಾನಿಗಳಾಗುವ ದಿನಗಳಲ್ಲಿ ಇರುವೆಗಳ ಭಾವೀ ರಾಣಿಯರು ರೆಕ್ಕೆಗಳನ್ನು ಬೆಳೆಸಿಕೊಂಡು ಸ್ವಯಂವರಕ್ಕಾಗಿ ಆಕಾಶದತ್ತ ಹಾರಾಡುವವು. ದೇಶ-ವಿದೇಶಗಳ ರಾಜಕುಮಾರರು ಕುಡಿಮೀಸೆ ತೀಡಿಕೊಂಡು ಜಯಮಾಲೆ ತಮ್ಮ ಕೊರಳಿಗೇ ಬೀಳುವದೆಂಬ ಭ್ರಮೆಯಿಂದ ಪ್ರೇಮಭಿಕ್ಷೆಗೆ ಕೈಯೊಡ್ಡಿ ಹಾರಾಡುವವು. ಗಂಡಿನ ದೌರ್ಬಲ್ಯವರಿತ ಭಾವೀರಾಣಿ, ತಾನೊಲಿದವನ ರೆಕ್ಕೆಗಳನ್ನು ಕಿತ್ತ ನಂತರವೇ ರತಿಕ್ರೀಡೆಗೆ ಅನುಮತಿ ನೀಡುವವುದು. ತಾಯಿಯಾಗಲಿರುವ ಇರುವೆ ತನ್ನ ವಂಶಾವಳಿಯ ಪ್ರಕಾರ ಗೂಡು ಕಟ್ಟುವ ಸ್ಥಳ ಆರಿಸಿ ಹೊಸ ವಸಾಹತು ಸ್ಥಾಪಿಸುವುದು."

ಪತ್ನಿ, ಖಿಕ್ ಎಂದು ನಕ್ಕು, "ಇಂಥ ಏರ್ಪಾಡು ನಮ್ಮ ಸಮಾಜದಲ್ಲಿದ್ದರೆ ಎಷ್ಟೋ ಸಂಸಾರಗಳು ಒಂದಾಗಿರುತ್ತಿದ್ದವು. ಕನಿಷ್ಠಪಕ್ಷ ಗಂಡಿನ ಒಂದಾದರೂ ಕಾಲು ಮುರಿಯುವಂತಾದರೆ ಅವನ ಹಾರಾಟ ಎಷ್ಟೋ ಕಡಮೆಯಾಗುತ್ತಿತ್ತು ಅಂತ ನಿಮಗನಿಸುವುದಿಲ್ಲವೇ ?" ಎಂದು ಪತಿಯನ್ನು ಕೆಣಕಿದಳು,

"ಪರ್ಣಗಳ ನಡುವೆ ಅವಿತುಕೊಡ್ರುವ ಶಿವನ ಕುದುರೆಯ ಮೈ ಬಣ್ಣವೂ ಹಸಿರಾಗಿದ್ದರಿಂದ ಅದರ ಇರವು ಪತ್ತೆಹಚ್ಚುವುದು ಅಷ್ಟೊಂದು

ಸುಲಭಸಾಧ್ಯವಾದ ಮಾತಲ್ಲ. ಆದರ ಮುಂಗಾಲುಗಳು ದೇವರಿಗೆ ಭಕ್ತಿಯಿಂದ ನಮಿಸುವ ಜೋಡಿ ಕೈಗಳಿಗೆ ಹೋಲುವುದರಿಂದ ಇದೊಂದು ಸಭ್ಯ ಪ್ರಾಣಿ ಎಂದು ತಪ್ಪು ಗ್ರಹಿಕೆಯಾಗುವುದು ತೀರ ಸಾಮಾನ್ಯ. ಆದರೆ ಅದು ಮೋಸಗಾರ್ತಿ, ಬಕದಂತೆ ತನ್ನ ಬೇಟೆಗಾಗಿ ಹೊಂಚುಹಾಕಿ ರಾಮಧ್ಯಾನದಲ್ಲಿ ತೊಡಗಿದಂತೆ ನಟಿಸುತ್ತದೆ. ಈ ತಪಸ್ವಿನಿಯನ್ನು ಅಲಕ್ಷಿಸಿ ಹುಳುಹುಪ್ಪಡಿ ಹತ್ತಿರ ಸುಳಿದಾಗ ಚಂಗನೆ ಜಿಗಿದು ಆಹುತಿ ತೆಗೆದುಕೊಂಡು ಬಿಡುವುದು. ಚಿಕ್ಕ ಮಗು ಕಬ್ಬು ತಿನ್ನುವಂತೆ ಎರಡೂ ಕೈಗಳಲ್ಲಿ ಹಿಡಿದು ಅಗಿಯುವುದು. ಹೆಣ್ಣು ಹುಲಿಯಂತೆ ಇದಕ್ಕೆ ಆಕ್ರೋಶ ಇರುವುದರಿಂದ ಗಂಡು ಸನಿಹದಲ್ಲಿ ಸುಳಿಯಲೂ ಹೆದರಿಕೊಳ್ಳುತ್ತದೆ. ಆದರೆ ಸಂತಾನಕ್ಕಾಗಿ ಗಂಡನ್ನ ಬರ ಮಾಡಿಕೊಳ್ಳಲೇಬೇಕಾದಾಗ ರತಿಕ್ರೀಡೆಗೆ ಅನುಮತಿ ಸಿಗುತ್ತದೆ, ಅದನ್ನು ಪೂರೈಸಿಕೊಂಡ ಮೇಲೆ, ಜಾರಿಕೊಳ್ಳುವ ಯತ್ನದಲ್ಲಿರುವ ಗಂಡನನ್ನೇ ಭಕ್ಷಿಸಿ ಹಸಿವನ್ನು ನೀಗಿಸಿಕೊಳ್ಳಬಲ್ಲ ರುದ್ರಜೀವಿ ಈಕೆ. ಕೆಲವೊಮ್ಮೆ ಸಂಭೋಗದಲ್ಲಿ ಇದ್ದಾಗಲೇ ಪತಿಯ ರುಂಡವನ್ನು ತಿಂದು ತೇಗುವುದುಂಟು. ಕೇವಲ ಪತಿಯ ಧಡ ಮಾತ್ರದಿಂದಲೇ ಸಂತಾನೋತ್ಪತ್ತಿಯ ಶ್ರೇಯಸ್ಸು ಈ ಕೀಟಕ್ಕೆ ಸಲ್ಲುತ್ತದೆ !"

ಈ ಬಾರಿ ಪತ್ನಿ, ಹೊಟ್ಟೆ ಬಿರಿಯುವಂತೆ ನಕ್ಕು ಕೇವಲ ಅರ್ಥಗರ್ಭಿತವಾಗಿ ಅವನತ್ತ ನೋಡಿದಳು-ಮಾನವರಲ್ಲಿ ಈ ಪದ್ಧತಿ ಇದ್ದಿದ್ದರೆ ! ಎಂಬ ಅರ್ಥದಲ್ಲಿ.

"ಪತಂಗ ಪ್ರಪಂಚದಲ್ಲಯೂ ಸ್ತ್ರೀಯರದೇ ಎತ್ತಿದ ಕೈ. ಇವು ದೀರ್ಘ ದೇಹ, ಭವ್ಯ ಮೀಸೆ ಪಡೆದಿರುತ್ತವೆ. ಅದೇ ಗಂಡು ಚಿಕ್ಕದಿದ್ದು ಆಡಂಬರವಿಲ್ಲದ ಮೀಸೆಗಳಿಂದ ಕೂಡಿರುತ್ತದೆ. ಇದರಿಂದಾಗಿ ಚಿಟ್ಟೆಗಳ ಲೋಕದಲ್ಲಿ ವಿಷಮ ವಿವಾಹಗಳೇ ಬಳಕೆಯಲ್ಲಿವೆ ಎನಿಸಿದರೆ ಆಶ್ಚರ್ಯವಿಲ್ಲ. ಆದರೆ ನಿಜ ಸಂಗತಿಯೆಂದರೆ ವಿವಾಹ ಕಾಲದಲ್ಲಿ ಪ್ರೇಯಸಿ, ಭಾವೀ ಪೀಳಿಗೆಯನ್ನು ಹೊತ್ತು, ಗರ್ಭವತಿಯಾಗುವುದರಿಂದ ದೈತ್ಯಾಕಾರವಾಗಿ ಕಾಣುವುದು. ಪತಂಗಕ್ಕೆ ಪತಿವ್ರತಾ ಧರ್ಮದಲ್ಲಿ ವಿಶ್ವಾಸವಿಲ್ಲದ್ದರಿಂದ ದ್ರೌಪದಿಯ ಮೇಲುಪಂಕ್ತಿ ಅನುಸರಿಸಿ, ಪ್ರೇಮಭಿಕ್ಷೆ ಬಯಸಿ ಬಂದ ಎಲ್ಲ ರಸಿಕರಿಗೂ

ರಸದೂಟ ನೀಡುವುದು. ಹೆಣ್ಣು ಪತಂಗ ಇರುವ ಟೊಂಗೆಯ ಮೇಲೆ ನಾಲ್ಕಾರು ಗಂಡುಗಳು ಕಾತರತೆಯ ತಾಳ್ಮೆಯಿಂದ ಕಾಯುವುದನ್ನು ನೋಡುವುದೇ ಮೋಜು. ಹಲವಾರು ಗಂಡು ಪತಂಗಗಳು ಪ್ರೌಢಾವಸ್ಥೆಯಲ್ಲಿ ಆಹಾರವನ್ನು ಸೇವಿಸದೇ ಜೀವನದ ಈ ಏಕಮಾತ್ರ ಧ್ಯೇಯ ಪೂರೈಸಿಕೊಂಡು ಕೆಲವೇ ದಿನಗಳಲ್ಲಿ ವೀರಸ್ವರ್ಗ ಸೇರುತ್ತವೆ. ಆದರೆ ದಣಿದ ಸ್ತ್ರೀ ಪತಂಗ ಮಧುವನ್ನು ಆಹಾರವಾಗಿ ಸೇವಿಸಿ ಮೊಟ್ಟೆಗಳನ್ನು ಇಟ್ಟು ಉದರ ಭಾರ ಕಡಮೆ ಮಾಡಿಕೊಳ್ಳುವುದರಲ್ಲಿ ತೊಡಗುವುದು."

"ಪತಿವ್ರತಾ ಧರ್ಮದ ಜೊಳ್ಳು ಆದರ್ಶದಲ್ಲಿ ವಿಶ್ವಾಸವಿಡದ ಪತಂಗ ರಾಣಿ ಜಾಣೆ. ಗಂಡಸರೆಲ್ಲ ಪತಿವ್ರತಾಧರ್ಮ ಪತ್ನಿಗೆ ಕಲಿಸಿ ತಾವು ಹೆಣ್ಣನ್ನು ಕಂಡಾಗೆಲ್ಲ ಪತಂಗದಂತೆ ಹಾರಾಡುತ್ತಾರೆ" ಎಂದು ಪತ್ನಿ ಮೊದಲಿಸಿದಳು.

ಸಸ್ಯತಗಣಿ ಎಫಿಡ್‌ಗೆ ಇನ್ನೊಂದು ಹೆಸರು ಸಂತಾನೋತ್ಪತ್ತಿ. ತಾನು ಜನ್ಮಕೊಟ್ಟ ಎಲ್ಲ ಮರಿಗಳನ್ನು ಕಡು ವೈರಿಯಿಂದಲೂ ಸಂಪೂರ್ಣವಾಗಿ ಭಕ್ಷಿಸಿ ಜೀರ್ಣಿಸಿಕೊಳ್ಳಲು ಅಸಾಧ್ಯವೆಂದು ಈ ಕೀಟ ಅಭಿಮಾನಪಡಬಹುದು. ಒಂದೇ ಒಂದು ವರ್ಷದಲ್ಲಿ ಇಪ್ಪತ್ತೊಂದು ತಳಿಗೆಗೆ ಜನ್ಮಕೊಡುವ ಸಾಮರ್ಥ್ಯ ಈ ಪುಟ್ಟ ದೆವ್ವಕ್ಕಿದೆ. ಒಂಟಿ ಹೆಣ್ಣಿಗೆ ಲಕ್ಷಾವಧಿ ಸದಸ್ಯರ ಬೃಹತ್ ಕುಟುಂಬ ನಿರ್ಮಿಸುವ ಬಲವಿದೆ. ಒಂದೇ ಪರ್ಣದ ಮೇಲೆ ಮಕ್ಕಳು, ಮೊಮ್ಮಕ್ಕಳು, ಮರಿಮಕ್ಕಳು, ಮರಿಮರಿ ಮಕ್ಕಳೊಂದಿಗೆ ಸಂಸಾರ ಹೂಡುವ ಎಫಿಡ್ ನೋಡಿದರೆ ಮಿತಸಂತಾನ ಪ್ರತಿಪಾದಕ ಮೂರ್ಛೆ ಹೋಗಬಹುದು! ಎಫಿಡಿನ ಕಾರ್ಯವಿಧಾನ ತೀರ ಸುಲಭ. ಗಂಡಿನ ಸಂಪರ್ಕವೇ ಬೇಕಿಲ್ಲದೆ, ಒಂಟಿಯಾಗಿ ರೆಕ್ಕೆರಹಿತ ಹೆಣ್ಣು ಸಂತಾನದ ನಿರ್ಮಾಣದಲ್ಲಿ ತೊಡಗುತ್ತದೆ. ಸುತ್ತಲಿನ ಪರಿಸರವೆಲ್ಲ ಅದರ ಪೀಳಿಗೆಯಿಂದ ತುಂಬಿ ತುಳುಕಾಡಲಾರಂಭಿಸಿದಾಗ, ಗಂಡಿನ ಸಂಪರ್ಕ ಹೊಂದಿ ಗಂಡು ಜಾತಿಗೆ ಜನ್ಮ ಕೊಡುತ್ತದೆ. ಇವು ಬೇರೆಡೆ ಹಾರಿ ಹೋಗಿ ಹೊಸ ವಸಾಹತು ಪ್ರಾರಂಭಿಸುವವು."

"ಮಾನವನಿಗೆ ಇಂತಹ ಶಕ್ತಿ ಇದ್ದರೆ ಚಂದ್ರಲೋಕದಲ್ಲಿ ತನ್ನ ವಸಾಹತು ಪ್ರಾರಂಭಿಸಿ ಯುಗಗಳೇ ಕಳೆಯುತ್ತಿದ್ದವು. ಸದ್ಯ ಇಂಥ

ಅಸಂಖ್ಯಾತ ಪ್ರಸೂತಿಯಿಂದ ಮಹಿಳೆಯರು ಬದುಕಿಕೊಂಡರು" ಎಂದು ಸ್ವಗತ ಎಂಬಂತೆ ಅವಳು ಹೇಳಿದಳು.

"ಮಿಂಚುಹುಳ ಎಂದು ಅನ್ವರ್ಥಕ ನಾಮ ಪಡೆದ ಕೀಟಕ್ಕೆ ಶರೀರ ದಿಂದ ಬೆಳಕನ್ನು ಉತ್ಪಾದಿಸುವ ಅಸಾಮಾನ್ಯ ಸಾಮರ್ಥ್ಯವಿರುತ್ತದೆ. ಹುಳವನ್ನು ಹೋಲುವ ಈ ಹೆಣ್ಣು ಕುಟುಂಬವತ್ಸಲೆಯಾದ್ದರಿಂದ ಹಾರುವ ಗೋಜಿಗೆ ಹೋಗದೇ, ಭೂಮಿಯ ಮೇಲೆಯೇ ತರಗೆಲೆ, ಕಲ್ಲು ಬಂಡೆಗಳ ಅಡಿಯಲ್ಲಿ ಸದ್ದಿಲ್ಲದೇ ಸಂಸಾರ ಹೂಡಿರುತ್ತದೆ. ಇದರ ಗಂಡು ಇತರ ಕೀಟಗಳಂತೆ ಇದ್ದು ಜೋಡಿ ರೆಕ್ಕೆಗಳ ಸಹಾಯದಿಂದ ಹಾರುತ್ತಿರುತ್ತದೆ. ಹೆಣ್ಣಿನೊಂದಿಗೆ ಹೋಲಿಸಿದಾಗ ಗಂಡು ಚಿಕ್ಕದು ಮತ್ತು ಪೆದ್ದು. ಅಂತೆಯೇ ವಸಂತಕಾಲದಲ್ಲಿ ಗಂಡಿನ ಲಕ್ಷ್ಯ ಸೆಳೆಯಲು ಹತ್ತಾರು ದೇಹದೀಪ ಉರಿಸುತ್ತ ಅತ್ತಿತ್ತ ಹರಿದಾಡುತ್ತದೆ. ಇಂತಹ ಪರಿಪಕ್ವ ದೀಪ ಇನ್ನೊಂದು ಇಲ್ಲ. ಗ್ಯಾಸ್‌ಲೈಟಿನ ಉತ್ಪಾದದೆಯಲ್ಲಿ ಶೇಕಡಾ ಮೂರರಷ್ಟು ಮಾತ್ರ ಬೆಳಕಾಗಿ, ಉಳಿದದ್ದು ಉಷ್ಣತೆಯಾಗಿ ಪರಿವರ್ತನೆ ಹೊಂದುತ್ತದೆ. ಆರ್ಕ್ ದೀಪದಲ್ಲಿ ಕೂಡ ಕೇವಲ ಶೇಕಡಾ ಹತ್ತರಷ್ಟು ಬೆಳಕಾಗಿ ಪರಿವರ್ತಿತವಾಗುತ್ತದೆ. ಮಿಂಚುಹುಳ ಒಂದಿಷ್ಟೂ ಉಷ್ಣತೆ ಇಲ್ಲದೇ ಬೆಳಕು ಉತ್ಪಾದಿಸುವುದರಲ್ಲಿ ತಜ್ಞೆ. "ನಾರಿಯರಿಗೆ ಇಂತಹ ಸಾಮರ್ಥ್ಯವಿದ್ದರೆ ನೀವು ಗಂಡಸರು ಹತ್ತಾರು ಪತ್ನಿಯರನ್ನು ಮನೆಯಲ್ಲಿ ಇರಿಸಿಕೊಂಡು ದೀಪದ ಖರ್ಚು ಉಳಿಸುತ್ತೀದ್ದೀರೋ ಏನೋ"! ಎಂದಾಕೆ ಸೋಜಿಗಪಟ್ಟಳು.

"ಕೀಟದ ತೀರ ಹತ್ತಿರದ ನೆಂಟಾದ ಜೇಡಗಳಲ್ಲಿ ಬೇರೆಯೇ ವಿವಾಹ ಪದ್ಧತಿ ಪ್ರಚಲಿತವಿದೆ. ಹಗಲು–ರಾತ್ರಿಯೆನ್ನದೇ ತನ್ನ ಶರೀರದಿಂದಲೇ ಹೊರಡಿಸುವ ರೇಶಿಮೆ ದಾರದಿಂದ, ಜಿನುಗಾದ ಬಲೆ ಹೆಣೆಯುವುದರಲ್ಲಿ ಪರಿಣತಿ ಪಡೆದಿದೆ ಜೇಡ. ಯಾವುದೇ ಕಾರಣದಿಂದಾಗಿ ಎಳೆ ಹರಿದು ಹೋದರೆ ಒಂದಿಷ್ಟೂ ಬೇಸರವಿಲ್ಲದೆ ತಿರುಗಿ ಹೊಸ ಎಳೆಗಳನ್ನು ಜೋಡಿಸು ವುದು. ಆದ್ದರಿಂದ ಜೇಡನಿಂದ ತಾಳ್ಮೆಯನ್ನು ಕಲಿಯಬೇಕು ಎಂದು ಹಿರಿಯರು ಹೇಳುವುದುಂಟು. ಬೇಟೆಯಾಡುವಾಗಲೂ ಜೇಡ ಇಂತಹದೇ ತಾಳ್ಮೆ ತೋರಿಸುತ್ತದೆ. ಮೂಲೆಯೊಂದರಲ್ಲಿ ಧ್ಯಾನ್ಯದಲ್ಲಿ ಕುಳಿತು ಹಾರುವ

ಹುಳ-ಹುಪ್ಪಡಿಗಳಿಗಾಗಿ ಕಾಯುತ್ತಿರುತ್ತದೆ. ಕಾಣದ ಬಲೆಯಲ್ಲಿ ಸಿಕ್ಕಿಕೊಂಡ ಹುಳಗಳು ಸ್ವಾತಂತ್ರ್ಯಕ್ಕಾಗಿ ತೊಳಲಾಡುವಾಗ ಜೇಡ ಅದರ ಸುತ್ತ ಇನ್ನಷ್ಟು ದಾರ ಸುತ್ತಿ ಬಿಡಿಸಿಕೊಳ್ಳದಂತೆ ಎಚ್ಚರಿಕೆ ವಹಿಸುತ್ತದೆ. ಬೇಟೆಯ ಹಾರಾಟ, ಕೂಗಾಟ, ಚೀರಾಟ ನಿಂತ ಮೇಲೆ ಅದರ ಶರೀರದಿಂದ ದ್ರವವೆಲ್ಲ ಹೀರಿ, ಉಳಿದ ಅಂಗಾಂಗಗಳನ್ನು ಹಿಪ್ಪೆ ಮಾಡಿ ಚೆಲ್ಲಿಬಿಡುವುದು. ಇಂತಹ ತಾಳ್ಮೆ ಸಂತಾನೋತ್ಪತ್ತಿ ಕಾಲದಲ್ಲಿ ಎಲ್ಲಿ ಮಾಯವಾಗಿಬಿಡುತ್ತದೋ ಏನೋ! ಮನಸ್ಸಿಲ್ಲದ ಮನಸ್ಸಿನಿಂದ ಪ್ರೇಮಿಯನ್ನು ಬರಮಾಡಿಕೊಂಡು ಸಂಭೋಗದ ತರುವಾಯ ಹಸಿವನ್ನು ತಾಳಲಾರದೇ ಪತಿಯನ್ನೇ ಭಕ್ಷಿಸುವ ಜೇಡನ ಕ್ರೌರ್ಯ ಜಗತ್ತಿನ ವಿಸ್ಮಯಗಳಲ್ಲಿ ಒಂದು. ಅಂತೆಯೇ ಅದಕ್ಕೆ "ವಿಧವಾಜೇಡು" ಎಂಬ ಅನ್ವರ್ಥಕ ನಾಮವೂ ಬಳಕೆಯಲ್ಲಿ ಬಂದಿದೆ".

"ಕೀಟ ಜಗತ್ತಿನ ಸ್ತ್ರೀಯರ ಸ್ವಾತಂತ್ರ್ಯಪ್ರಿಯತೆ ಮೆಚ್ಚಿಕೊಂಡರೂ ಜೇಡನ ಕ್ರೌರ್ಯ ಒಪ್ಪಿಕೊಳ್ಳಲು ಅಸಾಧ್ಯ" ಎನ್ನುತ್ತ ಆಕೆ ಎದ್ದು ಹೋಗಿ ಬಿಸಿ ಕಾಫಿ ತಂದು ಗಂಡನ ಕೈಗಿತ್ತಳು. "ಸಮಬಾಳು, ಸಮಪಾಲು ಎಂಬ ತತ್ವ ಒಪ್ಪಿಕೊಂಡಾಗಲೇ ನಮ್ಮ ಸಮಸ್ಯೆಗಳನ್ನು ಬಗೆಹರಿಸಲು ಸಾಧ್ಯವಾದೀತು"-ಕಾಫಿ ಸವಿಯುತ್ತ ಅವನೆಂದ. "ಕೆರಳಿಸಿದಾಗೊಮ್ಮೆ ಕುತೂಹಲಕಾರಿ ವಿಷಯ ಹೇಳುತ್ತಿರುತ್ತೀರಿ" ಎಂದು ಮೆಚ್ಚಿಗೆಯ ಮಾತು ಹೇಳಿ ಆಕೆ ಮಾನವ ಮಹಿಳೆಯಂತೆ ವರ್ತಿಸಿದಳು.

## 16. ಷಟ್‌ಪಾದಿಗಳ ಸಂಗೀತ

ಕೀಟಕೋಟಿಯ ನಿತ್ಯಜೀವನ ವಿಸ್ಮಯಕಾರಿಯಾದಂತೆ ಅವುಗಳ ಸಂಗೀತ ಕೂಡಾ ಅದ್ವಿತೀಯ. ಭೀಮಸೇನ ಜೋಶಿ. ಬಾಲಮುರಳಿಕೃಷ್ಣ ರಂತಹವರ ಹಾಡುಗಾರಿಕೆಯಲ್ಲಿ ವಿಶ್ವಾಸವಿಡದೇ ವಿಶಿಷ್ಟವಾದ ವಾದ್ಯಗಳನ್ನು ನುಡಿಸುವುದನ್ನು ಮಾತ್ರ ತಮ್ಮವನ್ನಾಗಿ ಮಾಡಿಕೊಂಡಿವೆ ! ದೊರೆಸ್ವಾಮಿ ಅಯ್ಯಂಗಾರರು ವೀಣೆ, ರವಿಶಂಕರರು ಸಿತಾರ, ಬಿಸಮಿಲ್ಲಾಖಾನರು ಶಹನಾಯಿ, ಅಲ್ಲಾರಾಖಾರು ತಬಲಾ ಜೊತೆಗೆ ಒಯ್ಯದೇ ಸಂಗೀತ ಕಚೇರಿ ನಡೆಸುವಂತಿಲ್ಲ. ಅದೇ ಕೀಟಗಳು ತಮ್ಮ ಅವಯುವಗಳನ್ನೇ ವಾದ್ಯಗಳನ್ನಾಗಿ ಮಾರ್ಪಡಿಸಿಕೊಂಡದ್ದರಿಂದ ಒಂದು ಕ್ಷಣಾರ್ಧದಲ್ಲಿ ಲಹರಾ ಹಿಡಿದು ಕಚೇರಿ ಪ್ರಾರಂಭಿಸಿಬಿಡುವವು. ಕೀಟ ಜಗತ್ತಿನಲ್ಲಿ ಉಳಿದೆಲ್ಲಕ್ಕೆ ಸ್ತ್ರೀಗೆ ಪ್ರಾಧಾನ್ಯ ಕೊಟ್ಟರೂ ವಾದ್ಯಗಾರಿಕೆ ಮಾತ್ರ ಸಂಪೂರ್ಣವಾಗಿ ಪುಂಕೀಟಗಳ ಅಧೀನ ದಲ್ಲಿದೆ. ಕೀಟ ಸಂಗೀತ ಆಲಿಸಲು ಸಂಯಮ, ವಿರಾಮ, ರಸಿಕತೆಬೇಕು. ಬೆಂಗಳೂರಿನಂತಹ ಮಹಾನಗರದಲ್ಲಿಯೂ ಸಾವಿರಾರು ಕೀಟಗಳು ಸದಾಕಾಲ ಸಂಗೀತದಲ್ಲಿ ತೊಡಗಿದರೂ ಕೇಳಿಸಿಕೊಳ್ಳುವವರು ಎಷ್ಟು ಜನರಿದ್ದಾರೆ ?

ಸರ್ವಕೀಟಗಳಿಗೂ ಸಂಗೀತದ ವರದಾನವಿಲ್ಲ. ಅವು ನಡೆಸುವ ತಾಲೀಮು ಕೇಳಿಸಿಕೊಳ್ಳುವ ಕಿವಿ ಮಾನವನಿಗಿಲ್ಲ. ಅವನ ಶ್ರವಣದ ಕೆಳಗಿನ ಅಥವಾ ಮೇಲಿನ ತರಂಗದಲ್ಲಿ ಕೀಟಗಳು ಸಂಗೀತವನ್ನು ಉತ್ಪಾದಿಸುತ್ತಿರು ತ್ತವೆ. ತತಕಗಳಲ್ಲಿ ಇಂಥ ಸಂಗೀತವಿದೆಯೆಂದು ಆತ ಕಲ್ಪಿಸಿಕೊಂಡಿರದೇ

ಇಲ್ಲ. ಕೀಟಗಳನ್ನು ಹೆಚ್ಚೆಚ್ಚು ನಿಕಟವಾಗಿ ಅರಿಯಲಾರಂಭಿಸಿದಂತೆ ಅವು ಗಳ ಸಂಗೀತವನ್ನು ಕೇಳಿಸಿಕೊಳ್ಳಲು, ಅರ್ಥಮಾಡಿಕೊಳ್ಳಲು ಯತ್ನಿಸಿ ಅದಕ್ಕಾಗಿಯೇ ವಿಶಿಷ್ಟ ರೀತಿಯ ಟೇಪ್‌ರಿಕಾರ್ಡರ್ ಮತ್ತು ಮ್ಯಾಕ್ರೊ ಫೋನಗಳನ್ನು ರಚಿಸಿಕೊಂಡಿದ್ದಾನೆ. ಇವುಗಳಿಂದ ಜಿರಳೆ ಕೋಡಬಳೆ ಕಡಿ ಯುವ ಸದ್ದು, ಇರುವೆ ಮುಳ್ಳು ಮೇಲೆ ನಡೆದು ಹೋಗುವಾಗಿನ ಕಾಲ ಹೆಜ್ಜೆಯ ಸಪ್ಪಳ, ನೊಣ ಕಾಲು ಝಾಡಿಸಿ ನೆಟಿಕೆ ತೆಗೆದ ನಾದಗಳನ್ನು ಸೆರೆ ಹಿಡಿಯಬಹುದಾಗಿದೆ. ಪೂರ್ವಜರಿಗಿಂತ ಎಷ್ಟೊ ಪ್ರಗತಿ ಸಾಧಿಸಿದರೂ ಕೀಟ ಸಂಗೀತದ ಬಗ್ಗೆ ನಾವಿನ್ನೂ ಅಜ್ಞಾನಿಗಳೇ ಎಂದರೆ ಅತಿಶಯೋಕ್ತಿ ಯಾಗಲಾರದು.

ಉದಯರಾಗ, ಸಂಧ್ಯಾರಾಗ, ಏಕತಾಲ-ತೀನತಾಲ, ಆಲಾಪನೆ-ಚೀಜ್, ಎಂದೆಲ್ಲ ಅವು ತಲೆಕೆಡಿಸಿಕೊಳ್ಳುವುದೇ ಇಲ್ಲ. ಎಲ್ಲ ವಾದ್ಯಗಳನ್ನು ಸೇರಿಸಿ ವಾದ್ಯವೃಂದ ನಡೆಸುವುದೆಂದರೆ ಕೀಟಗಳಿಗೆ ಬಹಳೇ ಇಷ್ಟ. ಆದ್ದ ರಿಂದ ಅವುಗಳು ಪೌರ್ವಾತ್ಯರಿಗಿಂತ ಪಾಶ್ಚಿಮಾತ್ಯ ಸಂಗೀತವನ್ನು ಹೆಚ್ಚೆಚ್ಚಾಗಿ ಅಳವಡಿಸಿಕೊಂಡಿವೆ ಅನ್ನಬಹುದು. ಅಥವಾ ಪಾಶ್ಚಾತ್ಯರೇ ಕೀಟಸಂಗೀತದ ಅನುಕರಣೆ ಮಾಡುತ್ತಿದ್ದಾರೆ ಎಂದರೆ ಹೆಚ್ಚು ಸಮಂಜಸವಾದೀತು. ಯಾಕೆಂದರೆ ಮಾನವನು ಭೂಲೋಕದಲ್ಲಿ ಅವತರಿಸುವುದಕ್ಕಿಂತ ಸಹಸ್ರಾರು ವರ್ಷಗಳ ಪೂರ್ವದಲ್ಲಿಯೇ ಅವುಗಳು ವಾದ್ಯಸಂಗೀತವನ್ನು ಕರಗತ ಮಾಡಿ ಕೊಂಡಿದ್ದವು. ಆಧುನಿಕ ಪರಿಳಿತದ ಸಂಗೀತದಲ್ಲಿ ವಿಶ್ವಾಸವಿಡದ ಕೀಟಗಳು ಆದಿವಾಸಿಗಳಂತೆ ಏಕಪ್ರಕಾರವಾಗಿ ವಾದ್ಯ ನುಡಿಸುತ್ತಿರುತ್ತವೆ. ಆದ್ದರಿಂದ ಅವುಗಳ ಸಂಗೀತ ಕಚೇರಿಯಲ್ಲಿ ಕಿರುನಿದ್ರೆ ಮುಗಿಸಿ ಎದ್ದರೂ ರಸಾನುಭವಕ್ಕೆ ಯಾವ ಚ್ಯುತಿಯೂ ಬಾರದು.

ಅವುಗಳ ಅಕ್ಷರಾಭ್ಯಾಸ ಮೌಖಿಕವಾಗಿದ್ದರಿಂದ ಅದನ್ನು ನಮ್ಮದಕ್ಕೆ ಭಾಷಾಂತರಿಸುವುದು ಭಲೆ ಬಿಗಿಯಾದ ಮಾತು. ಅವುಗಳು ಹೊರಡಿಸುವ ಸಂಗೀತದ ಹತ್ತಿರ ಬರುವ ಅಕ್ಷರಗಳೂ ನಮ್ಮಲ್ಲಿ ಇಲ್ಲ. ಷಟ್‌ಪಾದಿಗಳು ಕ, ಗ, ಟ, ಡ, ಷ, ಅಕ್ಷರಗಳನ್ನು ಹೆಚ್ಚಾಗಿ ಬಳಸುತ್ತವೆ. ಒಬ್ಬನ ಕರ್‌ss ಕರ್‌ss ಎನ್ನುವ ಶಬ್ದವೇ ಇನ್ನೊಬ್ಬನು ಅದು ಗರ್‌ss, ಗರ್ ಎಂದು

ಪಾದಿಸಿದರೆ ಆಶ್ಚರ್ಯವಿಲ್ಲ. ಯಾಕೆಂದರೆ ಅವೆಲ್ಲ 'ಕ' ಮತ್ತು 'ಗ' ಗಳ ನಡುವಿನ ತಮ್ಮದೇ ಆದ ಅಕ್ಷರ ಬಳಸುತ್ತವೆ. ಮೃದುವಾಗಿ ಕಿರ್‌s.... ಕಿರ್‌ss....ಕಿರ್‌s....ಎಂದು ಪ್ರಾರಂಭಿಸಿ ನಂತರ ಏದುಸಿರು ಹತ್ತಿದವರಂತೆ ಕಿರ್‌ssssss ಎಂದು ಶಂಖನಾದ ಮಾಡುತ್ತವೆ. ಹೊರಡಿಸುವ ನಾದ ದಿಂದಲೇ ಕಣ್ಣಿಗೆ ಕಾಣಸಿಗದ ಕೀಟ ಯಾವುದೆಂದು ಗುರುತಿಸಬಹುದು. ಸರ್ಪದ ಹಿಸ್‌ss, ಸಂಜೆವಕ್ಕಿಯು ಟಿಪ್, ಟಿಪ್, ಟಿಹಿsss ಟಿಹಿss, ಸಸ್‌ss ಸಸ್‌ss ಸಸ್ ಸಸ್‌ss ಟಿಸಿsss, ಟಿಸಿಪ್‌ss ಟಿಸಿಪ್‌ss ಟೀssssss ಝಿಹಿತ್ ಝಿಹಿತ್ ಝಿಹಿತ್, ಇಟ್‌ಝಿಕ್, ಇಟ್‌ಝಿಕ್, ಪರ್, ಪರ್, ಪರss, ಗಿರ್‌s ಗಿರ್‌ss ಗಿರ್‌ss, ಡಿಝೀಟ್, ಡಿಝೀಟ್ ಮುಂತಾದ ಸಂಗೀತವು ಕೀಟಲೋಕವನ್ನು ಅರಿತವರಿಗೆ ಪರಿಚಿತ.

ಬಹುಸಂಖ್ಯಾತ ಕೀಟಗಳು ಮೌನವ್ರತ ಆಚರಿಸುತ್ತವೆ. ಹಿಂದುಸ್ತಾನಿ ಸಂಗೀತದಲ್ಲಿ ಗ್ವಾಲೇರ್ ಘರಾನಾ, ಆಗ್ರಾಘರಾನಾ, ಇರುವಂತೆ, ಕೀಟಗಳಲ್ಲಿ ಕುಟುಂಬಗಳು ಸಂಗೀತಕ್ಕಾಗಿಯೇ ತಮ್ಮ ಜೀವನವನ್ನು ಮುಡಿಪಾಗಿಟ್ಟಿವೆ. ಅವುಗಳು ಉತ್ಪಾದಿಸುವ ಸಂಗೀತದಂತೆ ಬಳಸುವ ವಾದ್ಯಗಳೂ ವೈವಿಧ್ಯ ಪೂರ್ಣವಾಗಿರುತ್ತವೆ. ಪ್ರತಿರಾತ್ರಿ ನಿದ್ರಿಸಿದವರನ್ನು ಎಬ್ಬಿಸಲು ಬರುವ ಸೊಳ್ಳೆಯು ಹಿಂದಿನ ಜೋಡಿ ರೆಕ್ಕೆಗಳು ಘೋಲಾಕಾರದವು ಇದ್ದು ಅವು ವೇಗವಾಗಿ ಗಾಳಿಯಲ್ಲಿ ಮೀಟುವುದರಿಂದ ಗೂಂಯ್‌ss ಎಂಬನಾದ ಹೊರಡುತ್ತದೆ. ನಸುಕಿನಲ್ಲಿಯೇ ಎದ್ದು ತಿಪ್ಪೆಗುಂಡಿಯ ಸುತ್ತಲೂ 'ಝೊssಂಯ್' ಎಂದು ಸದ್ದು ಹೊರಡಿಸುವ ಹಸಿರುನೊಣ ತನ್ನ ರೆಕ್ಕೆ ಗಳನ್ನೆ ವಾದ್ಯವಾಗಿ ಬಳಸುತ್ತದೆ. ಕೊರಡ ತೊಲೆಯನ್ನು ಕೊರೆದು ಗೂಡು ಮಾಡುವ ಭ್ರಮರ ಇದೇ ವಿಧಾನ ಬಳಸಿ 'ಭಂವ್‌sss' ಎಂದು ಎಲ್ಲರನ್ನು ಎಚ್ಚರಿಸುವುದು. ಕಣಜಿಗಗಳೂ 'ಊss ಊss' ಎಂದು ತನ್ನ ತಂತ್ರೂರಿ ಊದುತ್ತ ಜೇಡಿ ಮಣ್ಣಿಗಾಗಿ ಧಾವಿಸುವುದು. ಕೀಟ-ಪ್ರಪಂಚದಲ್ಲಿ ಶಕ್ತಿ-ಸಾಮರ್ಥ್ಯಗಳಿಗೆ ದುಂಬಿಗಳು ಹೆಸರುವಾಸಿ. ಅವು ದವಡೆಗಳನ್ನು ಕಚಿಯುತ್ತ 'ಕರ್‌s ಕರ್‌ss' ಶಬ್ದ ಹೊರಡಿಸುವುದು ಸಾಮಾನ್ಯ. ಕೊರಡಿನಂತಹ ರೆಕ್ಕೆಗಳನ್ನು ಕಾಲಿನಿಂದ ಪರಚಿಕೊಳ್ಳುವ, ಪಾದಗಳ ಘರ್ಷಣೆಯಿಂದಲೂ

ಸಂಗೀತ ಹೊರಡಿಸುವ ಹವ್ಯಾಸ ಈ ಗುಂಪಿಗಿದೆ. ಮಧುಪ್ರಿಯವೆನಿಸಿಕೊಂಡ ಪತಂಗಗಳು ಸಂಗೀತಪ್ರಿಯವಾಗಲೇ ಇಲ್ಲ.

ತಲೆತಲಾಂತರಗಳಿಂದ ಚಿಮ್ಮುಂಡೆ ಹಾಗೂ ಅದರ ಆಪ್ತೇಷ್ಟ ಬಳಗ ಸಂಗೀತವೆಂದರೆ ಭಗವಂತನ ಸೇವೆ ಎಂದು ಪರಿಗಣಿಸಿ ಶ್ರದ್ಧೆಯಿಂದ ಆ ಪರಂಪರೆಯನ್ನು ಮುಂದುವರಿಸಿಕೊಂಡು ಬಂದಿವೆ. ಇವು ಹಿಂಗಾಲಿಗೆ ಹೊಂದಿರುವ ಮೂಳೆಗಳನ್ನು ರೆಕ್ಕೆಯ ಮೇಲೆ ಓಡಿಸಿ 'ಗಿರ್‌s ಗಿರ್‌ss' ಎಂದು ನಾದವನ್ನು ಹೊರಡಿಸುತ್ತವೆ. ಒಂದೇ ಒಂದು ನಿಮಿಷದಲ್ಲಿ ತೊಂಭತ್ತು ನುಡಿ ನುಡಿಸಬಲ್ಲದೆಂದರೆ ಅದರ ತಾಳ್ಮೆಯ ಕಲ್ಪನೆ ಬರುವಂತಿದೆ. ಸೂರ್ಯಾಸ್ತದೊಂದಿಗೆ ಪ್ರಾರಂಭಿಸಿದ ಈ ಕಚೇರಿ, ಸುಲಭವಾಗಿ ಸೂರ್ಯೋದಯದವರೆಗೆ ಮುಂದುವರಿಸಬಲ್ಲದು. ಅಂದರೆ ರಾತ್ರಿಯೊಂದ ರಲ್ಲಿಯೇ ಅರವತ್ತು ನಾಲ್ಕು ಸಾವಿರ ಸಲ ತನ್ನ ನುಡಿಯನ್ನು ಬಾರಿಸಿ ದಂತಾಯಿತು. ಇಷ್ಟಾದರೂ ಒಮ್ಮೆಯೂ ಅದು ಬೇಸರವಾಗಿ ತನ್ನ ವಾದ್ಯ ನಿಲ್ಲಿಸುವುದಿಲ್ಲ. ಈ ಚಿಮ್ಮುಂಡೆಗೆ ಮಾನವನಿರ್ಮಿತ ವಾದ್ಯ ಪೂರೈಸಿದ್ದರೆ ಅದು ಹರಿದು ಇಲ್ಲವೇ ಮುರಿದು ಹೋಗುತ್ತಿತ್ತು. ಒಂದೇ ಬೈಠಕಿಗೆ ಅದರ ಒಂದೆರಡು ವರ್ಷದ ಜೀವನದಲ್ಲಿ ಎಷ್ಟು ವಾದ್ಯಗಳನ್ನು ಪೂರೈಸಬೇಕಾಗುತ್ತಿತ್ತು ಎಂದು ಲೆಕ್ಕ ಹಾಕಲು ಗಣಿತಜ್ಞನೇ ಬೇಕು.

ಚಿಮ್ಮುಂಡೆಗೆ ಸಂಗೀತ ದ್ವಂದ್ವದಲ್ಲಿ ಸರಿಸಾಟಿಯಾಗಬಲ್ಲುದೆಂದರೆ ತಿತ್ತಿರಿಯೊಂದೇ. ಸಂಗೀತಸಮ್ರಾಟನಾಗಬೇಕೆಂಬ ಒಂದೇ ಉದ್ದೇಶದಿಂದ ನಾಲ್ಕು ವರ್ಷದ ಸುದೀರ್ಘ ಬಾಲ್ಯಾವಸ್ಥೆಯನ್ನು ಭೂ-ಮಡಿಲಿನ ಅಜ್ಞಾತ ವಾಸದಲ್ಲಿ ಕಳೆದು ಪ್ರೌಢಾವಸ್ಥೆಯಲ್ಲಿ ಸಂಗೀತದ ಸಕಲ ಸಾಧನೆಯೊಂದೆಗೆ ವೃಕ್ಷ ಒಂದರ ಮೇಲೆ ಬೇಸಿಗೆಯಲ್ಲಿ ಕಾಣಿಸಿಕೊಳ್ಳುವುದು. ತೊಗಟೆಯ ಮೈ ಬಣ್ಣ, ಪಾರದರ್ಶಕ ರೆಕ್ಕೆಗಳಿಂದಾಗಿ ಕಣ್ಣು ಮುಚ್ಚಾಲೆ ಆಟದಲ್ಲಿ ಅದನ್ನು ಗುರುತಿಸುವುದೇ ಕಷ್ಟ. ತಿತ್ತಿರಿಯ ತುತ್ತೂರಿ ಒಂದೆರಡು ಕಿಲೋಮೀಟರ್ ದೂರದವರೆಗೆ ಸಹಜವಾಗಿ ಕೇಳುವಷ್ಟು ಜೋರಾಗಿದ್ದರೂ ಪ್ರತಿಧ್ವನಿಯಿಂದಾಗಿ, ಅದರ ಮೂಲವನ್ನು ಸುಲಭವಾಗಿ ಕಂಡುಹಿಡಿಯ ಲಾಗದು. ತುತ್ತೂರಿಯಂತೆ ಕೇಳಿಸಿದರೂ ಅದು ನುಡಿಸುವುದು ತಬಲಾ

ವನ್ನು ! ಎದೆಯಲ್ಲಿ ಆಳವಾದ ಕುಳಿಯನ್ನು ಅದರದೇ ಮೈಚರ್ಮದಿಂದ ಹೊಂದಿಸಿದ್ದು ಇರುತ್ತದೆ. ದೇಹದ ಕವಚದಿಂದ ಉಂಟಾದ ಜೋಡಿ ಬಡಿಗೆಗಳನ್ನು ಬಡಿಸಿ, 'ಗಿರ್ ಗಿರ್‌ರ್ ಗಿರ್‌ರ್ss' ಎಂದು ನಾದ ಹೊರಡಿಸುತ್ತದೆ. ಕುಳಿಯಲ್ಲಿ ಬಂಧಿತವಾದ ಗಾಳಿಯಲ್ಲಿ ಸಂಗೀತ ಪ್ರತಿಧ್ವನಿತವಾಗಲಿದ್ದರಿಂದ ಬಹುದೂರದವರೆಗೆ ಕೇಳಿಸಿಕೊಳ್ಳಬಹುದು.

ಹುಲ್ಲಿನಲ್ಲಿ ಅಡಗಿದ ಮಿಡತೆಯನ್ನು ಹಿಡಿಯಹೋದಾಗ, ತನ್ನ ರೆಕ್ಕೆಗಳ ವಿವಿಧ ವರ್ಣಗಳನ್ನು ಪ್ರದರ್ಶಿಸುತ್ತ 'ಕಿಟ್ ಕಿಟ್' ಎಂದು ಎಚ್ಚರಿಕೆಯ ಸದ್ದು ಹೊರಡಿಸುತ್ತ ಕ್ಷಣಾರ್ಧದಲ್ಲಿ ಮಾಯವಾಗಿ ಬಿಡುವ ದೃಶ್ಯ ಎಲ್ಲರ ಅನುಭವಕ್ಕೆ ಬಂದದ್ದೆ. ಹಾರುವಾಗ ರೆಕ್ಕೆ–ಪಾದಗಳ ಘರ್ಷಣೆಯಿಂದ ಈ ನಾದ ಹೊರಡುತ್ತದೆ. ಮಿಡತೆಯ ಅಸಂಖ್ಯಾತ ಸಂಬಂಧಿಗಳೆಲ್ಲ ಇದಕ್ಕಾಗಿ ವಿವಿಧ ಸಲಕರಣೆಗಳನ್ನು ಬಳಸುತ್ತವೆ. ತಂಬೂರಿ ಮೀಟಿದಂತೆ, ಪಿಟೀಲು ನುಡಿಸಿದಂತೆ, ಬಾಚಣಿಕೆಯ ಹಲ್ಲುಗಳ ಮೇಲೆ ಹೆಬ್ಬೆರಳು ಓಡಿಸಿದಂತೆ, ಝೈಲೋಫೋನ್ ಬಾರಿಸಿದಂತೆ, ಮೃದಂಗದ ಮೇಲೆ ಕೈ ಓಡಿಸಿದಂತೆ, ಕಹಳೆ ಊದಿದಂತೆ, ನಗಾರಿ ಗುಡುಗಿಸಿದಂತೆಲ್ಲ ಕೀಟಗಳು ಸಂಗೀತವನ್ನು ಹೊರಡಿಸಬಲ್ಲವು. ಇವುಗಳ ಸಂಗೀತ ಕಛೇರಿಗೆ ಪರಿಸರವೇ ಪ್ರೇಕ್ಷಕಾಲಯ, ಸಹಜೀವಿಗಳೇ ಶ್ರೋತೃಗಳು. ಆತ್ಮತೃಪ್ತಿಯೇ ಬಿರುದು–ಬಾವಲಿಗಳು. ಗಾನಕೋಕಿಲ, ಸಂಗೀತ ವಿಶಾರದ, ಶ್ರುತಿಸಾಗರಗಳೆಂದು ಕರೆಸಿಕೊಳ್ಳುವದರಲ್ಲಿ ಅವಕ್ಕೆ ವಿಶ್ವಾಸವಿಲ್ಲ.

ಹಕ್ಕಿಗಳು ಹೆಣ್ಣನ್ನು ಒಲಿಸಿಕೊಳ್ಳಲು ಹಾಡುವುದರಿಂದ ಅವುಗಳ ಸಂಗಮ ತೀರ ಸಾಮಾನ್ಯ. ಆದರೆ ಕೀಟಗಳ ಕಿರಿಚುವಿಕೆಗೆ ಯಾವ ಹೆಣ್ಣು ಕೀಟವೂ ಹತ್ತಿರ ಸುಳಿಯದ್ದರಿಂದ ಅವು ಕಿವುಡಾಗಿರಬಹುದೇ ಎಂಬ ಸಂಶಯಕ್ಕೆ ಆಸ್ಪದವಾಗುತ್ತದೆ. ಆದರೆ ಕೀಟಗಳ ಮೈ–ಕೈಗಳೆಲ್ಲ ಕಿವಿಗಳಿಂದಲೇ ತುಂಬಿ ತುಳುಕುತ್ತವೆ ಎಂದು ಸೂಕ್ಷ್ಮದರ್ಶಕದ ಸಹಾಯದಿಂದ ಪರೀಕ್ಷಿಸಿದಾಗ ಅರಿವಾಗುವುದು. ಅವುಗಳ ಚಿಕ್ಕ ಚಿಕ್ಕ ಕುಳಿಗಳಲ್ಲಿ ಕೇಶಾಕಾರದ ಅವಯವಗಳನ್ನು ನರಗಳ ಮೂಲಕ ಮಿದುಳಿಗೆ ಜೋಡಿಸಲಾಗಿದೆ. ಈ ಕೇಶಕಗಳು ಶಬ್ದ ತರಂಗ ಗ್ರಹಿಸುವುದರಲ್ಲಿ ಅತ್ಯಂತ ದಕ್ಷವೆಂದು ಪರಿಗಣಿಸ

ಲಾಗಿದೆ. ಒಂದು ಮಿಡತೆ ಇಲ್ಲವೇ ತಿತ್ತಿರಿ ತನ್ನ ಸಂಗೀತ ಕಛೇರಿ ಪ್ರಾರಂಭಿಸಿದರ ಸಾಕು. ಅದರ ಸಂಗಾತಿ ಕೀಟಗಳೆಲ್ಲ ಕೂಡಲೇ ಧ್ವನಿ ಸೇರಿಸಿ ವೃಂದಗಾನ ಪ್ರಾರಂಭಿಸುಬಿಡುತ್ತವೆ. ದಣಿದವುಗಳು ಒಂದೆರಡು ನಿಮಿಷ ವಿಶ್ರಾಂತಿ ಪಡೆದು ತಿರುಗಿ ಸಂಗೀತ ಸಭೆಗೆ ಒಂದಿಷ್ಟೂ ಲೋಪಬಾರದಂತೆ ವಾದ್ಯಗಾರಿಕೆ ಮುಂದುವರಿಸುವವು. ಅಷ್ಟೇ ಅಲ್ಲ, ಅವುಗಳ ಸಂಗೀತ ನಾವು ಮುದ್ರಿಸಿ ಪ್ರಾರಂಭಿಸಿದರೂ ಕೂಡಲೇ ಅವೂ ಸೇರಿಕೊಂಡುಬಿಡುವವು. ಅವು ಕಿವುಡಾಗಿದ್ದರೆ ಇದೆಂದಾದರೂ ಸಾಧ್ಯವಿತ್ತೆ ?

ಸಂತಾನೋತ್ಪತ್ತಿಯ ಕಾಲದಲ್ಲಿ ಮಾತ್ರ ಹೆಣ್ಣು ವಿಶಿಷ್ಟ ರೀತಿಯಿಂದ ಸಂಗೀತ ಉತ್ಪಾದಿಸುವುದು. ಇದು ಗಂಡು ಕೀಟದ್ದಕ್ಕಿಂತ ತೀರ ಭಿನ್ನವಾಗಿದ್ದು, ಈ ಪ್ರಣಯವಾದ್ಯನಾದ ಕೇಳಿಸಿಕೊಂಡು ಹಲವಾರು ಪ್ರೇಮಿಗಳು ಧಾವಿಸಿ ಬರುವುದೂ ಸಾಮಾನ್ಯ. ಅವುಗಳಲ್ಲಿ ದ್ವಂದ್ವ ನಡೆದು ಗೆದ್ದವು ಹೆಣ್ಣನ್ನು ಪಡೆಯಬಹುದು. ಇಲ್ಲವೇ ಸಮಪಾಲು, ಸಮ ಬಾಳಿನಲ್ಲಿ ವಿಶ್ವಾಸವಿಟ್ಟಂತೆ ಎಲ್ಲವುಗಳ ಪ್ರೇಮಕ್ಕೆ ಅದು ಸ್ಪಂದಿಸುವುದು. ಹಾಗಾದರೆ ಗಂಡಿನ ಸಂಗೀತದ ಉದ್ದೇಶ ಏನಿರಬಹುದು ? ಎಂಬ ಪ್ರಶ್ನೆಗೆ ಉತ್ತರ ಹುಡುಕುವುದು ಕಷ್ಟ ! ಬಹುಶಃ ಕಷ್ಟಮಯ ಕ್ಷಣಿಕ ಜೀವನವನ್ನು ಅರ್ಥಪೂರ್ಣ ಮಾಡಿಕೊಳ್ಳಲು ಸಂಗೀತವನ್ನು ನುಡಿಸುತ್ತಿರಬಹುದು. ಇಲ್ಲವೇ ಕೆಲಸದಲ್ಲಿ ತೊಡಗಿದ ರಸಿಕ ಮಾನವನು ಸಿಳ್ಳುಹಾಕುತ್ತ ತನ್ನ ಹಾಡಿನ ತೀಟೆ ತೀರಿಸಿಕೊಳ್ಳುವಂತೆ ಈ ಕೀಟಗಳೂ ತಮ್ಮ ಒಂಟಿ ಬಾಳಿನ ಜಿಗುಪ್ಸೆ ಕಳೆಯಲು ಹೀಗೆ ಮಾಡುತ್ತಿರಬಹುದು.

ಆದಿಮಾನವನು ಕೀಟಗಳ ಸಂಗೀತ ಕೇಳಿ ಬೆರಗುಗೊಂಡಿದ್ದ. ಹಕ್ಕಿಗಳಂತೆ ಷಟ್‌ಪಾದಿಗಳ ವಾದ್ಯಗಾರಿಕೆಯ ಅನುಕರಣದಿಂದಲೇ ತನ್ನ ಸಂಗೀತ ಆರಂಭಿಸಿದ. ಇಂದಿಗೂ ಆದಿವಾಸಿಗಳು ಕೀಟಗಳಿಗೆ ಪ್ರಿಯವಾದ ಸಂಗೀತವನ್ನೇ ಹೊರಡಿಸುತ್ತಾರೆ. ಆಫ್ರಿಕದ ಹಲವಾರು ಬಣದವರು ಕೀಟಗಳನ್ನು ಕಾಡಿನಲ್ಲಿ ಕಲೆಹಾಕಿ ಮನೆಯಲ್ಲಿ ಸಾಕುವರು. ಅವುಗಳ ಜೋಗುಳ ಕೇಳುತ್ತ ಸುಖನಿದ್ರೆಯಲ್ಲಿ ಮೈಮರೆಯುವರು. ಜೀರುಂಡೆಗಳ ಸಂಗೀತದಿಂದ ಭವಿಷ್ಯದ ಆಗು-ಹೋಗುಗಳನ್ನು ಗುರುತಿಸಬಹುದೆಂದು ನಂಬಿದವರು,

ಅವನ್ನು ವರ್ಣರಂಜಿತ ಪೆಟ್ಟಿಗೆಯಲ್ಲಿಟ್ಟು ಸಾಕಿ ಸಲಹುವರು. ನಿಸರ್ಗಪ್ರೇಮಿ ಜಪಾನೀಯರು, ಕೀಟವಾದ್ಯಗಳನ್ನು ಕೇಳಿಸಿಕೊಳ್ಳುವುದಕ್ಕಾಗಿಯೇ ಕಾಡಿಗೆ ಧಾವಿಸುವ ಕಾಲ ಒಂದಿತ್ತು. ಈಗ ಸಮಯಾಭಾವದಿಂದ, ಕೀಟಗಳನ್ನು ಕೊಂಡು ತಂದು, ಬಿದಿರಿನ ಪಂಜರಗಳಲ್ಲಿ ಸಾಕಿ, ಅವುಗಳ ಸಾಮೂಹಿಕ ಸಂಗೀತ ಕೇಳಿ ಆನಂದಿಸುವರು. ದುಡಿಮೆಗಾರರು ಸಂಧ್ಯಾಕಾಲದ ಕೀಟ ಸಂಗೀತ ಬಯಸಿದರೆ ಧಾರ್ಮಿಕರು ಉದಯರಾಗವನ್ನು ಆಲಿಸುತ್ತಾರೆ.

ದುಡ್ಡೇ ದೊಡ್ಡಪ್ಪನೆಂದು ಪರಿಗಣಿಸುವ ಇಂದಿನ ದಿನಗಳಲ್ಲಿ, ರಾತ್ರಿಯಲ್ಲಿ ಕುಳಿತು ಆಲಿಸುವ ಸಂಗೀತ ಕಛೇರಿಗಳು, ಯಕ್ಷಗಾನ, ಬಯಲಾಟಗಳು ಭರದಿಂದ ಕಣ್ಮರೆಯಾಗುತ್ತಿವೆ. ಜೀವನವೆಂಬುದು ಕೇವಲ ಹೊಟ್ಟೆ-ಬಟ್ಟೆಗಾಗಿ, ಧನಸಂಪಾದನೆಗಾಗಿ ಇರದೇ ಹೆಚ್ಚಿನ ವಿಚಾರಗಳಿಗಾಗಿ ಅರ್ಥಪೂರ್ಣ ಮಾಡಿಕೊಳ್ಳಬೇಕಾದರೆ, ದೈನಂದಿನ ಬೇಕು-ಬೇಡಗಳನ್ನು ಮೆಟ್ಟಿ ನಿಲ್ಲಬೇಕಾಗುತ್ತದೆ. ಈ ಗುಟ್ಟನ್ನು ಅರಿತ ಕೀಟಗಳು ಸಹಸ್ರಾರು ವರ್ಷಗಳಿಂದ ವಾದ್ಯ ಸಂಗೀತವನ್ನು ತಮ್ಮದನ್ನಾಗಿ ಮಾಡಿಕೊಂಡು ಕೃಷ್ಣಲೀಲೆಯನ್ನು ಕೊಂಡಾಡುತ್ತಿರಬೇಕು. ಅತಿ ಸ್ವಾರ್ಥಿ ಮಾನವನು ಅಣ್ವಸ್ತ್ರಗಳ ಪ್ರಯೋಗದಿಂದ ತನ್ನೊಂದಿಗೆ ಈ ಕೀಟ ಪ್ರಪಂಚವನ್ನು ನಾಶಮಾಡದಿದ್ದರೆ, ಅವು ಈ ಕಲಿಕಾಲ ಮುಗಿಯುವವರೆಗೂ ತಮ್ಮಷ್ಟಕ್ಕೆ ತಮ್ಮ ಸಂಗೀತವನ್ನು ಮುಂದುವರಿಸುವುದರಲ್ಲಿ ಸಂಶಯವೇ ಇಲ್ಲ.

## 17. ಪ್ರತ್ಯಕ್ಷಳಾದಾಗ

ಗುಂಗಾಡು ಏಕಪ್ರಕಾರವಾಗಿ ಆಕ್ರಮಣ ನಡೆಸಿ ನಿದ್ರಾಭಂಗಮಾಡಿದ್ದ ರಿಂದ ಅವುಗಳಿಂದ ರಕ್ಷಿಸಿಕೊಳ್ಳಲು ಮಧ್ಯರಾತ್ರಿಯಲ್ಲಿ ಎದ್ದು ಸೊಳ್ಳೆಪರದೆ ಕಟ್ಟಿಕೊಳ್ಳಬೇಕಾಯಿತು. ದೀಪ ಹಚ್ಚಿದಾಗ ಕೋಣೆಯಲ್ಲಿ ಜಿರಳೆಗಳ ಸೈನ್ಯ ವನ್ನು ನೋಡಿ ಹೌಹಾರಿದಂತಾಯಿತು. ಬಹಳಷ್ಟು ಕಾಲಿಗೆ ಬುದ್ಧಿ ಹೇಳಿ ದವು. ಸಿಕ್ಕವಷ್ಟನ್ನು ಯಮಸದನಕ್ಕೆ ಅಟ್ಟಲಾಯಿತು. ಅವರದೂ ರಾಕ್ಷಸ ಕುಟುಂಬವೆಂದು ತೋರುತ್ತದೆ. ಧಡದಿಂದ ಶಿರ ಬೇರ್ಪಟ್ಟರೂ ಕೈ-ಕಾಲು ಅಲ್ಲಾಡಿಸುತ್ತ ಬಿದ್ದುಕೊಂಡಿದ್ದವು. ಆದರೆ ಬೆಳಿಗ್ಗೆ ನಿದ್ರೆ ತಿಳಿದು ಎದ್ದಾಗ ಒಂದೂ ನೆಲದ ಮೇಲೆ ಇಲ್ಲದ್ದನ್ನು ನೋಡಿ ಇದಾವ ಇಂದ್ರಜಾಲವೆಂದು ತಬ್ಬಿಬ್ಬಾಗುವಂತಾಯಿತು. ಇವೇನಾದರೂ ಸಂಜೀವನ ಪಾನಮಾಡಿ ಮತ್ತೆ ಜೀವಹೊಂದಿ ಓಡಿದವೇ? ಬೀಜಾಸುರನ ವಂಶದವು ಬೆಳೆಯುತ್ತಲೇ ಇವೆಯೋ? ಜಿರಳೆಗಳ ಕರಳು ಇತ್ಯಾದಿ ಅಂಗಾಂಗಗಳ ಚೂರುಗಳು ಹರಡಿದ ನೆಲ ಆಗ ತಾನೆ ಉಜ್ಜಿದಷ್ಟು ಶುಭ್ರವಾಗಿತ್ತು. ಇದಾವ ಮಾಯೆಯೆಂದು ಅಚ್ಚರಿಪಡುತ್ತ ಬಚ್ಚಲು ಮನೆ ಕಡೆ ಕಾಲು ಹಾಕಿದ್ದಾಯಿತು.

ಅನ್ಯಮನಸ್ಕನಾಗಿ ಹಲ್ಲುಜ್ಜುತ್ತಿದ್ದಂತೆ ಹರಿದಾಡುವ ಜಿರಳೆಯೊಂದು ಕಣ್ಣಿಗೆ ಬಿತ್ತು. ಇದಕ್ಕಾದರೂ ಖಂಡಿತ ಮೋಕ್ಷ ಕಾಣಿಸಿಯೇ ಬಿಡಬೇಕೆಂದು ಹಿಂಬಾಲಿಸಿ ಓಡಿದಾಗ ಬೇರೊಂದು ವಿಸ್ಮಯ ಕಾದಿತ್ತು. ಪುರಿಯ

ಜಗನ್ನಾಥನ ರಥವನ್ನು ಭಕ್ತರು ಎಳೆದು ಒಯ್ಯುತ್ತಿದ್ದಂಥ ದೃಶ್ಯ ತೀರ ಕುತೂಹಲಕಾರಿಯಾಗಿತ್ತು. ಉದ್ದ ಜೋಡಿ ಮೀಸೆಗಳನ್ನು ದವಡೆಯಲ್ಲಿ ಕಚ್ಚಿ ಹಿಡಿದ ಇರುವೆಗಳು ತಮ್ಮ ಎಲ್ಲ ಶಕ್ತಿ ಬಳಸಿ ಎಳೆಯುತ್ತಿದ್ದವು. ಆರು ಕಾಲುಗಳನ್ನು ಸುತ್ತುವರಿದ ಇರುವೆಗಳು ದೂಡುತ್ತಿದ್ದವು. ಗುದದ್ವಾರದೆಡೆ ಇನ್ನೊಂದು ಸಮೂಹ ಕಾರ್ಯೋನ್ಮುಖಿಯಾಗಿತ್ತು. ಒಂದು ಜೊಂಡಿಗ ವನ್ನು ನೂರಾರು ಇರುವೆಗಳು ತಮ್ಮ ಎಲ್ಲ ಶಕ್ತಿ ಬಳಸಿ ಎಳೆಯುತ್ತಿದ್ದವು. ಲಿಲಿಪುಟರ ನಾಡಿನಲ್ಲಿ ಗಲಿವ್ ಹೇಗೆ ತೋರುತ್ತಿದ್ದಿರಬಹುದೆಂದು ಕಲ್ಪಿಸಿ ಕೊಳ್ಳುವಂತಾಯಿತು. ಎದುರಿಗೆ ಗೋಡೆ ಬಂದದ್ದರಿಂದ ಮುಂದೆ ಹೇಗೆ ಮಾಡುತ್ತವೆ ಎಂದು ನೋಡುವ ಕುತೂಹಲದಲ್ಲಿ ಮುಂಜಾವಿನ ಕಾಫಿ ತಿಂಡಿಗಳೂ ಮರೆತು ಹೋದವು. ಹಿಂಬದಿಗಿದ್ದ ಇರುವೆಯೊಂದು ತಮ್ಮ ಶಿಕಾರಿಯ ಪ್ರದಕ್ಷಿಣೆ ಮಾಡಿ, ಅದನ್ನು ಗೂಡಿಗೆ ಸಾಗಿಸುವ ಯತ್ನದಲ್ಲಿ ತೊಡಗಿದ ಎಲ್ಲ ಸಹಜೀವಿಗಳೊಡನೆ ದೈಹಿಕಸಂಪರ್ಕ ಬೆಳೆಯಿಸಿತು. ಮೀಸೆ ಹಿಡಿದ ತಂಡದವೂ ಹಿಂಬದಿಗೆ ಬಂದು ದೂಡಲಾರಂಭಿಸಿದವು. ಪ್ರತಿ ನಿಮಿಷ ಒಂದು ಮಿಲಿಮೀಟರಿನಷ್ಟು ಮುಂದೆ ದೂಡಿಕೊಂಡು ಹೋದರೆ, ಕೆಲವೊಮ್ಮೆ ಎರಡು ಮೂರು ಸೆಂಟಿಮೀಟರಿನಷ್ಟು ಜಾರಿಕೊಂಡು ಬಿಡು ತ್ತಿತ್ತು. ಆದರೆ ಒಂದಿಷ್ಟೂ ನಿರುತ್ಸಾಹಿಗಳಾಗದೇ ತಿರುಗಿ ಮೊದಲಿನಿಂದ ಯತ್ನಿಸಲಾರಂಭಿಸುತ್ತಿದ್ದವು. ಒಮ್ಮೆಯಂತೂ ಇನ್ನೇನು ಗೂಡಿನ ದ್ವಾರ ದಲ್ಲಿ ಸೇರಿಸಬೇಕು, ಎನ್ನುವುದರಲ್ಲಿ ಹಿಡಿತತಪ್ಪಿದಂತಾಗಿ ಜೊಂಡಿಗ ನೆಲ ಕ್ಕುರುಳಿತು, ಇಷ್ಟಾದರೂ ಎಲ್ಲ ಸದಸ್ಯ ಇರುವೆಗಳು ಒಂದಿಷ್ಟೂ ಧೃತಿ ಗೆಡದೇ ಎಲ್ಲ ದಿಕ್ಕಿನಲ್ಲೂ ಹರಡಿಕೊಂಡು ಜೊಂಡಿಗನಿಗಾಗಿ ಹುಡುಕಲಾರಂಭಿಸಿ ದವು. ಅದನ್ನು ಮೊದಲ ಬಾರಿಗೆ ಗುರುತಿಸಿದ ಕೆಲಸದಾಳು ಇರುವೆ ಈ ಸಂತೋಷದ ಸುದ್ದಿಯನ್ನು ದಾರಿಯಲ್ಲಿ ಸಿಕ್ಕ ಇನ್ನಿತರ ಸಹಚರರಿಗೆ ಮೂಕ ಭಾಷೆಯಲ್ಲಿ ತಿಳಿಸಿತು. ಒಂದರಿಂದ ಇನ್ನೊಂದಕ್ಕೆ ಬೇಗನೆ ಸಮಾಚಾರ ತಿಳಿದು ಎರಡೇ ನಿಮಿಷಗಳಲ್ಲಿ ಎಲ್ಲ ಇರುವೆಗಳೂ ತಿರುಗಿ ತಮ್ಮ ಯತ್ನವನ್ನು ಆರಂಭಿಸಿದವು.

ಒಂದು ಇರುವೆಯನ್ನು ಹಿಡಿದು ಸೂಕ್ಷ್ಮದರ್ಶನದಲ್ಲಿ ನೋಡಿದಾಗ, ಅವಳೊಬ್ಬ ಸುರಸುಂದರಿ ಎಂಬ ಅರಿವಾಯಿತು. ಮೀಸೆಗಳು ಲಘು

ಕೋನವಾಗುವಂತೆ ನಟ್ಟನಡುವೆ ಪಾಲಿವೆ. ದವಡೆಗಳು ಗರಗಸದಂತೆ ಹರಿತ, ಕಾಡಿಗೆ ಹಚ್ಚಿದಷ್ಟು ಕಪ್ಪು ಕಣ್ಣು, ವೇಗವಾಗಿ ನಡೆಯಲು ಇಲ್ಲವೇ ಓಡಲು ಹೇಳಿ ಮಾಡಿಸಿದಂತಹ ತೆಳುವಾಗಿ ಹಗುರವಾಗಿದ್ದರೂ, ಶಕ್ತಿಯುತ ಕಾಲುಗಳು,ಇನ್ನಿತರ ಕೀಟಗಳಂತೆ ಷಟ್‌ಪಾದಿಯಾದರೂ ರೆಕ್ಕೆಗಳಿಲ್ಲ. ಶರೀರದ ಹಿಂಭಾಗವನ್ನು ಮುಂದಿನದೊಡನೆ ಜೋಡಿಸುವಲ್ಲಿ ಸ್ಫುಟವಾಗಿ ಕಾಣದ ಮುಳ್ಳು, ಬಿಳಿ ಮೈಬಣ್ಣ, ಶಿರ-ದವಡೆಗಳು ಕೇಸರಿಯಾದರೆ ಮೀಸೆ ಕಾಲುಗಳು ಅರಿಷಿಣ ಬಣ್ಣದವು. ಸದಾಕಾಲ ಚಟುವಟಿಕೆಗಳಿಂದ ತುಂಬಿರುವವಳಿಗೆ ಬಂಧನದಲ್ಲಿ ಬೇಸರ ಬಂದಿರಬೇಕು. ಮೀಸೆ, ಮುಖ ದವಡೆಗಳನ್ನು ಕಾಲುಗಳಿಂದ ಝಾಡಿಸಿ ಶುಚಿಗೊಳಿಸುವುದರಲ್ಲಿ ಮಗ್ನವಾಯಿತು. ಶರೀರವನ್ನು ಶುಚಿಗೊಳಿಸಲು ಬೇಕಾಗುವ ಸಾಬೂನು, ಟುವಾಲು, ಬಾಚಣಿಗೆಗಳನ್ನು ಈ ಪುಟ್ಟ ಜೀವಿ ವಂಶಪಾರಂಪರಿತವಾಗಿಯೇ ಪಡೆದುಬಂದಂತಿದೆ. ಮುಂಗಾಲಿನ ಮೊಣಕಾಲು ಸಂದಿಯಲ್ಲಿ ಹರಿತವಾದ ಹಲ್ಲುಗಳುಳ್ಳ ಹಣಿಗೆಯೊಂದಿದ್ದರೆ, ಮೈ ಕೂದಲುಗಳು ಬ್ರಷ್‌ನಂತೆ ಜೋಡಿಸಲಾಗಿದೆ. ದವಡೆ-ಹಲ್ಲು ಎಂಜಲುಗಳಿಗೆ ಈ ಸಲಕರಣೆಗೆ ಜೋಡಿಸಿದರೆ ಇರುವೆಗೆ ಅಲಂಕಾರಕ್ಕೆ ಬೇರೇನೂ ಬೇಕಾದಂತೆ ಇಲ್ಲ.

ಇರುವೆ ಶುಚಿರ್ಭೂತೆಯಾಗುವುದರಲ್ಲಿ ಮಗ್ನವಾಗಿದ್ದಾಗ ಇಣಚಿಯ ಒಣಸ್ನಾನ, ನಾಯಿ ಕೆರೆದುಕೊಳ್ಳುವುದು ಮತ್ತು ಬೆಕ್ಕು ನೆಕ್ಕಿಕೊಳ್ಳುವುದು ನೆನಪಿಗೆ ಬರುತ್ತದೆ. ಮಣ್ಣಿನಲ್ಲಿ ಜೀವಿಸಿ, ಸಗಣಿ, ತಿಪ್ಪೆಗಳಲ್ಲಿ ಓಡಾಡಿದರೂ ಮೈ ಎಲ್ಲಾ ಶುಭ್ರವಾಗಿರಲು ಈ ಚಟುವಟಿಕೆಗಳೇ ಕಾರಣವಿದ್ದಿರಬೇಕು.

ಹಿಂಗಾಲ ಮೇಲೆ ಕುಂಡೆಯೂರಿ ಆರೂಢಳಾಗಿ ಮುಂಗಾಲಿನಿಂದ ಕುಡಿಮೀಸೆಯನ್ನು ದವಡೆಗಳ ಮಧ್ಯದಲ್ಲಿ ಎಳೆದುಕೊಂಡು, ಪ್ರತಿಸಂದಿಯಲ್ಲಿಯೂ ಸೇರಿಕೊಂಡ ಕೊಳಚೆಯ ಕಣವನ್ನು ಬೇರ್ಪಡಿಸಿಕೊಂಡದ್ದಾಯಿತು. ಅವಶ್ಯವೆನಿಸಿದಾಗ ಎಂಜಲನ್ನು ಮೀಸೆಗೆ ಧಾರಾಳವಾಗಿ ಸವರಿತು. ಮೈ ಒದ್ದೆಮಾಡಲು ನೀರಿನಂತೆ ಬಳಸಿದರೂ ಅದರಲ್ಲಿ ಸಾಬೂನಿನ ಗುಣಧರ್ಮ ಇದ್ದಿರಬಹುದು ಎಂದೆನಿಸುತ್ತದೆ. ಜೋಡಿ ಮೀಸೆಗಳ ಸ್ವಚ್ಛತೆ ಮುಗಿದ ನಂತರ, ಅದಕ್ಕಿದ್ದ ಹೆಚ್ಚಿನ ಎಂಜಲನ್ನು ನಾಲಿಗೆಯಿಂದ ಹೀರಿ

ಕೊಂಡದ್ದರಿಂದ ತೇವವೆಲ್ಲ ಮಾಯುವಾಯಿತು. ಇನ್ನುಳಿದ ಅಂಗಾಂಗಗಳ ಸ್ವಚ್ಛತೆಗಾಗಿ ಬಳಸಿದ ವಿಧಾನಗಳೇ ಬೇರೆ. ಮುಂಗಾಲಿಗಿದ್ದ ಬ್ರಶ್‌ನಿಂದ ಹಲ್ಲುಜ್ಜಿಕೊಂಡು ಕೆನ್ನೆ-ಕಪೋಲ, ಕಣ್ಣುಗಳನ್ನು ಝಾಡಿಸಿಕೊಂಡಿತು. ನಂತರ ಅವೇ ಕಾಲುಗಳನ್ನು ಹಿಂದೆ ಒಯ್ದು ಶರೀರದ ಹಿಂಭಾಗ ಕೊಡವಿ ಕೊಂಡಿತು. ಮುಂಭಾಗದ ಸ್ವಚ್ಛತೆಯುನ್ನು ಹಿಂಗಾಲುಗಳಿಂದ ಪೂರೈಸಿ ಕೊಂಡದ್ದಾಯಿತು.

ಕೆಲಸಯಿಲ್ಲದೇ ಬೇಸರ ಬಂದಿರಬೇಕು ಸುಂದರಿಗೆ. ಬಾಯನ್ನು ಅಗಲಿಸಿ, ನಾಲಿಗೆ ಹೊರಚಾಚಿ ಜೋರಾಗಿ ಆಕಳಿಸಿದಳು. ನಿದ್ರೆ ಬಂದಿರ ಬಹುದೇ ಎಂಬ ಸಂಶಯುವೂ ಮಿಂಚಿ ಮಾಯುವಾಯಿತು. ಇರುವೆ ಎಂದಾದರೂ ನಿದ್ರಿಸುತ್ತದೆಯೇ ? ಮಲಗಿದರೆ ನಮ್ಮಂತೆ ನೆಲಕ್ಕೆ ಬೆನ್ನು ಚಾಚುವುದೇ ? ಇಲ್ಲವೇ ನಾಯಿ-ಬೆಕ್ಕುಗಳಂತೆ ಅಂಗಾತ ನಿದ್ರಿಸುವುದೆ ? ಕೋತಿಯಂತೆ ಕುಳಿತಲ್ಲೇ ನಿದ್ರಿಸಲೂ ಸಾಧ್ಯವಿದೆ, ಎಂದು ಅನಿಸದೇ ಇರ ಲಿಲ್ಲ. ಬೆಳಗಿನಿಂದ ಏನಾದರೂ ತಿಂದಿಯೋ ಇಲ್ಲವೋ ! ಬಂಧಿತಳಾಗಿ ದ್ದಾಳೆಂದು ಮನೆಯುವರಿಗೆ ತಿಳಿದರೆ ಬಂದು ಜಾಮೀನಿನ ಮೇಲೆ ಬಿಡಿಸಿ ಕೊಂಡು ಹೋಗುವ ಯತ್ನವನ್ನಾದರೂ ಮಾಡುತ್ತಿದ್ದರೋ ಏನೋ. ಸೆರೆಯಾಳಾಗಿ ಸಾಯುವುದಕ್ಕಿಂತ ಸ್ವತಂತ್ರ ಜೀವಿಯಾಗಿ ಬಾಳುವುದು ಲೇಸೆಂದು ಹಾಗೇ ಮಾಡಿದಾಗ, ಅವಳಿಗೆ ಅನಿರೀಕ್ಷಿತವಾಗಿ ಸಿಕ್ಕ ಸ್ವಾತಂತ್ರ್ಯ ವನ್ನು ಹೇಗೆ ಬಳಸಬೇಕೆಂದು ಕಂಗೆಟ್ಟಳು. ಮುಂದೆ ಹೋದಳು, ಹಿಂದೆ ಬಂದಳು, ಸುತ್ತುವರಿದಳು, ಏನೋ ಹುಡುಕುವವಳಂತೆ ಅತ್ತಿಂದಿತ್ತ ಓಡು ವಾಗ ಅವಳ ಆಪ್ತ ಸ್ನೇಹಿತೆ ಎದುರು ಬಂದಳು. ಏನೋ ಪಿಸುಮಾತಿನಲ್ಲಿ ಗುಸುಗುಸು ನಡೆಯಿತು. ಮೀಸೆ ಮೀಸೆ ತಿಕ್ಕಿಕೊಂಡು, ಮುಂಗಾಲುಗಳನ್ನು ತಿವಿದುಕೊಂಡು, ಮುಖಕ್ಕೆ ಮುಖವಿಟ್ಟು ಚುಂಬಿಸಿಕೊಂಡರು. ಅಬ್ಬಾ, ಸಾರ್ವಜನಿಕ ಸ್ಥಳದಲ್ಲಿ ಬಹಿರಂಗವಾಗಿ ಚುಂಬಿಸಲು ತಾವಾಗಿ ಹಕ್ಕನ್ನು ಗಳಿಸಿದ ಧೀರಜನಾಂಗವಿದು ! ಅಂದುಕೊಳ್ಳುತ್ತಿದ್ದಂತೆ, ಏನೋ ಅರ್ಥವಾದ ವಳಂತೆ ಸುಂದರಿ ಓಡುತ್ತ ತನ್ನವರು ಸಾಗುತ್ತಿದ್ದ ಪ್ರಭಾತಬೇರಿಯುಲ್ಲಿ ಸೇರಿ ಕೊಂಡು ಬಿಟ್ಟಳು. ಆ ಜನಸಮೂಹದಲ್ಲಿ ಸುಂದರಿಯುನ್ನು ಗುರುತಿಸುವುದು

ಅಶಕ್ಯವಾಯಿತು. ಅವರ ಸಮಾಜದಲ್ಲಿ ಸುಂದರಿ ಯಾರ ಮಗಳು, ಯಾರ ಪತ್ನಿ, ಯಾರ ಪ್ರೇಮಿ ಎಂದು ಅರಿಯಲಾಗದಿದ್ದರೆ ಗೊಂದಲ ಏಳದೇ ಇದ್ದೀತೇ ?

ಎವೆಯಿಕ್ಕದೇ ಇರುವೆ ಸಾಲು ನೋಡುತ್ತಿದ್ದಂತೆ ಹೊಸ ಹೊಸ ಸಂಗತಿಗಳು ಅರಿವಾಗಲಾರಂಭಿಸಿದವು. ವಿಶ್ವದ ಜವಾಬ್ದಾರಿಯೆಲ್ಲ ತಾವೇ ಹೊತ್ತವರಂತೆ ತ್ವರೆಯಿಂದ ಹೋಗಿ ಬರುವವರೆಲ್ಲ ಹೆಂಗಳೆಯರೇ ಆಗಿದ್ದರು. ಅಲ್ಲಿ ಒಂದು ಗಂಡೂ ಕಣ್ಣಿಗೆ ಬೀಳದ್ದರಿಂದ ಇರುವೆಗಳದ್ದು ಮಲೆಯಾಳೀ ಪ್ರಮೀಳಾರಾಜ್ಯ ಇರಬಹುದೇ ? ಎಂಬ ಅನುಮಾನಕ್ಕೆ ಆಸ್ಪದವಾಯಿತು. ಒಬ್ಬ ಠೊಣಪನನ್ನು ಹಿಡಿದು ಕೂಲಂಕಷವಾಗಿ ಪರೀಕ್ಷಿಸಿದಾಗ ಅವನೊಬ್ಬ ಸೈನಿಕನೆಂಬ ಗುಟ್ಟು ರಟ್ಟಾಯಿತು. ಅವನು ಕತ್ತಿ, ಕಠಾರಿ, ಕೋವಿ ಗಳೊಂದಿಗೆ ಪಹರೆಮಾಡುವ ಬದಲಾಗಿ ಶರೀರಮಾನದಿಂದ ಬೃಹತ್ ಗಜ ಶಿರ ಹೊಂದಿದ ಮಾನವನಂತೆ ಕಾಣುತ್ತಿದ್ದ. ಎಂಥ ವೈರಿಯನ್ನೂ ನುಚ್ಚು ನೂರು ಮಾಡುವ ಪ್ರಬಲವಾದ ದವಡೆಗಳುಳ್ಳ ಕೋಮಲಾಂಗಿನಿಯರು ಈ ದೈತ್ಯನಿಗೆ ಹೆದರುತ್ತಿರಲಿಲ್ಲ. ಬದಲಾಗಿ, ವೇಗವಾಗಿ ಹೊರಟಾಗ ದಾರಿಯಲ್ಲಿ ಅಡ್ಡ ಬಂದರೆ, ಅದರ ಮೇಲೆ ಹತ್ತಿ ಇಳಿದು ಮುಂದರಿಯುತ್ತಿದ್ದವು. ಈ ಈ ಹೆಂಗಳೆಯರ ಕಾಟವೇ ಬೇಡವೆಂದು ಸೈನಿಕನು ಸ್ವಲ್ಪ ಅಂತರದಲ್ಲಿ ಸೈನಿಕ ಶಿಸ್ತಿನಿಂದ ಕವಾಯತು ಮಾಡುತ್ತ ಹೊರಟಿದ್ದ. ತನ್ನ ಸಹೋದರಿ ಯರಿಗೆ ಗಂಡಾಂತರವಿದೆ ಅನಿಸಿದಾಗ ನಿಂತು ನಾಲ್ಕೂ ದಿಕ್ಕುಗಳನ್ನು ಪರಿಶೀಲಿಸಿ ಯಾವ ಅಪಾಯವೂ ಇಲ್ಲವೆಂದು ಖಚಿತಪಡಿಸಿಕೊಂಡ ನಂತರವೇ ಸವಾರಿ ಮುಂದರಿಯುತ್ತಿತ್ತು. ಏನಾದರೂ ಸಂದೇಹಾಸ್ಪದವಾಗಿ ಕಂಡಾಗ, ಹಿಂಗಾಲ ಮೇಲೆ ನಿಂತು ಗಗನದತ್ತ ಮೋರೆ ಮಾಡಿ, ದವಡೆಗಳನ್ನು ತೀವ್ರ ಗತಿಯಿಂದ ಬಿಚ್ಚಿ ಮುಚ್ಚಲಾರಂಭಿಸಿದ. ಸನಿಹದಲ್ಲಿದ್ದ ಪ್ರಮೀಳೆಯರೆಲ್ಲ ಗಂಡಾಂತರದ ನಿಶಾನೆಯನ್ನು ಅರಿತು ಲಗುಬಗೆಯಿಂದ ಹಿಂದಿರುಗಲಾರಂಭಿಸಿ ದವು. ಐದೇ ನಿಮಿಷಗಳಲ್ಲಿ ಅಲ್ಲೊಂದು ಇರುವೆಗಳ ಸಾಲು ಇತ್ತು, ಎಂಬುದಕ್ಕೆ ಯಾವ ಕುರುಹನ್ನೂ ಬಿಡದೇ ಕಣ್ಮರೆಯಾಗಿ ಬಿಟ್ಟಿದ್ದವು.

ಮುಂಜಾನೆಯಿಂದ ಏನೂ ತಿಂದಿಲ್ಲವೆಂದು ಹೊಟ್ಟೆ ಜ್ಞಾಪಿಸಿದಾಗ ಚಹಕ್ಕೆ ಎಸರಿಟ್ಟು ಸಕ್ಕರೆ ಪೊಟ್ಟಣವನ್ನು ಎತ್ತಿಕೊಂಡಾಗ ಕೈ ಮೇಲೆಲ್ಲ

ಇರುವೆಗಳು ಹರಿದಾಡಹತ್ತಿದವು. ಸಿಹಿ ತಿಂಡಿ ಒದಗಿಸಿದ್ದಕ್ಕಾಗಿ ಕಟ್ಟದಷ್ಟು ಸೌಜನ್ಯ ತೋರಿಸಿದರೂ ಅವುಗಳ ಓಡಾಟದಿಂದ ಮುಜುಗರವಾಗಿ ಕೈಕೊಡವಿ ಕೊಳ್ಳಬೇಕಾಯಿತು. ಇದರಿಂದ ಅರ್ಧದಷ್ಟಾದರೂ ಸಾವು-ನೋವಿಗೆ ಒಳ ಪಟ್ಟಿರಬೇಕು. ಗಟ್ಟಿಯಾಗಿ ಕಟ್ಟಿದ ಪೊಟ್ಟಣದಲ್ಲಿ ಈ ಸಿಹಿ-ಪ್ರೇಮಿಗಳು ಹೇಗೆ ಒಳ ಹೊಕ್ಕವು ? ಎಂದು ಶೋಧಿಸಿದಾಗ ಸಾಸಿವೆಕಾಳಿನಷ್ಟು ಪುಟ್ಟ ರಂಧ್ರ ಗೋಚರಿಸಿತು. ಬಹುಶಃ ಸೈನಿಕ ಇರುವೆ ದವಡೆಗಳನ್ನು ಬಳಸಿ ಅದನ್ನು ನಿರ್ಮಿಸಿರಬೇಕೆಂದು ಅನಿಸಿತು. ಹಾಗಿದ್ದರೂ ಪೊಟ್ಟ ಮೊದಲಿಗೆ ಇದರಲ್ಲಿ ಸಕ್ಕರೆ ಇದೆ ಎಂದು ಹೇಗೆ ಪತ್ತೆ ಹಚ್ಚಿರಬಹುದು ? ಎಂದು ಕುತೂಹಲ ಕೆರಳಿತು. ಸಕ್ಕರೆಯನ್ನು ಹರಿವಾಣದಲ್ಲಿ ಹಾಕಿ ಬಿಸಿಲಿಗಿಟ್ಟಾಗ ಅದರ ಶಾಖ ತಡೆಯದೇ ಓಡಿದವು. ಚಹಾಕ್ಕೆ ಬೇಕಾದಷ್ಟನ್ನು ಬಳಸಿ, ಉಳಿದುದನ್ನು ಒಂದು ಪ್ಲಾಸ್ಟಿಕ್ ಚೀಲಕ್ಕೆ ಸೇರಿಸಿ, ಇನ್ನು ಕಳವಿಗೆ ಆಸ್ಪದ ವಿಲ್ಲವೆಂದು ಕಪ್ಪನ್ನು ಕೈಗೆ ಎತ್ತಿಕೊಳ್ಳುತ್ತಿದ್ದಂತೆ ನಾಲ್ಕೈದು ಇರುವೆಗಳು ಗೋಚರಿಸಿದವು. ಹೊಗೆಯಾಡುವ ಚಹ ಸವಿಯುತ್ತ ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸಿದಾಗ ಅವು ಬೇರೆ ಬೇರೆ ದಿಕ್ಕಿನಲ್ಲಿ ಮನಸ್ಸಿಗೆ ಬಂದಂತೆ ಹೋಗ ಲಾರಂಭಿಸಿದವು. ಅವುಗಳಲ್ಲಿಯ ಒಂದೇ ಒಂದು ಪ್ಲಾಸ್ಟಿಕ್ ಚೀಲವನ್ನು ಮುಟ್ಟಿತು. ಹೊರಗೆ ಅಂಟಿಕೊಂಡಿದ್ದ ಒಂದು ಸಕ್ಕರೆ ಕಣವನ್ನು ತನ್ನ ದವಡೆಯಲ್ಲಿ ಕಚ್ಚಿ ಜಯಭೇರಿ ಹೊಡೆದವಳಂತೆ ಬಂದ ದಾರಿಯಿಂದ ಹೊರ ಟಿತು. ಎದುರಿಗೆ ಸಿಕ್ಕ ಪ್ರತಿ ಇರುವೆಗೂ ಕಾಲು ಸ್ಪರ್ಶಿಸಿ, ಮೀಸೆ ಜೋಡಿಸಿ ಸಕ್ಕರೆ ವಾಸನೆ ಮುಟ್ಟಿಸಿತು. ಇನ್ನಿತರ ಇರುವೆಗಳು ಮೀಸೆಯಿಂದ ನೆಲ ಸ್ಪರ್ಶಿಸಿ ತಮ್ಮ ಸಹೋದ್ಯೋಗಿ ತುಳಿದ ದಾರಿಯನ್ನೇ ತುಳಿಯುತ್ತ ತಪ್ಪದೇ ಪೊಟ್ಟಣಕ್ಕೆ ಬಂದು ಮುಟ್ಟಿದವು. ಅದೆಂತಹ ಅಗಾಧ ಘ್ರಾಣೇಂದ್ರಿಯ ವದು ! ಒಂದು ಇರುವೆಯ ಮೀಸೆಗೆ ಗಂಧದೆಣ್ಣೆ ಸವರಿ ಹೋಗ ಬಿಟ್ಟಾಗ ಎಂದಿನಂತೆ ಸಹಜೀವಿಗಳೊಂದಿಗೆ ಮೀಸೆ ಸ್ಪರ್ಶ ನಡೆಸಿದರೂ ಯಾವ ಇರುವೆಯೂ ಗಂಧದೆಣ್ಣೆಗೆ ಮುತ್ತಿಕೊಳ್ಳಲೇ ಇಲ್ಲ. ಬಹುಶಃ ಮಾನವನಿಗೆ ಆಹ್ಲಾದಕರವಾದ ಸುವಾಸನೆ, ಇರುವೆಗೆ ಇಷ್ಟವಿಲ್ಲದಿರುವುದೇ ಇದಕ್ಕೆ ಕಾರಣ ವಿರಬಹುದು. ಇಲ್ಲವೇ ಅದರ ಆಹಾರದ ವಾಸನೆಗಳನ್ನಷ್ಟೇ ಅವು ಪರಿಗಣ ಸುತ್ತಿರಬಹುದು. ಒಂದು ಇರುವೆಯ ಮೀಸೆ ಕಿತ್ತೊಗೆದಾಗ ಅದು ಆಹಾರ

ಶೋಧಿಸಲಾಗದೇ ಕಂಗಾಲಾಯಿತು. ಇದರಂತೆ ಮೀಸೆಗೆ ಮೇಣ ಸವರಿದಾಗಲೂ ಆಹಾರ ದೊರಕಿಸುವ ಯತ್ನದಲ್ಲಿ ವಿಫಲವಾಯಿತು. ಇದರಿಂದ ಮೂಗಿಲ್ಲದ ಇರುವೆಗೆ ಮೀಸೆಗಳೇ ಘ್ರಾಣೇಂದ್ರಿಯವೆಂದು ಅರಿಯುವಂತಾಯಿತು.

ಆಹಾರ ಸಾಮಗ್ರಿಯನ್ನು ಸಂರಕ್ಷಿಸುವುದು ಇರುವೆಗಳ ಅಸಂಖ್ಯ ಪೀಡೆಗಳ ನಡುವೆ ತುಂಬ ಪ್ರಯಾಸದ ಕೆಲಸವಾಗಿತ್ತು. ಆಹಾರ ವಸ್ತುಗಳನ್ನು ಕಪಾಟಿನಲ್ಲಿಟ್ಟು, ಅದರ ನಾಲ್ಕೂ ಕಾಲುಗಳನ್ನು ನೀರಿನ ಪಾತ್ರೆಗಳಲ್ಲಿಟ್ಟು ಹಿಂದಿನ ಕಾಲದ ಕೋಟೆಗಳ ಸುತ್ತಲೂ ಇರುವ ನೀರಿನ ಕಂದಕಗಳಂತೆ ಮಾಡಿದ್ದಾಯಿತು. ಬಂಗಾಲಿಗಳ ಖ್ಯಾತ ಸಿಹಿ ಖಾದ್ಯವಾದ ರಸಗುಲ್ಲಾಗಳನ್ನು ತಿನ್ನಬೇಕಂ ಎಂದು ಕಪಾಟಿನ ಬಾಗಿಲು ತೆಗೆದಾಗ ಅದಾಗಲೇ ಇರುವೆಗಳು ತಮ್ಮ ಪಾಲುಗಳನ್ನು ಒಯ್ಯಲಾರಂಭಿಸಿದ್ದವು ! ಈ ಆಹಾರಕೋಟೆಯೊಳಗೆ ನುಗ್ಗುವ ಕುಚೋದ್ಯ ಹೇಗೆ ಸಾಧಿಸಿದವು ? ಎಂದು ವಿವರವಾಗಿ ಪರೀಕ್ಷಿಸಿದಾಗ, ಕಪಾಟಿನ ಮೇಲ್ಗಡೆ ಇಟ್ಟ ಅಂದಿನ "ಅಮೃತ್ ಬಝಾರ್" ಪತ್ರಿಕೆ ಕಂಡಿತು. ಅದರ ಒಂದು ಪುಟದ ಅಂಚು ಹೌದೋ ಅಲ್ಲವೋ ಎನ್ನುವಂತೆ ಗೋಡೆಯನ್ನು ಸೋಂಕಿತ್ತು. ಇರುವೆಗಳ ಮಹಾಸೈನ್ಯ ಗೋಡೆಯನ್ನೇರಿ ಪತ್ರಿಕೆಯ ಅಂಚನ್ನೇ ಸೇತುವೆಯಾಗಿ ಮಾರ್ಪಡಿಸಿ ಕಪಾಟಿನ ಮೇಲೆ ದಾಳಿಯಿಟ್ಟಿದ್ದವು. ಉಳಿದೆಲ್ಲ ಕೀಟಗಳಂತೆ ಇರುವೆಯೂ ಕೇವಲ ಹುಟ್ಟುಗುಣದಿಂದಲೇ ವರ್ತಿಸುವುದಾದರೆ ಈ ಸಾಹಸಕ್ಕೆ ಹುಟ್ಟು ಸ್ವಭಾವ (Instinct) ಎಂದು ಕರೆಯಬಹುದೇ ? ಧೀಮಂತನೆಂದು ಕರೆದುಕೊಳ್ಳುವ ಮಾನವನಂತೆಯೇ ಸಾಹಸಕ್ಕೆರಗುವ ಈ ಜೀವಿಗಳನ್ನು ಧೀಮಂತ ಕೀಟವೆಂದು ಏಕೆ ಕರೆಯಬಾರದೆಂದು ಮೆಚ್ಚುಗೆ ಮೂಡಿತು. ಅವುಗಳ ಬುದ್ಧಿ ಮತ್ತೆ ಪರೀಕ್ಷಿಸಿಯೇ ಬಿಡಬೇಕೆಂದು, ವೃತ್ತಪತ್ರಿಕೆಯನ್ನು ಆ ಸ್ಥಳದಿಂದ ತೆಗೆದ ಒಂದು ತಾಸಿನ ನಂತರವೂ ರಸಗುಲ್ಲಗಳ ಮೇಲೆ ದಾಳಿಯನ್ನು ನಡೆಸಿಯೇ ಇದ್ದವು. ಈ ಸಲ ರಸಗುಲ್ಲಾ ಕಟ್ಟಿ ಕೊಟ್ಟು ಮಣ್ಣಿನ ಪಾತ್ರೆಯ ಬಾಯಿಗೆ ಹೊಂದಿದ್ದ ದಾರವನ್ನು ಬಳಸಲಾರಂಭಿಸಿದ್ದವು. ಸಿಂಹಗಡದ ಮೇಲೆ ಆಕ್ರಮಣ ನಡೆಸಿದ ಶಿವಾಜಿಯ ಸೇನಾಧಿಕಾರಿ ತಾನಾಜಿ ಉಡದ

ಸೊಂಟಕ್ಕೆ ಕಟ್ಟಿದ ಹಗ್ಗದ ಆಧಾರದಿಂದ ಕೋಟೆಯ ಗೋಡೆ ಹತ್ತಿದಂತೆ ಕಪಾಟಿನ ಹಿಂದೆ ಇಳಿಬಿದ್ದಿದ್ದ ದಾರ ಹತ್ತಿ ಇಳಿದು ತಮ್ಮ ಚಟುವಟಿಕೆಯನ್ನು ಮುಂದುವರಿಸಿದ್ದವು ! ಆ ದಾರವನ್ನು ಕಿತ್ತೊಗೆದಾಗ ಇರುವೆಗಳು ಧೃತಿಗೆಡದೇ "ಕಂದಕ"ದಲ್ಲಿದ್ದ ನೀರನ್ನು ಈಜಿಹೋಗುವ ಸಾಹಸಕ್ಕೆ ಇಳಿದವು. ಅಪಾರ ಸಾವು-ನೋವುಗಳನ್ನು ಅನುಭವಿಸಿದರೂ, ಇರುವೆಗಳು ಮುನ್ನುಗ್ಗುತ್ತಲೇ ಇದ್ದವು. ಎರಡು ತಾಸುಗಳ ನಂತರ, ಸತ್ತ ಇರುವೆಗಳ ದೇಹದಿಂದಲೇ ಒಂದು ಸೇತುವೆಯನ್ನು ನಿರ್ಮಿಸಿ ತಮ್ಮ ಓಡಾಟವನ್ನು ಮುಂದುವರಿಸಿದ್ದವು. ನಾಲ್ಕು ದಶಕಗಳ ಹಿಂದೆ ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿ ಜೈಲಿಗೆ ಹೋದರೆಂಬ ನೆಪದ ಮೇಲೆ "ತ್ಯಾಗಿ"ಗಳೆಂದು ಕರೆಸಿಕೊಂಡು ಸರಕಾರದಿಂದ ಎಲ್ಲ ಸವಲತ್ತುಗಳನ್ನು ಗಿಟ್ಟಿಸುತ್ತಲೇ ಇರುವ ನಮ್ಮ ಸಮಾಜದ ಪುಢಾರಿಗಳೆಲ್ಲಿ ! ಎಣೆಯಿಲ್ಲದ ಸಂಖ್ಯೆಯಲ್ಲಿ ಸತ್ತು ತಮ್ಮ ಸಮಾಜದ ಹಿತ ಸಂರಕ್ಷಿಸುವ ಇರುವೆಗಳ ಮಹಾತ್ಯಾಗಿಗಳೆಲ್ಲಿ ! ಎನಿಸಿತು. ಇರುವೆಗಳ ಕೆಚ್ಚೆದೆಯನ್ನು ಪರೀಕ್ಷಿಸುವುದಕ್ಕಾಗಿ ನೀರಿಗೆ ಸ್ವಲ್ಪ ಸೀಮೆಯೆಣ್ಣೆ ಸೇರಿಸಿದಾಗ "ಜೋಹರ್"ದಲ್ಲಿ ಪಾಲುಗೊಳ್ಳುವ ರಜಪೂತ ರಮಣಿಯರಂತೆ ಆತ್ಮಬಲಿದಾನವನ್ನು ಪ್ರಾರಂಭಿಸಿದವು. ಇವುಗಳಿಗೆ ವೀರಗಲ್ಲು, ಮಾಸ್ತಿಗಲ್ಲು ನಿಲ್ಲಿಸುವವರಿಲ್ಲ ! ಹೋಗಲಿ, ಅವು ನೆಮ್ಮದಿಯಿಂದ ಬಾಳುವಂತೆ "ಪಿಪೀಲಿಕಾ-ಆಲಯ" ನಿರ್ಮಿಸಬೇಕೆಂದು ನಿರ್ಧಾರ ಕೈಕೊಂಡಾಗ ನೆಮ್ಮದಿಯೆನಿಸಿತು.

# 18. ಹೆಂಗಳೆಯರ ರಾಜ್ಯದಲ್ಲಿ

ಅಂಗಡಿಗಳಲ್ಲಿ ಚಾಕಲೇಟು ಹಾಕಿಡಲು ಬಳಸುವ ಗಾಜಿನ ಭರಣಿ ಕೊಂಡು ತಂದು ಅದರಲ್ಲಿ ಇರುವೆಗಳು ಇಷ್ಟಪಡುವ ರಸಗುಲ್ಲಾ, ಚವರ್ ಚವರ್ ಸಕ್ಕರೆಗಳನ್ನು ಶೇಖರಿಸಿ, ಬಾಯಾರಿಕೆಗೆ ನೀರು ಪೂರೈಸಿ, ಅದರಲ್ಲಿ ನೂರಾರು ಇರುವೆಗಳನ್ನು ಸೇರಿಸಿ, ತಿಂದಾದ ಮೇಲೆ ಪಲಾಯನ ಮಾಡ ದಂತೆ ಮುಚ್ಚಳವನ್ನು ಬಿಗಿಯಾಗಿ ಹಾಕಲಾಯಿತು. ಇರುವೆ-ಅರಸ-ಅರಸಿ ಯರನ್ನು ಕಾಣಲು ಹಂಬಲಿಸಿದ್ದರಿಂದಲೋ ಏನೋ ಕನಸಿನಲ್ಲಿ ಅಪ್ಸರೆಯು ರೆಲ್ಲ ಇರುವೆಗಳ ರೂಪದಲ್ಲಿ ನೃತ್ಯ-ಸಂಗೀತ ಕಛೇರಿ ನಡೆಸಿದ್ದವು. ಅವು ಗಳನ್ನು ಕಣ್ಣಾರೆ ಕಾಣುವ ಹಂಬಲದಿಂದ ಭರಣಿಯತ್ತ ಧಾವಿಸಿದರೆ, ಅಲ್ಲೊಂದು ಅಚಾತುರ್ಯ ನಡೆದು ಹೋಗಿತ್ತು. ಇರುವೆಗಳೆಲ್ಲ ಬಾಯ್ತುಂಬ ಆಹಾರ ಸಂಗ್ರಹಿಸಿ ತಮ್ಮ ವಾಸಸ್ಥಾನಕ್ಕೆ ಹಿಂದಿರುಗುವ ಯತ್ನದಲ್ಲಿ ಭರಣಿಯ ಬಾಯಿಯ ಪ್ರದಕ್ಷಿಣೆ ಹಾಕಿ ಹಾಕಿ ಸುಸ್ತಾಗಿ, ಅಲ್ಲಿಯೇ ಮೃತಪಟ್ಟಿದ್ದವು. ಅವುಗಳನ್ನು ಸಾಕುವ ಯತ್ನದಲ್ಲಿ ಕೈಯಾರೆ ಕೊಲ್ಲು ವಂತಾದ್ದಕ್ಕೆ ಪರಿತಪಿಸುವಂತಾಯಿತು. ಅವುಗಳಿಗೆ ಶ್ರದ್ಧಾಂಜಲಿ ಅರ್ಪಿಸು ವುದಕ್ಕಾಗಿ ಬೆಳಗಿನ ಚಹಾಪಾನ ತ್ಯಜಿಸಿದ್ದಾಯಿತು. ಈ ಘಟನೆಯಿಂದ ತುಂಬ ನೋವಾದರೂ, ಇರುವೆಗಳನ್ನು ಅರಿತುಕೊಳ್ಳುವ, ಪಾಲನೆ ಮಾಡುವ ಹಂಬಲ ಒಂದಿಷ್ಟೂ ಕಡಿಮೆಯಾಗಲಿಲ್ಲ.

ಒಂದು ಮುಂಜಾನೆ ಕೆಲ ಇರುವೆಗಳು ಗುಲಾಬಿ ಗಿಡದ ಮೇಲೆ ಹತ್ತಿ ಇಳಿಯುತ್ತಿರುವುದು ಕಣ್ಣಿಗೆ ಬಿತ್ತು. ಮುಳ್ಳಿನಿಂದ ತುಂಬಿದ ಗಿಡದ ಮೇಲೆ

ಅದೆಂತಹ ತಿಂಡಿ ಇದ್ದಿರಬಹುದೆಂದು ಲಕ್ಷ್ಯಗೊಟ್ಟು ನೋಡಿದಾಗ ಒಂದೆರಡು ಇರುವೆಗಳು ಸುಂದರವಾದ ಕೆಂಪು ಗುಲಾಬಿ ಹೂವಿನ ಪಕಳೆಗಳನ್ನು ದವಡೆ ಯಿಂದ ಕಡಿದು ಕೆಂಪು ಪತಾಕಿಯಂತೆ ಗಾಳಿಯಲ್ಲಿ ಹಾರಿಸುತ್ತ ಗೃಹಾಭಿ ಮುಖಿಯಾಗಿ ಹೊರಟವು. ಸರಿ, ಅಂದಿನ ಭೋಜನಕ್ಕೆ ಗುಲಾಬಿ ಹೂವಿನ ಸುಗ್ರಾಸಲಭ್ಯವಿರುವುದೆಂದು ಅರಿತ ನೂರಾರು ಇರುವೆಗಳು ಹೂವಿಗೆ ಮುತ್ತಿಕೊಂಡವು. ಅವೆಲ್ಲ ಪಕಳೆಯೊಂದಿಗೆ ಹೊರಟಾಗ ಮಾರ್ಕ್ಸ್‌ವಾದಿ ಕಾರ್ಮಿಕರು, ಕೆಂಪು ಧ್ವಜಗಳೊಂದಿಗೆ ಹೊರಡಿಸಿದ ಮೆರವಣಿಗೆಗಳು ನೆನಪಿಗೆ ಬರುವಂತಿತ್ತು. ಕೆಂದುಟಿಯ ಗುಲಾಬಿ ಮಾತ್ರ ರಸಿಕರ ಕಣ್ಣಿಗೆ ಆನಂದ ಹೀಯುವ ಮೊದಲೇ ನೆಲಸಮವಾಗಿತ್ತು. ಧ್ವಜ ಹಾರಿಸುತ್ತ, ಕವಾಯತು ಮಾಡುತ್ತ ಹೊರಟ ಪಟ್‌ಪಾದಿಗಳನ್ನು ನೋಡಿದಾಗ, ಅಜ್ಜಿ ಹೇಳಿದ ಕಥೆ ಯೊಂದರಲ್ಲಿ ಕಾಡಿನಲ್ಲಿ ಕಂಗೆಟ್ಟ ಕುಮಾರಿಯೋರ್ವಳು, ಇರುವೆಗಳ ಸಾಲನ್ನೇ ಹಿಂಬಾಲಿಸಿ ಹೋಗಿ ಮಹಾರಾಣಿಯಾಗುವ ಅದೃಷ್ಟ ಪಡೆದ ಸನ್ನಿವೇಶ ನೆನಪಿಗೆ ಬಂದಿತು. ಮಹಾರಾಜನಾಗುವ ಅವಕಾಶ ಸಿಕ್ಕೀತೇ ?.......ಎಂದು ವಿಸ್ಮಯಪಡುತ್ತಿದ್ದಂತೆ ಹೆಜ್ಜೆಗಳಾಗಲೇ ಇರುವೆಗಳ ಮೆರವಣಿಗೆಯನ್ನು ಹಿಂಬಾಲಿಸುತ್ತಿದ್ದವು.

ಬೇಲಿಯ ಅಂಚಿಗೆ ದೊಡ್ಡದೊಂದು ಮಾವಿನ ಮರ. ಅದರ ಆಶ್ರಯದಲ್ಲಿ ಒಂದು ಮಣ್ಣಿನ ದಿಬ್ಬ. ಭಕ್ತರು ತಿರುಮಲನ ಗುಡ್ಡವೇರು ವಂತೆ ಇರುವೆಗಳು ಪ್ರಯಾಸದಿಂದ ಮೇಲೇರುತ್ತಲೇ ಇವೆ. ತುತ್ತತುದಿಗೆ ಏರಿದವುಗಳು ಒಮ್ಮೆಂದೊಮ್ಮೆ ಕಣ್ಮರೆಯಾಗಿ ಬಿಡುತ್ತಿದ್ದವು. ಕಣ್ಣಲ್ಲಿ ಕಣ್ಣಿಟ್ಟು ಪರೀಕ್ಷಿಸಿದಾಗ, ಅದೊಂದು ದಿಬ್ಬವಾಗಿರದೇ ಇರುವೆಗಳ ಮಹಾನ್ ಕೋಟೆಯಾಗಿತ್ತು ! ಅದಕ್ಕೊಂದು ಮಹಾದ್ವಾರವಿದ್ದರೂ, ಹತ್ತಾರು ಅಂಬೆಗಾಲಿಟ್ಟು ಒಳಗೆ ಸೇರಬೇಕಾದ ಕಳ್ಳದಾರಿಗಳಿದ್ದವು. ಎಲ್ಲ ಬಾಗಿಲು ಗಳನ್ನು ಕಾಯಲು ಮಹಾನ್ ದವಡೆಗಳನ್ನು ಪಡೆದ ದ್ವಾರಪಾಲಕರಿದ್ದರು. ಕೋಟೆಯ ಪ್ರಜೆಗಳನ್ನು ಮೀಸೆ ವಾಸನೆಯಿಂದಲೇ ಗುರುತಿಸಿ ಒಳ ಪ್ರವೇಶಿ ಸಲು ಅನುವು ಮಾಡಿ ಕೊಡುತ್ತಿದ್ದರು. ಬೇರೊಂದು ಗುಂಪಿನ ಸದಸ್ಯರು ಗುಪ್ತಚಾರರಂತೆ ಒಳಗೆ ಸೇರಲೆತ್ನಿಸಿದರೆ ಈ ದ್ವಾರಪಾಲಕರು ಹೇಗೆ ತಡೆಯು

ಬಲ್ಲರು, ಎಂಬ ಸಮಸ್ಯೆಗೆ ಕೂಡಲೇ ಉತ್ತರ ತಿಳಿಯಲಿಲ್ಲ. ಕಾಳಗಕ್ಕೆ ಆಹ್ವಾನಿಸಬಹುದು, ಕತ್ತನ್ನು ಹಿಸುಕಬಹುದು, ಕೊಲೆಯನ್ನು ಮಾಡಬಹುದೆಂದು ಅನಿಸಿತು.

ಕೆಲವು ಇರುವೆಗಳು ಹತ್ತಿರದಲ್ಲಿಯೇ ಬೆಳೆದು ನಿಂತ ಸಸ್ಯ ಸಮೂಹಗಳಲ್ಲಿ ಅಲೆದು ಯಾವುದಾದರೂ ಒಂದು ಗಿಡ ಹತ್ತಿ ಎಲೆಯನ್ನು ದವಡೆಯಿಂದ ಕತ್ತರಿಸಿ, ಹೊತ್ತು ಗೃಹಮುಖಿಯಾಗಿದ್ದವು. ಗುಲಾಬಿ ಪಕಳೆಗಳನ್ನಾದರೂ ಅದರ ಆಕರ್ಷಕ ಬಣ್ಣ, ಸುವಾಸನೆ, ಮೃದುತ್ವಗಳಿಂದಾಗಿ ಆಹಾರವಾಗಿ ಸೇವಿಸಲು ಒಯ್ಯುತ್ತಿರಬಹುದು ಎಂದುಕೊಂಡರೆ, ಇವಾವ ಗುಣಗಳನ್ನು ಪಡೆಯದ ಎಲೆಗಳ ರಾಶಿಯಿಂದ ಏನು ಮಾಡುತ್ತಿದ್ದಿರಬಹುದು ? ಎಂದು ಅರಿತುಕೊಳ್ಳುವ ಕುತೂಹಲ ಕೆರಳಿತು. ವಿವರವಾಗಿ ಪರೀಕ್ಷಿಸಿದಾಗ ಈ ಸಸ್ಯಗಳು ಪರಿಸರದಲ್ಲಿ ಬೆಳೆಯುವ ಎಲ್ಲ ಸಸ್ಯಗಳಿಗಿಂತ ಭಿನ್ನವಾಗಿದ್ದವು. ಈ ದಣಿಯದ ಕಾರ್ಮಿಕರು ಹೊಸ ಬಗೆಯ ತೋಟ ಬೆಳೆಸಿರಬಹುದೇ ಎಂಬ ವಿಚಾರದಿಂದಲೇ ರೋಮಾಂಚನವಾಯಿತು. ದಿಬ್ಬದ ಸುತ್ತ ಮುತ್ತ ಸೂಕ್ಷ್ಮವಾಗಿ ಕಣ್ಣು ಓಡಿಸಿದಾಗ ಕುತೂಹಲಕಾರಿ ಸಂಗತಿಗಳು ತಿಳಿಯಲಾರಂಭಿಸಿದವು. ಗೂಡಿನ ಒಂದು ದ್ವಾರದಿಂದ ಒಂದು ಇರುವೆ ಮೃತಪಟ್ಟ ತನ್ನ ಸಹವಾಸಿಯನ್ನು ಹೊತ್ತು ತಂದರೆ, ಇನ್ನೊಂದು ಕಸಕಡ್ಡಿಯನ್ನು ಹೊತ್ತು ಹಿಂಬಾಲಿಸುತ್ತಿತ್ತು. ಸಸ್ಯ ತೋಟದ ಹತ್ತಿರದಲ್ಲಿಯೇ ಕಸದ ರಾಶಿಗೆ ಅದನ್ನು ಸೇರಿಸಿ ಪುನಃ ಗೃಹಾಭಿಮುಖಿಯಾದವು. ಶೇಖರಿಸಿದ ಕಸಕಡ್ಡಿಗಳ ಜೊತೆ ಸತ್ತ ಇರುವೆಗಳೂ ಇದ್ದರಿಂದ ಅದೊಂದು ಸ್ಮಶಾನವೂ ಹೌದೆಂದು ಅರಿವಾಯಿತು. ಸಮೀಪದಲ್ಲಿಯೇ ಕಿರಿದಾದ ಮಣ್ಣಗುಪ್ಪೆಯ ಮೇಲೆ ಆರೂಢವಾದ ಕೀಟಕ್ಕೆ ಎರಡು ಜೋಡಿ ರೆಕ್ಕೆಗಳಿದ್ದವು. ಜೊತೆಗೆ ಉಳಿದೆಲ್ಲ ಇರುವೆಗಳಿಗಿರುವ ಅಂಗಾಂಗಗಳೇ ಇದ್ದವು. ಇದೂ ಇರುವೆ ಗೂಡಿನ ಸದಸ್ಯಕೀಟವಾಗಿರಬಹುದೇ ? ಎಂಬ ಸಂಶಯ ಮೂಡಿತು. ಅದು ತನ್ನ ಹಿಂಗಾಲ ಮೇಲೆ ನಿಂತು ಬಾತುಕೋಳಿಯಂತೆ ಗರಿಗಳನ್ನು ಬಿಚ್ಚಿ ಝಾಡಿಸಿಕೊಂಡಿತು. ಅಷ್ಟರಲ್ಲಿ ಇನ್ನೊಂದು ಮೇಲೇರಿ ಹಿಂದಿನದನ್ನು ತಳ್ಳಿ ತಾನು ಅಂತಹದೇ ಚಟುವಟಿಕೆಯಲ್ಲಿ ತೊಡಗಿತು.

ಉಳಿದ ಇರುವೆಗಳು ಇಷ್ಟೊಂದು ದುಡಿಯುತ್ತಿರುವಾಗ ಇವು ಬಿಸಿಲು ಕಾಯಿಸುತ್ತ ಮೋಜಾಗಿರುತ್ತವಲ್ಲ! ಎಂದುಕೊಳ್ಳುವುದರಲ್ಲಿ ಕೆಲವು ದುಡಿಯುವ ಆಳುಗಳು ಬಂದು ಗೋಪಾಲಕನು ದನಗಳನ್ನು ಅಟ್ಟಿಸಿಕೊಂಡು ಹೋಗುವಂತೆ ಅವನ್ನು ಅಟ್ಟಿಕೊಂಡು ಹೋಗಿ ಗೂಡಿನಲ್ಲಿ ಸೇರಿಸಿದವು. ದುಡಿಮೆಗಾರರು ಎಷ್ಟೊಂದು ಅಧಿಕಾರವನ್ನು ಪಡೆದಿರುತ್ತಾರಲ್ಲವೇ ?

ಇನ್ನೊಂದು ದಿಕ್ಕಿನಲ್ಲಿ ಬೃಹತ್ ಇರುವೆಯೊಂದು ಮಿಸುಕಾಡದೇ ಕುಳಿತಿತ್ತು. ಕೆಲಸಗಾರರು ಅದರ ಸುತ್ತ ವರ್ತುಲವನ್ನೇ ನಿರ್ಮಿಸಿಟ್ಟಿದ್ದವು. ದೊಡ್ಡದಾದ ಧಡದಿಂದ ಅದು ಇರುವೆಗಳ ಮಾತೆ ಇಲ್ಲವೇ ಮಹಾರಾಣಿ ಇದ್ದಿರಬಹುದು ಅನಿಸಿತು. ಈ ವಿಚಾರವನ್ನು ದೃಢಪಡಿಸುವಂತೆ ಒಂದೆರಡು ಇರುವೆಗಳು ಮಹಾರಾಣಿಯತ್ತ ಧಾವಿಸಿ ಅವಳ ಅಂಗಾಂಗಗಳನ್ನು ನೆಕ್ಕಿ ಶುಚಿಗೊಳಿಸಿದವು. ಬೇರೆ ಕೆಲವು ಬಂದು ರುಚಿಕರ ಆಹಾರದ ಗುಟುಕು ಕೊಟ್ಟವು. ಆದರೆ ಈ ಮುಖ್ಯಸ್ಥೆ ಇರುವೆ ತನಗೆ ವ್ಯಾಯಾಮ ಇಲ್ಲದೇ ಊಟವೇ ರುಚಿಸುತ್ತಿಲ್ಲ ಎಂಬ ಭಾವದಿಂದ ಅರ್ಧಮರ್ಧ ತಿಂದು ಉಳಿದದ್ದನ್ನು ತಿರಸ್ಕರಿಸಿತು. ಕೈಕಾಲುಗಳನ್ನು ಬೇಕಾದಂತೆ ಆಡಿಸಿ, ಸ್ವೇಚ್ಛಾಚಾರಿಯಾಗಿ ಓಡಾಡಲು ಯತ್ನಿಸಿದಾಗ, ಅಂಗರಕ್ಷಕ ದಳಬಂದು ತೀವ್ರವಾಗಿ ಪ್ರತಿಭಟಿಸಲಾರಂಭಿಸಿತು. ಸುರಕ್ಷಿತತೆಯ ದೃಷ್ಟಿಯಿಂದ ಸಿಕ್ಕಿದಲ್ಲಿ ಅಲೆದಾಡುವುದು ಕ್ಷೇಮಕರವಲ್ಲ, ಎಂಬುದನ್ನು ಸೂಚಿಸಿದರೂ ಅರಸಿ, ಸೊಪ್ಪು ಹಾಕದಿದ್ದಾಗ ಎರಡು ಮೂರು ಅಂಗರಕ್ಷಕ ಇರುವೆಗಳು ಸೇರಿ ಅವಳತ್ತ ಸಾಹಸದಿಂದ ನುಗ್ಗಿ, ಮೀಸೆ, ಕಾಲುಗಳನ್ನು ಮೃದುವಾಗಿ ತಮ್ಮ ದವಡೆಗಳಿಂದ ಕಚ್ಚಿ ಎಚ್ಚರಿಕೆಯನ್ನಿತ್ತವು. ಮುಖ್ಯಸ್ಥೆಯನ್ನು ಕಳೆದುಕೊಂಡರೆ ಮುಂದೆ ಪ್ರಜೆಗಳ ಗತಿ ಏನು ? ಎಂದು ಕಳವಳವಾಗಿರಬೇಕು. ಅಂತೆಯೇ ರಕ್ಷಣಾ ದಳದ ಸದಸ್ಯರು ಹಿಂಬದಿಯಿಂದ ದೂಡುತ್ತ, ದೂಡುತ್ತ ಅವಳನ್ನು ಗೂಡಿನತ್ತ ಸಾಗಿಸಿದರು. ತಮ್ಮ ರಾಣಿಯ ಬಗ್ಗೆ ಇರುವೆಗಳು ವಹಿಸಿಕೊಳ್ಳುವ ಮುಂಜಾಗ್ರತೆಯನ್ನು ನೋಡಿಯೇ ಮೆಚ್ಚಬೇಕು.

ಇರುವೆಕೋಟೆಯ ವೀಕ್ಷಣೆಗೆ ತೀರ ಹತ್ತಿರ ಹೋದಾಗ, ಎರಡು ಸೈನಿಕರಿಂದ ಕಚ್ಚಿಸಿಕೊಳ್ಳಬೇಕಾಯಿತು. ಆದರೆ ಸ್ಥಿತಪ್ರಜ್ಞನಂತೆ ಕಾಲು

ಗಳನ್ನು ಅಲ್ಲಾಡಿಸದೇ ಒಂದೆಡೆ ನಿಂತರೆ, ಅವನ್ನು ನಿರ್ಜೀವ ವಸ್ತುವೆಂದು ಭಾವಿಸಿ, ಅವುಗಳ ಮೇಲೆ ಹತ್ತಿ ಇಳಿದರೂ ಕಚ್ಚುವ ತೊಂದರೆಯನ್ನು ಎಂದೂ ತೆಗೆದುಕೊಳ್ಳುವುದಿಲ್ಲವೆಂದು ಅರಿವಾಯಿತು. ಸೂರ್ಯದೇವ ಮೇಲೇರಿದಂತೆ ಇರುವೆ ಗೂಡಿನ ಆಗು-ಹೋಗುಗಳು ಹೆಚ್ಚೆಚ್ಚು ಪ್ರಕಟ ವಾಗಲಾರಂಭಿಸಿದವು. ಅದೊಂದು ಆಳವಾದ ಬಾವಿಯಾಗಿರದೇ ನಾಲ್ಕಾರು ನೆಲಮಾಳಿಗೆಗಳಿರುವ ಗುಹಾಲಯದಂತಿತ್ತು. ಒಂದು ಮಹಡಿಯನ್ನು ಇನ್ನೊಂದರೊಂದಿಗೆ ಕಿರಿದಾಗಿ ಜೋಡಿಸಿದಂತೆ, ಒಂದು ಗುಹೆಯನ್ನು ಇನ್ನೊಂದರೊಂದಿಗೆ ಜೋಡಿಸಲಾಗಿತ್ತು. ಅಂದರೆ ಪ್ರತಿಯೊಂದು ವಾಸ ಸ್ಥಾನಕ್ಕೆ ಒಂದರಿಂದ ನಾಲ್ಕರವರೆಗೆ ಸುರಂಗ ಮಾರ್ಗಗಳಿದ್ದವು. ಇಂತಹ ಬೃಹತ್ ರಚನೆಗೆ ಯಾವುದೇ ತರದ ನಕಾಶೆ, ಪೂರ್ವ ಯೋಜನೆ, ತಜ್ಞರ ಸಲಹೆ, ಹಾರೆ, ಪಿಕಾಸು, ಗುದ್ದಲಿ, ಸಿಮೆಂಟು–ಉಕ್ಕುಗಳ ಸಹಾಯವಿಲ್ಲದೇ ಬೇಕಿಲ್ಲವೆಂದು ಅರಿತಾಗ ಈ ಮಣ್ಣಿನ ಮಕ್ಕಳ ಬಗ್ಗೆ ಗೌರವ ಹೆಚ್ಚಿ ಇನ್ನಷ್ಟು ಕುತೂಹಲ ಕೆರಳಿತು.

ಕುಟುಂಬ ಸಾಕಷ್ಟು ಹಿಗ್ಗಿರಬೇಕು. ಅಂತೆಯೇ ಜೀತದಾಳು ಇರುವೆ ಗಳು ಇನ್ನೊಂದು ಕೋಣೆಯನ್ನು ಅಗೆಯುವ ಸಿದ್ಧತೆಯಲ್ಲಿ ಇದ್ದವು. ಮೊಟ್ಟಮೊದಲಿನ ಕೋಣೆಯಿಂದ ಅದಕ್ಕೆ ಸುರಂಗ ಮಾರ್ಗವನ್ನು ನಿರ್ಮಿಸಿ ಕೊಂಡವು. ನಂತರ ದವಡೆ ಹಲ್ಲುಗಳಿಂದ ಮಣ್ಣಿನ ಕಣಗಳನ್ನು ಕಚ್ಚಿ, ಎಳೆದು ಅದು ಬೇರ್ಪಟ್ಟಾಗ ಕೆಳಗೆ ಎಸೆದವು. ಹೀಗೆ ಅಗೆದು ಹಾಕಿದ ಮಣ್ಣಿನ ಕಣಗಳನ್ನು ಬೇರೆ ಕೆಲಸಗಾತಿ ಇರುವೆಯರ ತಂಡ, ಎತ್ತಿಕೊಂಡು ಹೋಗಿ ಗೂಡಿನ ಹೊರಗೆ ಚೆಲ್ಲಿ ತಿರುಗಿ ಬರುತ್ತಿದ್ದವು. ಮಣ್ಣು ಗಟ್ಟಿ ಯಾಗಿ ದವಡೆ ಕೆಲಸ ಮಾಡದಾದಾಗ, ತಮ್ಮ ಎಂಜಲಿನಿಂದ ಅದನ್ನು ಒದ್ದೆ ಮಾಡಿಕೊಂಡು ನಂತರ ಅಗೆಯುತ್ತಿದ್ದವು. ಇದರಿಂದ ಗೂಡಿನ ಗೋಡೆಯ ಮಣ್ಣು ಒಣಗಿದ್ದರೂ, ಹೊರಗೆ ಚೆಲ್ಲಿದ ಮಣ್ಣು ತೇವವಾಗಿರುವುದು ವಾಡಿಕೆ. ಮಳೆಗಾಲದ ಆರಂಭದಲ್ಲಿ ಜೇಡಿಮಣ್ಣಿನಲ್ಲಿ ಅಲ್ಲಿ, ಇಲ್ಲಿ, ಎಲ್ಲ ಕಡೆಯಲ್ಲಿ ಇಂಥ ಜಿಗುಟು ಮಣ್ಣಿನ ಉಂಡೆಗಳನ್ನು ಕಂಡಿದ್ದರೂ ಅವು ಎಲ್ಲಿಂದ ಬಂದಿವೆಯೆಂದು ತಿಳಿಯುತ್ತಿರಲಿಲ್ಲ. ಇವನ್ನು ಉಪಯೋಗಿಸಿ

ಇರುವೆಗಳು ತಮ್ಮ ಗೂಡಿನ ವಿಸ್ತರಣೆಯಲ್ಲಿ ತೊಡಗಿವೆ ಎಂಬುದರ ಅರಿವು ಪ್ರಥಮ ಬಾರಿಗೆ ಆಯಿತು.

ಈ ವಿಸ್ತಾರವಾದ ಗವಿ, ರಾಣಿಯ ಶಯನಗೃಹವಿರಬೇಕು. ಅಂತೆಯೇ ಉಳಿದವುಗಳಿಗಿಂತ ಶುಭ್ರವಾಗಿದ್ದು, ಚಟುವಟಿಕೆಯಿಂದ ತುಂಬಿದೆ. ಹೊರಗೆ ತಿರುಗಾಡುವಿಕೆಯಿಂದ ರಾಣಿಗೆ ನಿರೀಕ್ಷಿಸಿದ್ದಕ್ಕಿಂತ ಅಧಿಕವಾಗಿ ದೇಹಶ್ರಮವಾಗಿರಬೇಕು. ಇದರಿಂದಾಗಿ ಪ್ರಸೂತಿ ನೋವು ಕಾಣಿಸಿಕೊಂಡಿದೆ. ಸೂಲಗಿತ್ತಿ ಇರುವೆಗಳು ಒಂದೊಂದಾಗಿ ಹೊರಬರುವ ಮೊಟ್ಟೆಗಳನ್ನು ಕುಶಲತೆಯಿಂದ ದವಡೆಗಳಲ್ಲಿ ಹಿಡಿದು ಕೂಡಲೇ ಇನ್ನೊಂದು ಖೋಲಿಗೆ ವರ್ಗಾಯಿಸಿ ತಿರುಗಿ ಧಾವಿಸಿ ಬರುತ್ತಿದ್ದವು. ಒಂದು, ಎರಡು, ಹತ್ತು, ಇಪ್ಪತ್ತು, ನೂರು, ಇನ್ನೂರು........ಲೆಕ್ಕಮಾಡಿ ಬಾಯಿ ನೋವಾದರೂ ರಾಣಿ, ತತ್ತಿಗಳನ್ನು ಹೊರಗೆ ಹಾಕುತ್ತಲೇ ಇತ್ತು! ನಮ್ಮ ಗೃಹಿಣಿಯರಿಗೆ ಒಂದೇ ಒಂದು ಮಗುವನ್ನು ಜಗತ್ತಿಗೆ ಒಪ್ಪಿಸಬೇಕಾದರೆ ಪ್ರಸೂತಿ ವೈರಾಗ್ಯ ಬಂದುಬಿಡುತ್ತದೆ. ಕೀರ್ತಿಗೊಬ್ಬ ಮಗ, ಆರತಿಗೊಬ್ಬ ಮಗಳು ಅಷ್ಟೇ ಸಾಕೆಂದು ನಿರ್ಧರಿಸಿದ ದಿನಗಳು ಬಂದರೂ ಸಮತಾವಾದದಲ್ಲಿ ವಿಶ್ವಾಸವಿಟ್ಟ ಸ್ತ್ರೀ-ಹೋರಾಟಗಾರ್ತಿಯರು, ಪುರುಷರ ಜೊತೆಗೆ, ದೈವವೂ ಸ್ತ್ರೀಯರಿಗಷ್ಟೇ ಪ್ರಸೂತಿ ವೇದನೆ ದಯಪಾಲಿಸಿ ಪಕ್ಷಪಾತ ಮಾಡಿದೆ! ಎಂದು ಗಂಟಲು ಕಿತ್ತು ಬರುವಂತೆ ಕಿರಚಿಕೊಳ್ಳುತ್ತಿದ್ದಾರೆ. ಇರುವೆ ರಾಣಿಯಂತೆ ಒಂದು ಊರಿನ ಪ್ರಜೆಗಳನ್ನೆಲ್ಲ ಒಂದೇ ತಾಯಿ ಪೂರೈಸುವಂತಹ ಪ್ರಸಂಗ ಬಂದಿದ್ದರೆ, ನಮ್ಮ ಹೆಂಗಳೆಯರ ಸ್ಥಿತಿ ಏನಾಗುತ್ತಿತ್ತು ಎಂದು ಕಲ್ಪಿಸಿಕೊಳ್ಳದೇ ಇರಲಾಗಲಿಲ್ಲ.

ಪ್ರಸೂತಿ ಗೃಹದ ಪಕ್ಕದಲ್ಲಿಯೇ ಶಿಶುಪಾಲನಾ ಕೇಂದ್ರ. ಇಲ್ಲಿ ಎಲ್ಲ ವಯಸ್ಸಿನ ಶಿಶುಗಳೂ ಇದ್ದವು. ಅಕ್ಕಿ ರಾಶಿಯನ್ನು ಹೋಲುವ ಮೊಟ್ಟೆಗಳನ್ನು ಒಂದೆಡೆ ಶೇಖರಿಸಿ ಇಡಲಾಗಿತ್ತು. ಅವುಗಳೊಳಗಿನ ಮರಿಗಳ ಬೆಳವಣಿಗೆ ಸುವ್ಯವಸ್ಥಿತವಾಗಿ ಆಗುವ ಸಲುವಾಗಿ ಕೆಲಸಗಾರರು ಒಂದೊಂದೇ ಮೊಟ್ಟೆಯನ್ನು ದವಡೆಗಳಲ್ಲಿ ಕಚ್ಚಿಹಿಡಿದು, ಗಾಳಿ-ಬೆಳಕುಗಳಿಗಾಗಿ ಹೊರಗೊಯ್ದು ತಂದು ಇನ್ನೊಂದೆಡೆಗೆ ಇಡುತ್ತಿದ್ದವು. ಈ ಮೊಟ್ಟೆಗಳು ತೀರ

ನಾಜೂಕಾಗಿರುವುದರಿಂದ, ಹಿಡಿತ ಸ್ವಲ್ಪವೂ ಹೆಚ್ಚಾಗದಂತೆ ನೋಡಿಕೊಳ್ಳ ಬೇಕು. ಇಲ್ಲವಾದರೆ ಅದು ಒಡೆದು ನಾಶವಾಗುವುದು ಖಂಡಿತ. ನರ್ಸಮ್ಮ ಇರುವೆ, ಈ ನಯ ನಾಜೂಕು ಹುಟ್ಟಾ ಪಡೆದಿರುತ್ತಾಳೆ! ಮೊಟ್ಟೆಯೊಳಗೆ ಮರಿಯ ಬೆಳವಣಿಗೆ ಆಗದಿದ್ದರೆ, ಅವು ಕಪ್ಪಿಟ್ಟುಕೊಳ್ಳುತ್ತವೆ. ಅಂತಹವು ಗಳನ್ನು ಹಿಂದೆ ಮುಂದೆ ನೋಡದೇ ತಿಪ್ಪೆ ರಾಶಿಗೆ ಎಸೆದು ಬಿಡುತ್ತವೆ. ಮೊಟ್ಟೆಯೊಡೆದು ಬಂದ ಮರಿಗಳಿಗೆ ಕೆಲಸಗಾತಿಯರು ಎಂಜಲಿನ ಸ್ನಾನ ಮಾಡಿಸಿ ಸಿಹಿಗುಟುಕು ಕೊಡುತ್ತವೆ. ಈ ಮರಿ, ಮೊಟ್ಟೆಯಂತೆಯೂ ಇರದೇ, ಇರುವೆಯನ್ನೂ ಹೋಲದೇ ಹುಳದಂತಿರುತ್ತದೆ. ತಿಂದುಂಡು ದಷ್ಟಪುಷ್ಟವಾದ ಮರಿಗಳಿಗೆ ಪ್ರೌಢ ಇರುವೆಯ ಕೈ-ಕಾಲು, ಕಣ್ಣು-ಮೀಸೆ ಗಳು ಕಾಣಲಾರಂಭಿಸಿದವು. ಈ ಬದಲಾವಣೆಗಳು ನಡೆಯುವಾಗ, ಅವು ತಿನ್ನುಣ್ಣದೇ ನಿದ್ರಾವಸ್ಥೆಯಲ್ಲಿ ಇರುತ್ತವೆ. ಕ್ರಮೇಣ ಅದರ ಶ್ವೇತಬಣ್ಣ ನಸುಗಪ್ಪಿಗೆ ಪರಿವರ್ತನೆ ಪಡೆಯಿತು. ಮೈಯ ಪರೆಯನ್ನು ಕಿತ್ತೊಗೆದು ಹೊರಗೆ ಬರಲಾಗದ ಮರಿ ಇರುವೆಗಳಿಗೆ ಕೆಲಸಗಾತಿಯರೇ ಹಾಗೆ ಮಾಡಲು ಸಹಾಯ ಮಾಡುತ್ತವೆ. ಎಲ್ಲ ಬೆಳವಣಿಗೆಯ ಹಂತಗಳನ್ನು ಒಂದೇ ಸ್ಥಳದಲ್ಲಿ ಕಾಣುವಂತಾದ್ದರಿಂದ ತಾಯಿ-ಇರುವೆ ಏಕಪ್ರಕಾರವಾಗಿ ತತ್ತಿ ಗಳನ್ನು ಇಡುತ್ತಲೇ ಇರುವುದೆಂದು ಖಚಿತವಾಯಿತು.

ಇರುವೆಗಳ ಸಾಮ್ರಾಜ್ಯ ಪರೀಕ್ಷಿಸುತ್ತಿದ್ದಾಗ ಒಮ್ಮಿಂದೊಮ್ಮೆ ಕಾರ್ಮೋಡಗಳು ಕವಿದು ಸೂರ್ಯನನ್ನು ಅಡ್ಡಗಟ್ಟಿದ್ದರಿಂದ ಒಳಗವಿಯ ಆಗು-ಹೋಗುಗಳು ಕಾಣದಂತಾದವು. ಮೋಡಗಳು ಚದುರಿ ಹೋಗಲಿ ಎಂದು ಕಾದಿದ್ದಾಗ, ತುಂತುರು ಮಳೆಗೆ ಆರಂಭವಾಯಿತು. ಕೆಲಸದ ಮೇಲೆ ಹೊರಗೆ ಹೋಗಿದ್ದ ಸದಸ್ಯ ಇರುವೆಗಳೆಲ್ಲ ವೇಗವಾಗಿ ಬಂದು ಗೂಡು ಸೇರಿಕೊಳ್ಳುತ್ತಿದ್ದಂತೆ ಮಳೆ ಜೋರಾಯಿತು. ಓಡಿ ಹೋಗಿ ಮನೆ ಸೇರಿಕೊಳ್ಳಬಹುದಾಗಿತ್ತು. ಆದರೆ ಇರುವೆಗಳ ಜೊತೆಗೇ ಮಾವಿನ ಮರದ ಆಶ್ರಯದಲ್ಲಿ ನಿಲ್ಲುವ ಮನಸ್ಸಾಯಿತು. ಗಗನ ಮಂಡಲಕ್ಕೇ ತೂತುಬಿದ್ದಂತೆ ನೀರು ಸುರಿಯಲಾರಂಭಿಸಿದಾಗ, ಕಾಲಿಗೆ ಅಪ್ಪಣೆ ಕೊಡಲೇ ಬೇಕಾಯಿತು. ಮನೆಸೇರಿ, ಒದ್ದೆ ಬಟ್ಟೆಗಳನ್ನು ಹಿಂಡಿ ಹಾಕುತ್ತಿದ್ದಂತೆ,

ಇಂಥ ಮಳೆ ಬಿದ್ದಾಗ ಇರುವೆಗಳು ಏನು ಮಾಡುತ್ತವೆ? ಎಂಬ ಸಮಸ್ಯೆ ಕಾಡತೊಡಗಿತು. ಒಂದು ತಾಸು ಜಡಿ ಮಳೆ ಹೊಡೆದ ನಂತರ, ಸ್ವಲ್ಪ ಹೊಳವು ಆದಾಗ, ಕೊಡೆ ಹಿಡಿದು ಅದೇ ಸ್ಥಳಕ್ಕೆ ಧಾವಿಸಿದೆ. ಅದೊಂದು ರುದ್ರಭೂಮಿಯಾಗಿ ಮಾರ್ಪಟ್ಟಿತ್ತು. ಸಣ್ಣ ಸಣ್ಣ ಮಡುವುಗಳಲ್ಲಿ ಇರುವೆಗಳ ಹೆಣಗಳು ಏಕಪ್ರಕಾರವಾಗಿ ತೇಲುತ್ತಿದ್ದವು. ಅಬ್ಬರದ ಗಾಳಿಯಿಂದ ಚಿಕ್ಕ ಚಿಕ್ಕ ಅಲೆಗಳೆದ್ದಾಗ, ಇವು ಇನ್ನೂ ಜೀವ ಹಿಡಿದುಕೊಂಡಿರಬಹುದೇ? ಎಂದು ಭಾಸವಾಗುತ್ತಿತ್ತು. ಕೆಲ ಇರುವೆಗಳು ಉದುರಿದ ಎಲೆಗಳನ್ನೇ ತೆಪ್ಪಗಳಂತೆ ಬಳಸಿ, ಸಾವು-ಬದುಕುಗಳ ನಡುವೆ ಹೋರಾಟ ನಡೆಸಿದ್ದವು.

ಇಂತಹ ಭಾರೀ ಮಳೆಗೂ ಗೂಡು ಕುಸಿಯದೇ ತಲೆ ಎತ್ತಿ ನಿಂತಿರುವದು ಆಶ್ಚರ್ಯದ ಸಂಗತಿ. ಗವಿಗಳನ್ನು ಅಗೆದ ಮಣ್ಣಿನಲ್ಲಿ ಎಂಜಲು ಸೇರಿಸಿ, ಹೊರಗಿನ ಗೋಪುರಗಳನ್ನು ರಚಿಸಿದ್ದರಿಂದ ಅದಕ್ಕೆ ಹೆಚ್ಚಿನ ಗಟ್ಟಿತನ ಬಂದಿರಬೇಕು. ಆದರೆ ಧಾರಾಳವಾಗಿ ನೀರು ಒಳಗೆ ನುಗ್ಗಿದ್ದರಿಂದ, ಒಂದು ಚಿಕ್ಕ ಮಡುವೇ ಅಲ್ಲಿ ನಿಂತಿತ್ತು. ಮೋಜಿನ ಸಂಗತಿಯೆಂದರೆ, ಅಂತರ್ ಗುಹಾಲಯದ ದಾರಿಗಳು ಸತ್ತ ಇರುವೆಗಳ ದೇಹದಿಂದ ಮುಚ್ಚಲ್ಪಟ್ಟಿದ್ದವು. ಉದ್ದಾಲಕನ ಕಾರ್ಯನಿಷ್ಠತೆಯಿಂದ ಒಳಗವಿಯೊಳಗೆ ನೀರು ನುಗ್ಗದಂತೆ ದಾರಿ ಅಡ್ಡಗಟ್ಟಿ ಇವು ಮೃತಪಟ್ಟವೇ, ಇಲ್ಲವೇ ಜಲಸಮಾಧಿಯಾಗುವುದನ್ನು ತಪ್ಪಿಸಲು ಹೊರಬರುವಾಗ ಕಂಗೆಟ್ಟು ಅಲ್ಲಿಯೇ ಪ್ರಾಣಬಿಟ್ಟವೇ, ಎಂದು ಹೇಳುವುದು ಕಷ್ಟ. ರಾಣಿಯ ಸಂರಕ್ಷಣೆಗಾಗಿಯೇ ಇಷ್ಟೆಲ್ಲ ತ್ಯಾಗ ಮಾಡಿದ್ದರೆ, ಅವುಗಳ ಕರ್ತವ್ಯ ಬುದ್ಧಿಗೆ ತಲೆದೂಗಲೇಬೇಕು. ಸಾವಿರಾರು ವರ್ಷಗಳ ಹಿಂದೆ ಮಣ್ಣುಮುಕ್ಕಿದ ಮೊಹೆಂಜೊದಾರೋ, ಹರಪ್ಪಾ ನಗರಗಳಿಗಾಗಿ ಮಾನವನು ಇಂದಿಗೂ ಕಸಿವಿಸಿಪಡುತ್ತಿರುವ ಪ್ರತಿ ಮಳೆಗಾಲದಲ್ಲಿಯೂ ನೂರಾರು, ಸಾವಿರಾರು ಇರುವೆಗಳ ಕೋಟೆಗಳು ನೆಲಸಮವಾಗುತ್ತವೆ. ಅವು ಒಂದಿಷ್ಟು ಧೃತಿಗೆಡದೇ ತಿರುಗಿ ತಮ್ಮ ಗೂಡು ಕಟ್ಟಿ ರಾಜ್ಯವಾಳಲಾರಂಭಿಸುವವು. ನಮ್ಮಲ್ಲಿರುವಂತೆಯೇ ಅವುಗಳ ಇತಿಹಾಸ, ವಂಶಾವಳಿ, ದಿನಾಂಕ, ಸಾಹಸ-ಯುದ್ಧಗಳ ವಿವರ ಬರೆದಿಡುವ ಪರಿಪಾಠ ಇದ್ದರೆ ಇರುವೆ ವಿದ್ಯಾರ್ಥಿಗಳೆಲ್ಲ ನಾಪಾಸಾಗಿ ಬಿಡುತ್ತಿದ್ದವೋ ಏನೋ !

## 19. ಬಹುಸಂತಾನಿ ಅರಸಿ

ಸಂಜೆಗತ್ತಲಿನಲ್ಲಿ ದೀಪಹಚ್ಚಲೂ ಮನಸ್ಸಾಗದೇ ಅಂದು ನಡೆದ ದುರಂತವನ್ನು ಜ್ಞಾಪಿಸಿಕೊಳ್ಳುತ್ತಿದ್ದಂತೆ, ಕೀಟ ತಂಡ ಬಂದು ಹಾರುತ್ತ ಎತ್ತಲೋ ಹೋಯಿತು. ಲಗುಬಗೆಯಿಂದ ಕೈ ಬಲೆಯಿಂದ ಒಂದೆರಡು ಹಿಡಿದು ನೋಡಿದಾಗ ಅವುಗಳಿಗೆ ಇರುವೆಗಳಿಗಿರಬೇಕಾದ ಎಲ್ಲ ಗುಣಧರ್ಮ-ಗಳಿದ್ದರೂ ಇಂಥ ಕೀಟಗಳನ್ನು ಈ ಮೊದಲು ನೋಡಲೇ ಇಲ್ಲವಲ್ಲ! ಎನಿಸಿತು. ಸೂಕ್ಷ್ಮದರ್ಶನದಿಂದ ವಿವರವಾಗಿ ಪರೀಕ್ಷಿಸಲು ದೀಪ ಹಚ್ಚಿದಾಗ, ಇನ್ನೊಂದು ಗುಂಪು ದೀಪದ ಸುತ್ತ ಹಾರಾಡುತ್ತ ನರ್ತಿಸಲಾರಂಭಿಸಿತು. ಅದೇ ಯೌವನದ ಹೊಸ್ತಿಲಲ್ಲಿ ಕಾಲಿಟ್ಟ, ರೆಕ್ಕೆಗಳನ್ನು ಪಡೆದ ರಾಣಿ ಇರುವೆಗಳೆಂಬ ಗುಟ್ಟು ತಿಳಿದು ಖುಷಿಯಾಯಿತು. ಅವುಗಳ ಜೊತೆಗೆ ಪರಪುಷ್ಟ ಜೀವಿಗಳಂತೆ ಗೂಡಿನಲ್ಲಿ ವಾಸಿಸುತ್ತಿದ್ದ ಗಂಡಿರುವೆಗಳೂ ಇದ್ದವು. ತಮ್ಮ ಪ್ರತಿ ಬೇಕು-ಬೇಡಗಳಿಗೂ ಈ ದುಡಿಮೆಗಾತಿಯರನ್ನೆ ನಂಬಿದ ಪುರುಷಕೋಟಿ ಚಟುವಟಿಕೆ. ಲವಲವಿಕೆಯಿಂದ ಹಾರಾಡುತ್ತಲೇ ಇತ್ತು. ಇದೆಲ್ಲ ಭಾವಿರಾಣಿಯೊಬ್ಬಳ ವಶೀಕರಣಕ್ಕಾಗಿ, ಎಂದು ಅರಿತಾಗ ಮೋಜೆನಿಸಿತು. ಐದು ಅಡಿ ಎತ್ತರ, ಐವತ್ತು ಕಿಲೋ ಭಾರದ ಪುರುಷನೋರ್ವನು ಇಪ್ಪತ್ತೈದು ಅಡಿ ಎತ್ತರ ಮತ್ತು ಐದುನೂರು ಕಿಲೋ ಭಾರದವಳನ್ನು ಬಿಗಿದಪ್ಪಿ ಮುದ್ದಿಸಲು ಯತ್ನಿಸುತ್ತಿದ್ದಂತೆ ಇತ್ತು ಈ ಸನ್ನಿವೇಶ !

ಪಾಶ್ಚಾತ್ಯರಿಗೆ ತಮದೊಂದು ವೈಶಿಷ್ಟ್ಯಪೂರ್ವ ವಿವಾಹವಾಗಬೇಕು ಎಂದು ಹಂಬಲ ಬಹಳ. ಅಂತೆಯೇ ಆಟದ ಬಯಲಲ್ಲಿ, ಸರ್ಕಸ್‌ತಂಬುವಿನಲ್ಲಿ, ಅಂತರಿಕ್ಷದಲ್ಲಿ, ಈಜುಗೊಳದಲ್ಲಿ, ಗಗನವಿಹಾರದಲ್ಲಿ ಮದುವೆ ಮಾಡಿಕೊಳ್ಳುತ್ತಾರೆ. ನಾಲ್ಕೆಂಟು ಬಾರಿ ವಿವಾಹವಾಗುವುದು, ನಲವತ್ತೆಂಟು ಗಂಟೆಗಳನ್ನು ಹಾಸಿಗೆಯಲ್ಲಿ ಕಳೆಯುವುದು ಮತ್ತು ಅಂತರಾಷ್ಟ್ರೀಯ ದಾಖಲೆ ಸ್ಥಾಪಿಸುವುದು ಅವರ ವೈಚಿತ್ರ್ಯ. ಇರುವೆ-ಪ್ರೇಮಿಗಳ ದಾಖಲೆಯೂ ರಂಜಕವಾದದ್ದು. ಹಾರುತ್ತಲೇ ಜೋಡಿಯಾಗಿ, ಕಾಮಜ್ವರದಿಂದ ಭಾರವಾಗಿ ಭೂಮಿಗಿಳಿದು ಬಂದರೂ ಪ್ರೇಮ ಬಂಧನಕ್ಕೆ ಒಂದಿಷ್ಟೂ ಚ್ಯುತಿ ಬರುವುದಿಲ್ಲ. ಗಂಡು ಇರುವೆಗಳು ಏಕ ಪತ್ನಿತ್ವ ಪಾಲಿಸಿದರೆ, ರಾಣಿಯರೂ ಪತಿವ್ರತಾಧರ್ಮದವರು. ಪುರುಷ ಇರುವೆಗೆ ತನ್ನ ಜೀವನದ ಏಕಮಾತ್ರ ಧ್ಯೇಯ ಪೂರೈಸಿದ ನಂತರ, ಮುಂದೇನು ಮಾಡಬೇಕೆಂದು ಅರಿಯದೇ ತತ್ತರ-ವೆತ್ತರ ಕಾಲು ಹಾಕುತ್ತ ಅತ್ತಿಂದಿತ್ತ ಹಾರಲಾರಂಭಿಸುತ್ತದೆ. ವಿಪರೀತ ಹಸಿವಿದ್ದರೂ ಆಹಾರ ಪೂರೈಸಲು ಕೆಲಸಗಾತಿಯರು ಇಲ್ಲದ್ದರಿಂದ ಕಲ್ಲುಸಂದಿ, ಗೋಡೆಯ ಬಿರುಕುಗಳಲ್ಲಿ ಆಶ್ರಯ ಪಡೆಯಲು ಯತ್ನಿಸಿವುವು. ಈ ಅಸಹಾಯ ಸ್ಥಿತಿಗಾಗಿಯೇ ಹೊಂಚು ಹಾಕಿಕೊಂಡಿದ್ದ ಕಪ್ಪೆ ಮತ್ತು ಹಲ್ಲಿಗಳು ಇವನ್ನು ತಿಂದು ತೇಗುತ್ತವೆ.

ಇರುವೆಗಳಲ್ಲಿ ಗಂಡು ಅಬಲ ಮತ್ತು ಹೆಣ್ಣು ಸಬಲವೆಂದು ನವರಾಣಿಗಳು ಸಿದ್ಧಪಡಿಸಿದವು. ಕಪ್ಪೆ, ಹಲ್ಲಿ, ಓತಿಕೇತಗಳು ಬಾಯಿ ತೆರೆದುಕೊಂಡೇ ಕಾಯುತ್ತಿದ್ದರೂ ಅವುಗಳ ಕಣ್ಣಿಗೆ ಮಣ್ಣೆರಚುವಂತೆ, ತಮ್ಮ ರೆಕ್ಕೆಗಳನ್ನು ಕಳಚಿ, ವೈರಿಗಳ ಲಕ್ಷ ಅತ್ತ ಹೋದಾಗ ಸೂಸುಮಣ್ಣಿನಲ್ಲಿ ಕಣ್ಮರೆಯಾಗಿ ಬಿಡುತ್ತಿದ್ದವು. ಒಂದು ತಂಡದಲ್ಲಿ ನೂರಾರು ಹೆಣ್ಣಿರುವೆಗಳಿರುವುದರಿಂದ ಅವುಗಳಲ್ಲಿ ಕೆಲವಾದರೂ ಸುರಕ್ಷಿತ ಸ್ಥಳ ಮುಟ್ಟುವಂತಾಗುತ್ತದೆ. ಗೂಡಿನಲ್ಲಿ ರಾಣಿಯೇ ಸಂತಾನೋತ್ಪತ್ತಿ ಕೇಂದ್ರಬಿಂದುವಾಗಿರುವುದಲ್ಲದೇ ಎಲ್ಲ ಚಟುವಟಿಕೆಗಳನ್ನು ಅವಳೇ ನಿಯಂತ್ರಿಸುವುದರಿಂದ ಜೇನ್ನೊಣದ ರಾಣಿಯಂತೆ ಇರುವೆ ರಾಣಿಯನ್ನು ವಶಪಡಿಸಿಕೊಂಡರೆ ಒಂದು ಗೂಡನ್ನು ಪ್ರಾರಂಭಿಸಬಹುದೇ ಎಂಬ ವಿಚಾರದಿಂದಲೇ ಗೆಲುವಾಯಿತು. ಆದರೆ ಈ

ಅವಕಾಶಕ್ಕಾಗಿ ಬೇಕಾದ ಸಿದ್ಧತೆಯಿಲ್ಲದ್ದರಿಂದ ಯುವ ರಾಣಿಯನ್ನು ಸುರಕ್ಷಿತತೆಗಾಗಿ ಬೆಂಕಿಪೆಟ್ಟಿಗೆಯೊಂದನ್ನು ಖಾಲಿಮಾಡಿ ಅದಕ್ಕೆ ಸೇರಿಸ ಬೇಕಾಯಿತು. ಹಿಂದಿನ ಅನುಭವದಲ್ಲಿ ರಾಣಿ ಇಲ್ಲದೇ ಕೆಲಸಗಾರರು ತಮ್ಮ ಗೂಡನ್ನು ಸೇರುವ ಯತ್ನದಲ್ಲಿ ಮಡಿದಿರಬೇಕೆಂದು ಜ್ಞಾನೋದಯ ವಾಗಿತ್ತು. ಅಲ್ಲದೇ ಗೂಡಿನಲ್ಲಿ ಕತ್ತಲಿರುವುದನ್ನು ಅವು ಇಷ್ಟಪಡುತ್ತವೆ ಯೆಂದು ಗಾಜಿನ ಭರಣಿಯ ಬದಲಾಗಿ, ಗುಹಾಲಯದಲ್ಲಿ ನಡೆಯುವ ಚಟು ವಟಿಕೆಗಳನ್ನು ನಿರೀಕ್ಷಿಸಲು ಸಾಧ್ಯವಾಗುವಂತೆ, ಎರಡೂ ಕಡೆಗೆ ಗಾಜು ಕೂಡ್ರಿಸಲು ಸಾಧ್ಯವಾಗುವಂತೆ, ಮುರುಕು ಟೇಬಲ್ಲಿನ ಡ್ರಾಯರನ್ನು ಉಪ ಯೋಗಿಸಿದ್ದಾಯಿತು. ಇದರ ಹೊರಗೆ ಕಪ್ಪು ಕಾಗದ ಸೇರಿಸುವ ಏರ್ಪಾಡು ಮಾಡಿದ್ದರಿಂದ, ಬೇಕೆನಿಸಿದಾಗ ಅದನ್ನು ತೆಗೆದು ಇರುವೆಗಳ ಕಾರ್ಯಕಲಾಪ ಗಳನ್ನು ಅರಿಯಲು ಅನುಕೂಲವಾಯಿತು. ಒಳಗಡೆ ಹರಳುಗಳಿಲ್ಲದ ಸೂಸುಮಣ್ಣನ್ನು ಸೇರಿಸಿ ಹಿಡಿದಿಟ್ಟ ರಾಣಿಯು ಗೃಹಪ್ರವೇಶ ಮಾಡಿಸಿದಾಗ, ಅಲ್ಲಿ ಒಂದಿಷ್ಟೂ ಕಾಲಹರಣವಾಗದೇ ಮಿಂಗಡದ ಗುಡಿಯೊಂದನ್ನು ಕಟ್ಟ ಲಾರಂಭಿಸಿದಳು. ಒಂಟೀ ಜೀವನಕ್ಕೆ ಒಂದಿಷ್ಟೂ ಅಳುಕದೇ ಕಿರಿದಾದ ತಂಡಕ್ಕೆ ಅನುಕೂಲವಾದ ಕಿರಿಗೃಹವೊಂದನ್ನು ನಿರ್ಮಿಸಿದಳು. ಗೃಹದ ಸ್ವಚ್ಛತೆ, ಆಹಾರದ ಶೇಖರಣೆಯೆಲ್ಲ ಅವಳದೇ ಜವಾಬ್ದಾರಿ. ಹಸಿವಾದಾ ಗೊಮ್ಮೆ ಒಳಗಿಟ್ಟ ಗೋದಿರವೆಯ ಒಂದೊಂದು ಕಣವನ್ನು ತನ್ನ ಕೋಣೆಗೆ ಸಾಗಿಸಿ ನಂತರ ವಿರಾಮವಾಗಿ ಭೋಜನ ಮುಗಿಸುತ್ತಿತ್ತು. ಬಾಯಾರಿಕೆ ಯಾದಾಗ ಒದ್ದೆಮಾಡಿಟ್ಟ ಬೆಂಡು ಕಟ್ಟಿಗೆಯ ತುಂಡನ್ನು ದವಡೆಯಿಂದ ಹಿಂಡಿ ನೀರನ್ನು ಸೇವಿಸುತ್ತಿತ್ತು. ಈ ಆದಿಕರ್ತವ್ಯಗಳು ಮುಗಿದ ನಂತರ ಇರುವೆ ಮಾತೆ ಸಂತಾನೋತ್ಪತ್ತಿಯತ್ತ ಲಕ್ಷ ಹಾಕಿದಳು.

ಒಂದೊಂದಾಗಿ ಮೊಟ್ಟೆಗಳನ್ನು ಹೊರಗೆ ಹಾಕಿ ಅವು ಒಂದನ್ನೊಂದು ಅಂಟಿಕೊಳ್ಳದಂತೆ ಹರವಿ ಹಾಕಲಾರಂಭಿಸಿದಳು. ಸಾಕಷ್ಟು ಸಂಖ್ಯೆಯಲ್ಲಿ ಸಂಚಯವಾದಾಗ ಅವುಗಳ ಲಾಲನೆ ಪಾಲನೆ ಪ್ರಾರಂಭಿಸಿದಳು. ಗೂಡಿ ನಲ್ಲಿಯ ಆರ್ದ್ರತೆ ಅತಿ ಹೆಚ್ಚಾಗಿ ಮೊಟ್ಟೆಗಳು ಒದ್ದೆಯಾದರೆ ಅವುಗಳನ್ನು ಮೇಲಕ್ಕೆ ಒಯ್ದು ಒಣಗಿದ ನಂತರ ತಿರುಗಿ ತಂದಿಡುತ್ತಿತ್ತು. ಏನಾದರೂ

ಕಸ-ಕಡ್ಡಿ ಅಂಟಿಕೊಂಡರೂ ಕೂಡಲೇ ನಾಲಿಗೆಯಿಂದ ನೆಕ್ಕಿ ಶುಭ್ರಗೊಳಿಸು ತ್ತಿತ್ತು. ಮೊಟ್ಟೆಗಳು ಒಡೆದು ಮರಿಗಳಾದಾಗ ಅವುಗಳಿಗೆ ಸಕ್ಕರೆ ನೀರಿನ, ಜೇನಿನ ಗುಟುಕು ಕೊಡಲಾರಂಭಿಸಿತು. ಮರಿಗಳ ಚಟುವಟಿಕೆಗಳಿಗೆ ಸ್ಥಳಾ ಭಾವವೆನಿಸಿದ್ದರಿಂದ ಮತ್ತೊಂದು ಕೋಣೆಯನ್ನು ಜೋಡಿಸಿತು. ತಾಯ ಮೇಲ್ವಿಚಾರಣೆಯಲ್ಲಿ ಒಂದೊಂದಾಗಿ ಮರಿ ಇರುವೆ ಜನಿಸಿ ಓಡಾಡಲಾರಂಭಿ ಸಿದವು. ಇವುಗಳಲ್ಲಿ ರೆಕ್ಕೆಪಡೆದಿದ್ದ, ಸಂತಾನ ಪಡೆಯದ ಹೆಣ್ಣಿರುವೆಗಳು, ಇವೇ ಗೂಡಿನಲ್ಲಿ ದುಡಿಯುವ ಆಳುಗಳು, ತಾಯಿ ಇರುವೆ ಇವಕ್ಕೆ ಯಾವ ತರಬೇತಿ ಕೊಡದಿದ್ದರೂ ತಂತಮ್ಮ ಕೆಲಸಗಳನ್ನು ಹುಟ್ಟಾ ಕಲಿತುಕೊಂಡು ಬಂದಿದ್ದವು. ಗೃಹಸ್ವಚ್ಛತೆ, ಹೊಸ ಕೋಣೆಗಳ ನಿರ್ಮಾಣ, ತಾಯಿಯ ಊಟ-ತಿಂಡಿಗಳ ವ್ಯವಸ್ಥೆ ಮುಂತಾದವನ್ನು ಮುಂದಾಲೋಚನೆಯಿಂದ ಮಾಡಲಾರಂಭಿಸಿದವು. ಸ್ವಲ್ಪ ಅನುಭವ ಪಡೆದ ನಂತರ ಗೂಡಿನ ಹೊರಗೂ ಹೋಗಿ ಆಹಾರ ಸಂಚಯ ಮಾಡಲಾರಂಭಿಸಿದವು.

ಜನಸಾಮಾನ್ಯರಿಗೆ ರಾಣಿಯಾಗುವುದೆಂದರೆ ಅದೇನೋ ಆಕರ್ಷಣೆ, ಸಾಧನೆ, ಅನಿಸಿದರೂ ಆ ಪದವಿಗೇರಿದವರಿಗೆ ಸುಖ ದುಃಖಗಳ ನಿಕಟ ಪರಿ ಚಯವಾಗಿರುತ್ತದೆ. ಪ್ರಜೆಗಳಿಗಿರುವ ಯಾವ ಸ್ವಾತಂತ್ರ್ಯವೂ ಅವಳಿಗೆ ಇರದ್ದರಿಂದ ಬದುಕಿನ ಹೆಚ್ಚಿನ ಆಗು-ಹೋಗುಗಳಲ್ಲಿ ಅವಳು ಪಾಲುಗೊಳ್ಳು ವಂತೆಯೇ ಇಲ್ಲ. ಇಂಗ್ಲೆಂಡಿನ ಎಲಿಝಬೆತ್ ರಾಣಿಗೆ ಅಂಗರಕ್ಷಕರ ಸಮೂ ಹವೇ ಇಲ್ಲದೇ ಹೋಳಿಯಂಥ ಕಾರ್ಯಕ್ರಮದಲ್ಲಿ ಭಾಗವಹಿಸಲು ಸಾಧ್ಯವೇ ? ಇರುವೆಯರಸಿಯರಿಗೂ ಇದೇ ರೀತಿಯ ನಿರ್ಬಂಧಗಳು. ಸರ್ವ ಕಾಲದಲ್ಲಿ ಅಂಗರಕ್ಷಕ ದಳದವರು ಸುತ್ತುವರಿದೇ ಇರುತ್ತಾರೆ. ಗೂಡಿನ ಒಂದು ಭಾಗದಿಂದ ಇನ್ನೊಂದು ಭಾಗಕ್ಕೆ ರಾಣಿ ಹೋಗುವದಿದ್ದರೂ ಈ ಸಿಬ್ಬಂದಿಯ ಮೇಲ್ವಿಚಾರಣೆಯಲ್ಲೇ ಹೋಗಬೇಕು. ಅವು ಸೂಚಿಸಿದ ಮಾರ್ಗಬಿಟ್ಟು ಅತ್ತಿತ್ತ ರಾಣಿ ಹೋಗಲಾರಂಭಿಸಿದರೆ ಕಾಲು ಕಟ್ಟಿ, ಮೀಸೆ ಎಳೆದು ಎಚ್ಚರಿಸುತ್ತವೆ. ಒಮ್ಮೆ ರಾಣಿ ತನ್ನವರ ಕಣ್ಣಿಗೆ ಮಣ್ಣೆರಚಿ ಸ್ವೇಚ್ಛಾ ಚಾರಿಯಾಗಲು ಗೂಡಿನಿಂದ ಪಲಾಯನ ಮಾಡಿದಳು. ಗೂಡಿನಲ್ಲಿ ಕೋಲಾಹಲವೆದ್ದು ಕೆಲಸಗಾತಿಯರು ನಾಲ್ಕು ದಿಕ್ಕಿನಲ್ಲಿಯೂ ತಮ್ಮರಸಿ

ಯನ್ನು ಅರಸಲು ಓಡಿದವು. ಅವಳನ್ನು ಪತ್ತೆ ಹಚ್ಚಿದ ಕ್ಷಣಾರ್ಧದಲ್ಲಿ ಇರುವೆಯು ಹಿಂಡೇ ಅಲ್ಲಿ ನೆರೆದು ಅವಳಿಗೆ ಚಲಿಸುವ ಸ್ವಾತಂತ್ರ್ಯವನ್ನು ಕೂಡ ಅನುಗ್ರಹಿಸದೇ ಆಹಾರಕ್ಕಾಗಿ ಒಯ್ಯುವ ಜಿರಳೆಯಂತೆ ಎತ್ತಿಕೊಂಡೇ ಗೂಡು ಸೇರಿದವು !

ಯಜಮಾನಿ, ಇಷ್ಟೊಂದು ನಿಯಂತ್ರಣಕ್ಕೆ ಒಳಪಟ್ಟರೂ, ಕೆಲಸಗಾತಿಯರಿಗೆ ಯಾವ ಮೇಲ್ವಿಚಾರಕರಾಗಲೀ, ನಿರ್ಬಂಧ, ಕಟ್ಟಳೆ-ಕಾನೂನುಗಳು ಇಲ್ಲದಿರುವುದು ಆಶ್ಚರ್ಯ. ಇದಕ್ಕೂ ವಿಸ್ಮಯದ ಸಂಗತಿ ಎಂದರೆ, ಇಷ್ಟೆಲ್ಲ ಸ್ವಾತಂತ್ರ್ಯ ಪಡೆದರೂ ಅವು ಸ್ವೇಚ್ಛಾಚಾರಿಯಾಗದೇ ಸದಾಕಾಲ ಕರ್ತವ್ಯಪಾಲನೆಯಲ್ಲೇ ಮಗ್ನವಾಗಿರುತ್ತವೆ. "ಕಾಯಕವೇ ಕೈಲಾಸ" ವೆಂದು ಯುಗಪುರುಷರು ಮಾನವನಿಗೆ ಹೇಳಿಕೊಡಬೇಕಾದರೆ, ಈ ಪುಟ್ಟ ಜೀವಿಗಳು ಸಹಸ್ರಾರು ವರ್ಷಗಳಿಂದ ಅದನ್ನು ರೂಢಿಸಿಕೊಂಡು ಬಿಟ್ಟಿವೆ. ಒಂದು ದೃಷ್ಟಿಯಿಂದ ಇದು ಅರಸಿಯ ರಾಜ್ಯವೆನ್ನುವುದಕ್ಕಿಂತ ಪ್ರಜಾ ಪ್ರಭುತ್ವ ಎನ್ನುವುದೇ ಮೇಲಲ್ಲವೇ ? ತಾನು ಬಂಜೆಯಾದರೂ ಮಹಾ ತಾಯ ಬಾಣಂತನ ನಡೆಸುವುದು. ತನ್ನ ಉದರ ತೀರ ಚಿಕ್ಕದಾದರೂ, ಇಡೀ ಗೂಡಿಗಾಗಿಯೇ ಆಹಾರ ದೊರಕಿಸುವುದು, ತನಗೆ ಆರಾಮ ಜೀವನ ವಿಲ್ಲದಿದ್ದರೂ, ಗಂಡಿರುವೆಗಳ ಎಲ್ಲ ಬೇಕುಗಳನ್ನು ಪೂರೈಸುವುದು, ತನ್ನ ಸುರಕ್ಷತತೆಯನ್ನು ಕಡೆಗಣಿಸಿ ತೀರ ಅಸಾಧ್ಯವಾದ ಕಡೆಯಲ್ಲೆಲ್ಲ ಓಡಾಡು ವುದು. ಸ್ವಂತಕ್ಕೆ ಸಂಚಕಾರ ಬಂದರೂ ಅರಸಿಯನ್ನು ಸಂರಕ್ಷಿಸುವುದು. ಮಹಾಪೂರದಂತಹ ಸಂದರ್ಭದಲ್ಲಿ ಬಲಿಯಾಗಿ ಆದರೂ ಅರಸಿಯನ್ನು ರಕ್ಷಿಸುವುದು. ಅದೆಂತಹ ಸೇವಾಬುದ್ಧಿ ! ಮಾನವನಲ್ಲಿ ಈ ಪರೋಪಕಾರ ವೃತ್ತಿಯ ಒಂದಂಶವಾದರೂ ಇಳಿದು ಬಂದರೆ ಅವನ ಪ್ರಜಾಪ್ರಭುತ್ವದ ಸೋಗಿಗೆ ಸ್ವಲ್ಪವಾದರೂ ಅರ್ಥವಿರುತ್ತಿತ್ತು. ಸಾಹುಕಾರನಿಂದ ಸರಕಾರದ ವರೆಗೆ ಎಲ್ಲರೂ ಸ್ವಾರ್ಥಿಗಳಾದ್ದರಿಂದ ಪರೋಪಕಾರಕ್ಕೆ, ಸೇವೆಗೆ, ತ್ಯಾಗಕ್ಕೆ ಎಲ್ಲಿಯ ಸ್ಥಾನ ?

ಎಲ್ಲ ಕೆಲಸಗಳು ಸಾಂಗವಾಗಿ ನಡೆಯಲಾರಂಭಿಸಿದಾಗ ಅರಸಿ ಪುನಃ ಸಂತಾನ ನಿರ್ಮಾಣದಲ್ಲಿ ತೊಡಗಿತು. ಸೇವಕಿಯರು ಸಂಗ್ರಹಿಸಿ, ತಂದು

ತಿನಿಸಿದ ರುಚಿರುಚಿಯಾದ ಆಹಾರ ಸೇವನೆಯಿಂದಾಗಿ ರಾಣಿಯ ಅಂಗಾಂಗ ಗಳಲ್ಲಿ ಕೊಬ್ಬು ತುಂಬಲಾರಂಭಿಸಿತು. ಗರ್ಭದಲ್ಲಿ ಹೆಚ್ಚು ಹೆಚ್ಚು ಮೊಟ್ಟೆ ಗಳು ಪಕ್ವವಾಗಲಾರಂಭಿಸಿದಾಗ, ತೂಕವೂ ಏರಿತು. ಆದರೆ ಏರಿದ ಈ ತೂಕ ಅರಸಿಗಾಗಲಿ, ಸೇವಕಿಯರಿಗಾಗಲಿ ಚಿಂತೆಗೆ ಕಾರಣವಾಗುವ ಬದಲು, ಇನ್ನೊಂದು ಬರಲಿ, ಮತ್ತೊಂದು ಬರಲಿ, ಎಂದು ತಮ್ಮ ಸೋದರಿಯರಿಗೆ ಸ್ವಾಗತ ನೀಡುತ್ತಲೇ ಇದ್ದರು. ಅಕ್ಕಂದಿರ ಲಾಲನೆ-ಪಾಲನೆಯಲ್ಲಿ ತಂಗೆಂದಿರು ಹೆಚ್ಚು ದೃಢಕಾಯವಾಗಿ ಹುಟ್ಟಿದವು. ಆದ್ದರಿಂದ ಮೊದಲ ತಲೆಮಾರಿನ ಕೃಶಾಂಗಿಯರಾದ ಅಕ್ಕಂದಿರನ್ನು ಎರಡನೇ ತಲೆಮಾರಿನ ಮೈ ತುಂಬಿಕೊಂಡ ತಂಗೆಂದಿರಿಂದ ಬೇರ್ಪಡಿಸುವುದು ಏನೇನೂ ತೊಂದರೆಯೆನಿ ಸದು. ಒಮ್ಮೆ ಪ್ರೌಢಾವಸ್ಥೆಗೆ ಬಂದ ಇರುವೆಗೆ ತಿರುಗಿ ಬೆಳವಣಿಗೆ ಇಲ್ಲದ್ದ ರಿಂದ ಅವು ಜೀವನದುದ್ದಕ್ಕೂ ಒಂದೇ ಅಳತೆಯವಾದವು. ಹೊಟ್ಟೆಗೆ ಬಿದ್ದಾಗ ಸ್ವಲ್ಪ ಉಬ್ಬಿಕೊಂಡಂತೆ ಬರಗಾಲದಲ್ಲಿ ಸ್ವಲ್ಪ ಬಡಕಲಾಗಿ ತೋರ ಬಹುದು. ಆ ಮಾತು ಬೇರೆ. ಮಾನವನು ಹುಟ್ಟಿದ ಆಕಾರದಲ್ಲೇ ಇರು ವಂತಾಗಿದ್ದರೆ ನಮ್ಮ ಸಮಾಜ ಹೇಗೆ ಇರುತ್ತಿತ್ತು ಎಂಬ ಕಲ್ಪನೆಯೇ ಮೋಜಿನದು.

ರಾಣಿ ಯಂತ್ರದಂತೆ ಪೀಳಿಗೆಯನ್ನು ಸಿದ್ಧಪಡಿಸುತ್ತಲೇ ಇದ್ದರೂ ನಮ್ಮ ಸಮಾಜದಂತೆ ದುಡಿಮೆಯ ಆಳಿಗೆ ಬೇಡಿಕೆ ಅವಳ ಸಮಾಜದಲ್ಲಿ ಹೆಚ್ಚುತ್ತಲೇ ಇರುತ್ತದೆ. ಏರುತ್ತಿರುವ ಜನಸಂಖ್ಯೆಯಿಂದಾಗಿ ಹೆಚ್ಚಿನ ಆಹಾರ ಪೂರೈಕೆ, ಗೃಹವಿಸ್ತಾರ, ಸಂರಕ್ಷಣೆಗಳನ್ನು ಪೂರೈಸಲು ಕೆಲಸಗಾತಿ ಯರು ಅವಶ್ಯಕ. ಇರುವೆಗಳಿಗೆ ಜನಸಂಖ್ಯೆ ನಿಯಂತ್ರಣದಲ್ಲಿ ಇಟ್ಟು, ಇದ್ದ ಸೌಲಭ್ಯಗಳನ್ನು ಹಂಚಿಕೊಳ್ಳುವುದರಲ್ಲಿ ವಿಶ್ವಾಸವಿಲ್ಲದ್ದರಿಂದ ರಾಣಿ ಪ್ರಾರಂಭಿ ಸಿದ ಚಿಕ್ಕ ಸಂಸಾರ ಬೃಹದಾಕಾರ ತಳೆದರೂ ಚೊಕ್ಕಟವಾಗಿಯೇ ನಡೆಯು ತ್ತದೆ. ಜನ್ಮವೆತ್ತ ಸದಸ್ಯರಲ್ಲಿ ಅಧಿಕಾಂಶ, ಬಿಸಿಲಿನ ಬೇಗೆ, ಮಳೆ, ಮಹಾ ಪೂರ, ಸಣ್ಣ-ಪುಟ್ಟ ಅಪಘಾತ, ಮಾನವನ, ಪಶುಗಳ ತುಳಿತದಿಂದಾಗಿ ನಾಶ ಹೊಂದುವುದರಿಂದ, ಇವುಗಳನ್ನು ಹೋರಾಡಲು ರಾಣಿಯ ಹತ್ತಿರ ಇರುವ ಏಕಮೇವ ಬ್ರಹ್ಮಾಸ್ತ್ರವೆಂದರೆ ಬೃಹತ್ ಪ್ರಮಾಣದಲ್ಲಿ ಸಂತಾನೋತ್ಪತ್ತಿ.

ಇರುವೆಗೆ ಮೂತ್ರವೂ ಪ್ರಳಯವೇ ! ಕೇವಲ ಒಂದೇ ಬಾರಿ ಪತಿಯೊಂದಿಗೆ ಕೂಡಿಕೊಂಡು, ಲಕ್ಷಾವಧಿ ಮಕ್ಕಳನ್ನು ಪಡೆಯುವ ರಾಣಿಯ ಸಾಮರ್ಥ್ಯ ಅದ್ವಿತೀಯವಾದುದು. ಭಗವಾನ್ ಶ್ರೀಕೃಷ್ಣನಿಗೆ ಹದಿನಾರು ಸಾವಿರ ಗೋಪಿಯರು ನಲ್ಲೆಯರಾಗಿದ್ದರೂ, ಯಾವ ದೇವ-ದೇವತೆಯೂ ಹದಿನಾರು ಸಾವಿರ ಮಕ್ಕಳ ತಂದೆ-ತಾಯಿಯಾಗುವ ಸಾಹಸ ತೋರಿಸಲಿಲ್ಲ. ಆದರೆ ಪಿಪೀಲಿಕಾ ಮಾತೆ ವರ್ಷ ಒಂದರಲ್ಲಿ ಇದರ ಹತ್ತು ಪಟ್ಟು ಮಕ್ಕಳನ್ನು ಪಡೆಯುತ್ತಾಳೆ. ಆದ್ದರಿಂದ ಸಂಘಲಾಮಾತೆಯೆಂದು ಪೂಜಾರ್ಹತೆ ಪಡೆಯಬಹುದು ! ಕೆಲಸಗಾತಿಯರಿಗೆ ಗೃಹಕೃತ್ಯಗಳ ಕೆಲಸಗಳೊಂದಿಗೆ ಸಂರಕ್ಷಣೆಯ ಕೆಲಸವನ್ನೂ ನೋಡಿಕೊಳ್ಳಬೇಕಾಗುತ್ತದೆ. ಅದಕ್ಕೂ ಹೆಚ್ಚಾಗಿ ಇರುವೆಯರಸಿಯ ಸಾಮ್ರಾಜ್ಯ, ವಿಸ್ತಾರಗೊಂಡು ಹೆಚ್ಚಿನ ಸಂರಕ್ಷಣೆಯ ಅವಶ್ಯಕತೆ ಅನಿಸಿದಾಗ, ಹುಟ್ಟಿಕೊಳ್ಳುವ ತಲೆಮಾರುಗಳಲ್ಲಿ, ಹುಟ್ಟು ಹೋರಾಟದ ಆಯುಧಗಳನ್ನು ಧರಿಸಿದ ಸೈನಿಕರು ಹುಟ್ಟಿಕೊಳ್ಳುತ್ತಾರೆ. ಆಕಾರ ಮತ್ತು ವರ್ಣಗಳಲ್ಲಿ ಏಕಪ್ರಕಾರವಾಗಿ ಕಂಡರೂ, ಕೆಲವು ಮೊಟ್ಟೆಗಳಿಂದ ಸೈನಿಕರು ಹೇಗೆ ಬೆಳೆದು ಬರುತ್ತಾರೆ ಎಂದು ಅರಿವಾಗಲಿಲ್ಲ. ಬಹುಶಃ ಬೆಳೆಯುವ ಕೆಲವು ಮರಿಗಳಿಗೆ ಕೆಲಸಗಾತಿಯರು ವಿಶಿಷ್ಟ ಆಹಾರ ಪೂರೈಸುವುದರಿಂದ ಈ ಚಮತ್ಕಾರ ಸಾಧಿಸುತ್ತಿರಬಹುದೇ ಎಂಬ ಅನುಮಾನ ಬಂದರೂ ದೃಢೀಕರಿಸಲಾಗಲಿಲ್ಲ. ಕಾರ್ಮಿಕರಲ್ಲಿ ಬಾಹ್ಯರೂಪದಿಂದ ಹೆಣ್ಣಾದರೂ ಅವುಗಳಿಗೆ ಜನನೇಂದ್ರಿಯಗಳೇ ಇರುವುದಿಲ್ಲ. ಆದರೆ ಗೂಡಿಗೆ ಅತರ್ಗು ಪರಿಸ್ಥಿತಿ ಒದಗಿ ಬಂದಾಗ ಈ ಇರುವೆಗಳು ಪೌಷ್ಟಿಕವಾದ ಆಹಾರ ಪಡೆದರೆ, ಜನನೇಂದ್ರಿಯಗಳು ಬೆಳೆದು ರಾಣಿಯಾಗುವ ಅರ್ಹತೆ ಪಡೆಯುವರು. ಆದರೆ ಸೈನಿಕವರ್ಗದವರು ಮಾತ್ರ ಹುಟ್ಟು ನಪುಂಸಕರು. ಎಂತಹ ಸಂದರ್ಭಗಳಲ್ಲಿಯೂ ಸಂತಾನೋತ್ಪತ್ತಿಯಾಗಲೀ, ರಾಣಿಯಾಗುವುದಾಗಲಿ ಸಾಧ್ಯವಿಲ್ಲ. ನಮ್ಮಲ್ಲಿಯ ನಪುಂಸಕರನ್ನು ('ಅರೆಗಂಡು' ಎಂದು ಅವರನ್ನು ತಪ್ಪಾಗಿ ಸಂಬೋಧಿಸುವುದನ್ನು ರೂಢಿಸಿಕೊಂಡಿದ್ದೇವೆ!) ಡೋಲು ಬಾರಿಸಿ, ಹಾಡುತ್ತ, ನರ್ತಿಸುತ್ತ, ಕೆಲವೊಮ್ಮೆ ಅಶ್ಲೀಲವಾಗಿ ನರ್ತಿಸುತ್ತ, ಭಿಕ್ಷೆ ಬೇಡಲು ಬಿಡುವುದಕ್ಕಿಂತ, ಅವರನ್ನು ಪೋಲೀಸ್ ಪಡೆಯಲ್ಲಿ ಭರ್ತಿಮಾಡಿ

ದರೆ ಹೇಗೆ ? ಎಂಬ ವಿಚಾರ ಮಿಂಚಿ ಹೋಯಿತು. ಖೋಜಾಗಳು ಮೊಗಲರ ಅಂತಃಪುರದಲ್ಲಿ ಪ್ರಧಾನ ಪಾತ್ರವಹಿಸುತ್ತಿದ್ದರು.

ಇರುವೆಯ ಗೂಡು ಕೇರಿಯಂತಿದ್ದು, ಹಳ್ಳಿಯಾಗಿ, ನಗರವಾಗಿ, ಮಹಾನಗರದಷ್ಟು ಬೆಳೆದಾಗ ಗಂಡುಗಲಿಗಳು ಹುಟ್ಟಲಾರಂಭಿಸಿದವು. ಇವುಗಳಿಗೆ ಮಾತ್ರ ಹುಟ್ಟು ಜೋಡಿ ರೆಕ್ಕೆಗಳಿದ್ದವು. ಗೂಡಿನಲ್ಲಿ ಈ ಗಂಡಿಗೆ ಸಿಗುವ, ಆದರ, ಆತಿಥ್ಯ, ಮೇಲ್ವಿಚಾರಣೆಗಳನ್ನು ನೋಡಿದಾಗ, ಮುಂದಿನ ಜನ್ಮದಲ್ಲಿಯಾದರೂ ಗಂಡಿರುವೆಯಾಗಿ ಜನ್ಮ ತಾಳಬೇಕೆಂದು ಅನಿಸದೇ ಇರಲಿಲ್ಲ. ಆದರೆ 'ಗಂಡುತನ'ದ ಅದರ ಕಾರ್ಯ ಮುಗಿದಾಗ, ಅದರ ಶೋಚನೀಯ ಅಂತ್ಯವನ್ನು ಕಣ್ಣಾರೆ ಕಂಡಿದ್ದರಿಂದ, ಬೇಡಿದ ವರವನ್ನು ಶರವೇಗದಿಂದ ಹಿಂದೆಗೆದುಕೊಳ್ಳಬೇಕಾಯಿತು. ಗೂಡಿಗೆ ಕೆಲಸಗಾತಿಯರ ಅವಶ್ಯಕತೆ ಹೆಚ್ಚುತ್ತಿದ್ದಾಗ, ರಾಣಿಯ ಸಂತಾನೋತ್ಪತ್ತಿಯ ಸಾಮರ್ಥ್ಯ ಕುಗ್ಗಲು ಆರಂಭಿಸಿದಾಗ ಕೆಲವು ಯುವ ರಾಣಿಯರನ್ನು ಮತ್ತು ಗಂಡು ಇರುವೆಗಳನ್ನು ಗೂಡಿನಿಂದ ಹೊರಗೆ ಹಾಕುವ ಯತ್ನವನ್ನು ಪ್ರಾರಂಭಿಸುತ್ತದೆ–ಸೇವಕವರ್ಗ ಪುಸಲಾಯಿಸಿ, ಸಮಜಾಯಿಸಿ ಹೇಳಿಹೊರಟರೆ ಸರಿಹೋಯಿತು, ಇಲ್ಲವಾದರೆ ಕಾಲು ಕಚ್ಚಿ, ಮೀಸೆ ಹಿಡಿದೆಳೆದು ದೂಡಿಕೊಂಡು ಹೋಗಿ, ಗೂಡಿನಿಂದ ಹಾರಿಹೋಗುವಂತೆ ಮಾಡುವುದು ಸಾಮಾನ್ಯ. ಜೋಡಿಯಾಗಿ ಹಾರಿ, ಫಲವತಿಯಾಗಲಿರುವ ರಾಣಿಯರನ್ನು ಮಾತ್ರ, ರೆಕ್ಕೆಗಳನ್ನು ಕಚ್ಚಿ ಕಿತ್ತೊಗೆದ ನಂತರವೇ ಸ್ವಾಗತ ಮಾಡಿ ಗೂಡಿಗೆ ಕರೆದೊಯ್ಯಲಾಯಿತು. ಮೂರು ಯುವರಾಣಿಯರು ಮೊಟ್ಟೆಗಳನ್ನಿಡಲಾರಂಭಿಸಿದಾಗ ಜನಸಂಖ್ಯೆ ಭರದಿಂದ ಬೆಳೆಯಲಾರಂಭಿಸಿತು. ಆಗ ಸ್ಥಳಾಭಾವವೆನಿಸಿದ್ದರಿಂದ, ಇನ್ನೊಂದು ಗೂಡು ಕಟ್ಟುವ ಸಲುವಾಗಿ, ಕೆಲ ಪ್ರಜೆಗಳು ಹತ್ತಿರದಲ್ಲಿಯೇ ಇನ್ನೊಂದು ತಾಣವನ್ನು ಹುಡುಕಿಕೊಂಡವು.

ಪಯಣಕ್ಕೆ ಹೊರಟಾಗ ಎಲ್ಲಕ್ಕೂ ಮುಂದೆ ಅಂಗರಕ್ಷಕರು, ದವಡೆಗಳಲ್ಲಿ ಕಚ್ಚಿ ಹಿಡಿದ ಆಹಾರ ಸಾಮಗ್ರಿಯನ್ನು ಬೇರೆ ಪಂಗಡದವರು ಕಸಿದುಕೊಳ್ಳದಂತೆ ಆಚೆ-ಈಚೆ ಕಾಲ್ದಳದವರು ಹೊರಟಿದ್ದರು. ಇವುಗಳ ಹಿಂದೆ, ಬೆಳವಣಿಗೆಯ ವಿವಿಧ ಹಂತಗಳಲ್ಲಿ ಮರಿಗಳನ್ನು ಹೊತ್ತವರು ಹೊರಟಿದ್ದರು.

ಕೊನೆಯಲ್ಲಿ ಈರ್ವರು ರಾಣಿಯರನ್ನು ಅಂಗರಕ್ಷಕದಳದವರು ಸುತ್ತುವರಿದಿದ್ದರು. ಮದುವೆಯ ದಿಬ್ಬಣದಂತೆ ಹೊರಟ ಈ ಮೆರವಣಿಗೆಯನ್ನು ನಿಟ್ಟಿಸುವುದೇ ಮೋಜಾಯಿತು. ಪಾಪ ! ಒಬ್ಬ ರಾಣಿಗೆ ಈ ಪ್ರಯಾಣ ಅತಿ ಪ್ರಯಾಸಕಾರಿಯಾಗಿರಬೇಕು. ಅಥವಾ ಯಾವುದೋ ಕಾಯಿಲೆಗೆ ಬಲಿಯಾಗಿದ್ದರಿಂದ ಹೊಸ ಗೂಡಿನಲ್ಲಿ ಪ್ರವೇಶಿಸಿದ ಕೆಲವೇ ಗಂಟೆಯೊಳಗೆ ಮೃತಪಟ್ಟಳು. ಈ ಘಟನೆಯಿಂದ ಇಡೀ ಗೂಡೇ ಶೋಕಗ್ರಸ್ತವಾಯಿತು. ಅಂಗರಕ್ಷಕರು, ಅವಳನ್ನು ನಿದ್ರೆಯಿಂದ ಎಚ್ಚರಿಸಲು ಚಿವುಟುತ್ತ, ಎಳೆಯುತ್ತ ದೂಡುತ್ತಿದ್ದವು. ಈ ಎಲ್ಲ ಯುಕ್ತಿಯಿಂದಲೂ ಅವಳು ಎದ್ದೇಳದಿದ್ದಾಗ, ಹೊತ್ತುಕೊಂಡು ಗುರಿಯಿಲ್ಲದೇ ಅತ್ತಿತ್ತ ಓಡಿದವು. ಮೃತಪಟ್ಟ ರಾಣಿಯ ಶರೀರ ಒಣಗಿ, ಅಂಗಾಂಗಗಳು ಉದುರುವ ತನಕವೂ ಅವಳು ಇನ್ನಿಲ್ಲ ಎಂದು ಒಪ್ಪಿಕೊಳ್ಳಲು ಸಿದ್ಧವಿರಲಿಲ್ಲ. ಆ ದೃಶ್ಯ, ಸತ್ತ ಮರಿಯನ್ನು ಎತ್ತಿಕೊಂಡು ಮರದಿಂದ ಮರಕ್ಕೆ ಹಾರುವ ಕೋತಿ, ನೆನಪಿಗೆ ತಂದಿತು.

# 20. ದುಡಿಮೆಯ ಕೋಮಲಾಂಗಿನಿಯರು

ದಿನವೆಲ್ಲ ದುಡಿಯುವ ಇರುವೆಗಳು ವಿಶ್ರಾಂತಿ ಪಡೆಯುತ್ತವೆಯೇ ? ನಮ್ಮಂತೆ ಅವುಗಳೂ ನಿದ್ರಿಸುತ್ತವೆಯೇ ? ಅವುಗಳ ರಾತ್ರಿಯ ಚಟುವಟಿಕೆ ಗಳೇನು ? ಮೊದಲಾದ ಪ್ರಶ್ನೆಗಳಿಗೆ ಉತ್ತರ ಕಂಡುಕೊಳ್ಳಲು ರಾತ್ರಿಯೆಲ್ಲ ಜಾಗರಣೆ ಮಾಡದೇ ಬೇರೆ ಮಾರ್ಗವೇ ಇರಲಿಲ್ಲ. ತಿನ್ನಲು ಕಳ್ಳೇಕಾಯಿ, ಓದಲು ಪುಸ್ತಕ, ಪರೀಕ್ಷಿಸಲು ಪ್ರಖರವಾದ ದೀಪವಿಟ್ಟುಕೊಂಡು ಕುಳಿತಾಗ ಅವುಗಳ ನಿಶಾಜೀವನದ ಒಂದೊಂದೇ ದೃಶ್ಯಗಳು ಗೋಚರಿಸಹತ್ತಿದವು. ಗೂಡಿನಲ್ಲಿ ಬೆಳಕಿರುವುದನ್ನು ಅವು ಅಷ್ಟಾಗಿ ಮೆಚ್ಚಿಕೊಳ್ಳದಿದ್ದರೂ ತಣ್ಣಗಿನ ರಾತ್ರಿಯಲ್ಲಿ ದೀಪದಿಂದ ಹುಟ್ಟಿದ ಉಷ್ಣತೆ ಹಿತವಾಗಿರಬೇಕು. ಅಂತೆಯೇ ದೀಪದ ಸಮೀಪದ ಸ್ಥಳವನ್ನು ಆಕ್ರಮಿಸಲು ತಮ್ಮ ತಮ್ಮಲ್ಲಿ ಸ್ಪರ್ಧೆ ನಡೆಸಿ ದವು. ಎಲ್ಲವಕ್ಕೂ ಇವು ಸಾಧ್ಯವಾಗದಿದ್ದಾಗ, ಹಲವೊಂದು ಹತ್ತಿರದ ಹುಲ್ಲನ್ನೇರಿ, ಎಲೆಗಳಿಗೆ ಜೋತು ಬಿದ್ದವು. ಆ ದೃಶ್ಯ ಹೊಟ್ಟೆ ತುಂಬಿದ ಕೆಂಪುಮೂತಿ ಮಂಗಗಳು ಗಿಡಮಂಗನಾಟ ಆಡುವ ಆಟ ನೆನಪಿಗೆ ತರು ವಂತಿತ್ತು. ಒಂದು ತುತ್ತತುದಿಯನ್ನೇರಿ ಸುತ್ತಮುತ್ತಲಿನ ಆಗು–ಹೋಗು ಗಳನ್ನು ಹಕ್ಕಿಯಂತೆ ವೀಕ್ಷಿಸಿದರೆ, ಇನ್ನೊಂದು ಕೋತಿಯಂತೆ ಜೋತು ಬಿದ್ದು ತಿರಗು–ಮುರಗಾಗಿ ಜಗತ್ತನ್ನು ನೋಡಿದಾಗ ಹೇಗೆ ಕಾಣಿಸುತ್ತದೆ ಎಂದು ಪರೀಕ್ಷಿಸಿತು. ಮೂರು–ನಾಲ್ಕು ಎಳೆಯ ಇರುವೆಗಳು, ಹುಡುಗಿಯ ರಂತೆ ಗುಂಪು ಕಟ್ಟಿಕೊಂಡು ಕುಳಿತರೆ, ಇನ್ನೊಂದು ಬಹದ್ದೂರ್ ಗಂಡಿನಂತೆ ಒಂದೇ ಕಾಲಿನಿಂದ ಎಲೆ ಹಿಡಿದು ಜೋತು ಬಿದ್ದಿತು. ಮಗುದೊಂದು

ಎರಡೂ ಕಾಲಿನಿಂದ ಎಲೆಯನ್ನು ಬಾಗಿಸಿ ಉಯ್ಯಾಲೆಯಾಡಿತು. ಈ ಎಲ್ಲ ಮಂಗಚೇಷ್ಟೆ ಕೆಲಹೊತ್ತು ನಡೆಸಿ ಬೇಸರ ಬಂದಿರಬೇಕು. ಇಲ್ಲವೇ ನಿದ್ದೆ ಬಂದಿರಬೇಕು. ಕೆಲವು ಹಲ್ಲು ಕಿರಿದು, ನಾಲಿಗೆ ಹೊರಚಾಚಿ ಆಕಳಿಸಲಾರಂಭಿಸಿದಾಗ ಒಂದೊಂದಾಗಿ ಕೆಳಗಿಳಿದು ಬರಲಾರಂಭಿಸಿದವು.

ಮಾನವ ಸಮಾಜದಲ್ಲಿ ಹಲವರಿಗೆ ಮಲಗುವ ಪೂರ್ವದಲ್ಲಿ ಮೈಎಲ್ಲ ಕೆರೆದುಕೊಳ್ಳುವ ಚಟವಿರುತ್ತದೆ. ತಂಗಿ, ಪತ್ನಿ, ಇಲ್ಲವೇ ಗೆಳತಿಯಿಂದ ಬೆನ್ನು ತುರಿಸಿಕೊಂಡಾಗಲೇ ಅವರಿಗೆ ನಿದ್ರಾದೇವಿ ಪ್ರಸನ್ನಳಾಗುವಳು. ಸ್ವತಃ ಕೆರೆದುಕೊಂಡು, ತುರಿಸಿಕೊಂಡು ರಕ್ತಬರಿಸಿಕೊಳ್ಳುವವರೂ ಇದ್ದಾರೆ. ಇಂತಹ ಸುಖದ, ಸ್ನೇಹದ "ಕೆರೆತ" ಮಧ್ಯ ಪ್ರದೇಶದ ಬಸ್ತರ ಜಿಲ್ಲೆಯ ಕಾಡುಗಳಲ್ಲಿ ವಾಸಿಸುವ ಮುರಿಯರಲ್ಲಿ ಎದ್ದು ಕಾಣುತ್ತದೆ. ಅವರಲ್ಲಿ ಯುವಕ-ಯುವತಿಯರು ತಮಗಾಗಿಯೇ ಇದ್ದ ಘೋಟುಲಗಳಲ್ಲಿ ಸಹಜೀವನ ನಡೆಸುವುದರಿಂದ ನಿದ್ರಾಪೂರ್ವದಲ್ಲಿ ಹುಡುಗರಿಗೆ ಹುಡುಗಿಯರಿಗೆ ತಲೆ-ಬೆನ್ನು ಕೆರೆದು ನೇವರಿಸುವುದು ಮುಖ್ಯವಾದ ಚಟುವಟಿಕೆ. ಇರುವೆಗಳಲ್ಲಿಯೂ ಇಂತಹ ಹವ್ಯಾಸ ನೋಡಿ ಆಶ್ಚರ್ಯವಾಯಿತು. ಆನೆಯಂತೆ ಹಿಂಗಾಲ ಮೇಲೆ ನಿಂತು, ಮುಂಗಾಲು ಮಣಿಸಿ ನಮಿಸುವುದು, ಅದೇ ರೀತಿಯಲ್ಲಿ ಇರುವೆ ಯುವತಿಯೊಬ್ಬಳು ಕುಳಿತು, ಇನ್ನೋರ್ವ ಕೆಲಸಗಾತಿಯಿಂದ ಕೆರೆಸಿಕೊಳ್ಳುವ ಸುಖ ಪಡೆದಳು. ಮೀಸೆ ನೇವರಿಸಿಕೊಂಡು, ಕಪೋಲ, ಹಣೆ, ದವಡೆಗಳನ್ನು ನೇವರಿಸಿಕೊಂಡದ್ದಾಯಿತು. ಎದೆ, ಬೆನ್ನು ಹಿಂಭಾಗಗಳ ಸೇವೆ ಮುಗಿದ ನಂತರ ಕೈಕಾಲುಗಳದ್ದು ಆಯಿತು. ಇಷ್ಟರಿಂದಲೇ ತೃಪ್ತಿಯಾಗಲಿಲ್ಲವೋ ಏನೋ! ತಾನೇ ತನ್ನ ಅಂಗಾಂಗಗಳನ್ನು ಕೆರೆದುಕೊಳ್ಳಲಾರಂಭಿಸಿದಾಗ ಅಂಗಾತವಾಗಿ ಮಲಗಿ ಹಿಂಗಾಲಿನಿಂದ ತನ್ನೆಲ್ಲ ಅವಯವಗಳನ್ನು ತಿಕ್ಕಿಕೊಳ್ಳುವ ನಾಯಿಯನ್ನು ನೆನಪಿಗೆ ತಂದಿತು. ಕೆಲವೊಮ್ಮೆ ಬೆನ್ನನ್ನು ನೆಲಕ್ಕೆ ಚಾಚಿ, ಎರಡು ಇರುವೆಗಳಿಂದ ಮೈ ತುರಿಸಿಕೊಳ್ಳುವವೂ ಇಲ್ಲದಿಲ್ಲ. ಹೆಣ್ಣಿನಿಂದ ಹೇನು ಹೆಕ್ಕಿಸಿಕೊಳ್ಳುವ ಗಂಡು ಮಂಗಗಳಂತೆ, ಈ ಇರುವೆಗಳು ಇಂಥ ಕ್ರಿಯೆಯಲ್ಲಿ ಆನಂದಿಸುತ್ತವೆ. ಹಲವು ಬಾರಿ ಈ ಸೇವೆಗೆ ಪ್ರತಿಸೇವೆ ಪೂರೈಸಬೇಕಾಗುತ್ತದೆ.

ಗೂಡಿನ ಸೇವೆ ಸತತವಾಗಿ ನಡೆಯಬೇಕಾಗಿದ್ದರಿಂದ, ಕಾರ್ಖಾನೆಯಲ್ಲಿಯ ಕಾರ್ಮಿಕರಂತೆ, ಇರುವೆಗಳು ಸರದಿಯಂತೆ ವಿಶ್ರಾಂತಿ ಪಡೆಯುತ್ತವೆ, ನಿದ್ರಿಸುತ್ತವೆ. ತುರಿತ-ಕಿರೆತದ ಸೇವೆಯ ನಂತರ ಜಂಪು ಹತ್ತಿ ನಿದ್ರಾವಸ್ಥೆ ತಾಳಿದವು. ಸ್ವಲ್ಪ ಎತ್ತರದ ಸ್ಥಳ ಅವಕ್ಕೆ ಹಿತವೆನಿಸಿದರೂ, ಒಂದಿಷ್ಟೂ ಗೊಣಗದೇ ಪಾಲಿಗೆ ಬಂದದ್ದೇ ಪಂಚಾಮೃತವೆಂದು ಉಳಿದೆಡೆ ಹೊಂದಿಕೊಂಡವು. ಕೆಲವು ಹುಲ್ಲಿನಡಿ ಸೇರಿಕೊಂಡರೆ, ಹಲವು ಗಾಜಿನ ಒಳಮೈಯನ್ನು ತಮ್ಮ ನಿದ್ರಾಸ್ಥಳವಾಗಿ ಆರಿಸಿಕೊಂಡವು. ಆಗೊಮ್ಮೆ, ಈಗೊಮ್ಮೆ ಮಗ್ಗಲು ಬದಲಿಸಿ ಅಂಗಾತ ಮಲಗುವವು. ಮೀಸೆ, ಕೈಕಾಲು ಅಲ್ಲಾಡಿಸುವ ಜೊತೆಗೆ, ಆಗಾಗ ಮೈ ಕೆರೆದುಕೊಳ್ಳುವುದೂ ಉಂಟು. ಸಂಗಾತಿಗಳ ಜೊತೆ ಕನವರಿಸಿದರೂ, ಕನಸುಗಳನ್ನು ಕಾಣುತ್ತವೆಯೇ ಎಂದು ಕಂಡುಹಿಡಿಯಲಾಗಲಿಲ್ಲ. ಈ ಕೆಲಸಗಾತಿಯರಿಗೆ ಪ್ರೇಮ-ಕಾಮ, ವಿವಾಹ, ಸಂತಾನೋತ್ಪತ್ತಿಗಳು ಇಲ್ಲದ್ದರಿಂದ ಅಂಥ ಸ್ವಪ್ನಗಳು ಬೀಳುತ್ತಿರಲಿಕ್ಕಿಲ್ಲ. ಆದರೆ ತಾನೊಂದು ದಿನ ರಾಣಿಯಾಗುವ ಹಗಲು ಕನಸು ಖಂಡಿತ ಕಾಣುತ್ತಿರಬೇಕು !

ಒಂದು ಗುಂಪು ಮಲಗಿದಾಗ ಇನ್ನೊಂದು ಆಹಾರ ಶೇಖರಿಸುತ್ತಲೇ ಇರುತ್ತದೆ. ಕೆಲವೊಮ್ಮೆ ಓಡಾಡುತ್ತಿರುವ ಸಹಜೀವಿಗಳು ನಿದ್ರಾಸುಂದರಿಯರನ್ನು ಅಪ್ಪಳಿಸಿ ಎಡವಿ ಬೀಳುವುದೂ ಇದೆ. ನಿದ್ರಾಭಂಗ ಮಾಡಿದ್ದಕ್ಕೆ ಕಾದಾಟಕ್ಕೆ ಇಳಿಯಂದೇ ನಕ್ಕು ಕ್ಷಮಿಸಿ, ಎಂದಾಗ ತಿರುಗಿ ಗೊರಕೆ ಹೊಡೆಯಲಾರಂಭಿಸಿದವು. ಕೆಲವಕ್ಕೆ ನಿದ್ರಿಸುವವನ್ನು ಗಮನಿಸಿದಾಗ ತಾವೂ ದಣಿದಿರುವುದು ಅರಿವಾಗಿ, ಹೊತ್ತು ತಂದ ಸಾಮಗ್ರಿಗಳನ್ನು ಗೋದಾಮಿಗೆ ಸಾಗಿಸುವ ಗೋಜಿಗೂ ಹೋಗದೇ ಒಂದು ಮೂಲೆಗೆ ಎಸೆದು, ನಿದ್ರೆ ಹೋದವು. ಎರಡರಿಂದ ಮೂರು ತಾಸು ಗಾಢವಾದ ನಿದ್ರೆ ಮುಗಿಸಿ, ಕೆಲಸಗಾತಿಯರು ಎಚ್ಚರಗೊಂಡು, ಕೈಕಾಲುಗಳನ್ನು ಝಾಡಿಸಲಾರಂಭಿಸಿದವು. ಕಾಲುಗಳಿಂದ ಹಲ್ಲುಜ್ಜಿಕೊಂಡು, ಕೆಲವು ನೆಟಿಕೆ ತೆಗೆದು, ಮೈ ಮುರಿದು, ಆಕಳಿಸಿ, ತಮ್ಮ ನಿದ್ದೆ ಮುಗಿದಿಲ್ಲವೆಂದು ತೋರಿಸಿಕೊಂಡವು. ತಿರುಗಿ ಮಲಗಲು ಯಾರೂ ಆಕ್ಷೇಪಿಸದಿದ್ದರೂ ಕರ್ತವ್ಯಪಾಲನೆ ನೆನಪಾಗಿ

ಕಾಫಿ–ತಿಂಡಿಗೂ ಕಾಯದೆ ತಿರುಗಿ ತಮ್ಮ ಚಟುವಟಿಕೆ ಪ್ರಾರಂಭಿಸಿಯೇ ಬಿಟ್ಟವು. ಅವುಗಳ ಚಟುವಟಿಕೆಗಳನ್ನು ಕಣ್ಣಲ್ಲಿ ಕಣ್ಣಿಟ್ಟು ನಿರೀಕ್ಷಿಸುತ್ತಿದ್ದವನಿಗೇ ವಿಪರೀತವಾಗಿ ದಣಿವಾಗಿ ನಿದ್ರಿಸಲೇ ಬೇಕಾಯಿತು.

ದಿನದ ಬೇರೆ ಬೇರೆ ಸಮಯದಲ್ಲಿ ಕೆಲಸಗಾತಿಯರು ನಿದ್ರಿಸುವುದು ಕಂಡುಬಂದರೂ, ಒಂದೇ ಇರುವೆ ದಿನಕ್ಕೆ ಒಂದಕ್ಕಿಂತ ಹೆಚ್ಚು ಬಾರಿ ವಿಶ್ರಾಂತಿ ಪಡೆಯುತ್ತದೆಯೋ ಎಂದು ನಿರ್ಧರಿಸಲಾಗಲಿಲ್ಲ. ಅಂತೆಯೇ ಕೆಲ ಕಾರ್ಮಿಕರ ಬೆನ್ನ ಮೇಲೆ ಬಿಳಿ ಬಣ್ಣದ ಚುಕ್ಕೆಗಳನ್ನು ಬಿಡಿಸಬೇಕಾಯಿತು. ಇದರಿಂದ ವಿವರಗಳು ತಿಳಿದವು. ಒಂದು ಇರುವೆಗೆ ಆರೆಂಟು ತಾಸು ಸತತ ದುಡಿತದ ನಂತರ ವಿರಾಮ ಬೇಕಾಗುವುದರಿಂದ ಅದು ನಿದ್ರಿಸುತ್ತದೆ. ಅಂದರೆ ದಿನಕ್ಕೆ ಎರಡು ಮೂರು ಬಾರಿ ಎರಡು ಮೂರು ತಾಸಿನವರೆಗೆ ನಿದ್ರೆ ಮಾಡುತ್ತದೆ. ರಾಣಿ ಮಾತ್ರ ಮೊಟ್ಟೆಗಳನ್ನಿಟ್ಟು ದಣಿದಾಗೊಮ್ಮೆ ಒಂದೆರಡು ತಾಸು ನಿದ್ರಿಸುತ್ತದೆ. ಎಷ್ಟೋ ಬಾರಿ ಸೇವಕಿಯರೇ ಅವಳನ್ನು ಎಚ್ಚರಿಸಿ, ಅಂಗಾಂಗಗಳನ್ನು ಸ್ವಚ್ಛಮಾಡಿ ನಾಶ್ತಾ ಪೂರೈಸುತ್ತವೆ. ಗಂಡಿರುವೆಗಳು ಮಾತ್ರ ದಿನದ ಹೆಚ್ಚಿನ ಭಾಗವನ್ನು ನಿದ್ರೆಯಲ್ಲಿಯೇ ತೆಗೆಯುತ್ತವೆ. ಎಲ್ಲ ಕೆಲಸಗಾತಿಯರು ಕೆಲಸ ಮಾಡುವಾಗ, ಎಂದೂ ಮೆಲುಕಾಡಿಸದೇ ನಿಷ್ಠೆಯಿಂದ ತಾವು ಸಂಗ್ರಹಿಸಿದ ಆಹಾರವನ್ನು ಗೋದಾಮಿಗೆ ಸೇರಿಸುವವು. ಹಸಿದಾಗೊಮ್ಮೆ ಗೋದಾಮಿಗೆ ಹೋಗಿ ಹಿತ-ಮಿತವಾಗಿ ಆಹಾರ ಸೇವಿಸುವವು. ಇದರಿಂದ ಕೊಬ್ಬು ಕರಗಿಸಲು ವ್ಯಾಯಾಮ ಮಾಡುವ ಅವಶ್ಯಕತೆ ಬೀಳುವುದಿಲ್ಲ! ರಾಣಿಯ ನಂತರ ಹೆಚ್ಚು ಆಹಾರ ಸೇವಿಸುವವೆಂದರೆ ಗಂಡಿರುವೆಗಳೇ.

ಇರುವೆಗಳು, ಮಾನವನಂತೆ ಮಲಮೂತ್ರಗಳನ್ನು ಬೇರೆ ಬೇರೆಯಾಗಿ ವಿಸರ್ಜಿಸದೇ, ಹಕ್ಕಿಗಳಂತೆ ಜೊತೆಗೇ ಹೊರಹಾಕುವವು. ಕಕ್ಕಸ ಮಾಡುವ ಸ್ಥಳ ಬೇರೆಯೇ ಆಗಿರುತ್ತದೆ. ಜಿರಳೆಗಳು ವಾಸಿಸುವ ಪರಿಸರ ಅವುಗಳ ಕಕ್ಕಸದಿಂದ ನಾರುವುದು ಸರ್ವವಿದಿತ. ಬಹುಶಃ ಬೇರಾವ ಕಾರಣಕ್ಕಿಂತಲೂ ಇದೊಂದು ಕಾರಣಕ್ಕಾಗಿಯೇ ಅವುಗಳ ಕೊಲೆಯಾಗುತ್ತದೆ. ಇರುವೆಗಳಂತೆ ಅವುಗಳ ಮಲಮೂತ್ರಗಳೂ ಸ್ವಚ್ಛ. ಸೂಜಿ ಮೊನೆಯಿಂದ

ಹಾಲು ಎತ್ತಿದಷ್ಟು ಅದರ ವಿಸರ್ಜನೆಯು ಪ್ರಮಾಣವಿರುವುದು. ಕೆಲ ಸಮಯದ ನಂತರ ಹಾಲು ಒಣಗಿ ಹುಡಿಯಾಗುವಂತೆ ಅದೂ ಆಗುವುದು. ನದಿ ತೀರದ ಕಕ್ಕಸಗಳು ನೀರಿನಿಂದ ಸ್ವಚ್ಛವಾಗುವಂತೆ, ಇರುವೆಯು ಸಂಡಾ ಸನ್ನು ಗಾಳಿಯೇ ಸ್ವಚ್ಛ ಮಾಡುವುದು. ಇಷ್ಟಾದರೂ ಕೆಲಸಗಾತಿಯರಿಗೆ ನೆಮ್ಮದಿಯಿಲ್ಲ. ರಾಣಿಯು ನಿವಾಸದ ಸ್ವಚ್ಛತೆಯು ಜೊತೆಗೆ, ಪ್ರಜೆಗಳ ದ್ದನ್ನೂ ಗುಡಿಸಿ, ಕಸಕಡ್ಡಿಗಳೊಂದಿಗೆ, ಕಕ್ಕಸದ ಹುಡಿಯನ್ನೂ ಎತ್ತಿ ತಿಪ್ಪೆ ಗೆಸೆದು ಬರುವವು. ಬುದ್ಧಿಜೀವಿ ಎಂದುಕೊಳ್ಳುವ ಮಾನವನೇ ತನ್ನ ಪರಿಸರದ ಸ್ವಚ್ಛತೆಯು ಬಗ್ಗೆ ಅಷ್ಟಾಗಿ ಲಕ್ಷ್ಯ ಕೊಡದಿರುವಾಗ ಈ ಪುಟ್ಟ ಜೀವಿ, ಇಷ್ಟೊಂದು ಶ್ರಮವಹಿಸಿ ಗೂಡಿನ ಮತ್ತು ದೈಹಿಕ ಸ್ವಚ್ಛತೆಯನ್ನು ಏಕೆ ಪಾಲಿಸುತ್ತದೆ ? ಎಂಬ ಸಮಸ್ಯೆ ಬಹಳ ದಿನ ಕಾಡಿತು. ಒಂದು ಬೆಳಿಗ್ಗೆ ಕಂಡ ದೃಶ್ಯದಿಂದ ಈ ಸಮಸ್ಯೆಗೆ ತಂತಾನೆ ಉತ್ತರ ದೊರಕಿತು. ಗಂಡಿರುವೆ ಗಳ ಗುಂಪುಗಳು ಯಾವುದೋ ರೋಗಪೀಡಿತವಾಗಿ ಮೃತಪಟ್ಟಿದ್ದವು. ಆ ಖಾಯಿಲೆ ಇತರ ಸದಸ್ಯರಿಗೆ ತಗಲದಂತೆ, ಕೆಲಸಗಾತಿಯರು ಶವಗಳನ್ನು ತೀವ್ರವಾಗಿ ಎತ್ತಿಕೊಂಡು ಹೋಗಿ ತಿಪ್ಪೆಗೆಸೆದು ಬಂದವು. ಅಲ್ಲದೇ ರೋಗಾಣುಗಳಿರಬಹುದಾದ ಹುಡಿ ಮಣ್ಣನ್ನು ಒಟ್ಟುಮಾಡಿ ಗೂಡಿನ ಹೊರಗೆ ಸಾಗಿಸಿದವು. ಅಲ್ಲದೇ ಆ ನೆಲಮಾಳಿಗೆ ಬಳಸದಂತೆ, ಅದರ ದ್ವಾರವನ್ನು ಮಣ್ಣಿನಿಂದ ಮುಚ್ಚಿಬಿಟ್ಟವು! ಕತ್ತಲು, ವಿಪರೀತ ಆರ್ದ್ರತೆ ಗಳಿರುವುದರಿಂದ ರೋಗಾಣುಗಳು ಬೆಳೆಯುವ ಅವಕಾಶ ತೀವ್ರವಾಗಿರು ತ್ತವೆ. ಆದ್ದರಿಂದ ಅವಕ್ಕೆ ಅವಕಾಶವನ್ನೇ ಕೊಡಬಾರದೆಂದು ಇರುವೆಗಳು ಸದಾ ಶುಭ್ರತೆಯತ್ತ ಲಕ್ಷ ಪೂರೈಸುತ್ತಲೇ ಇರುವವೆಂದು ಅರಿಯುವಂತಾ ಯಿತು. ಸ್ವಚ್ಛತೆಯನ್ನು ಚಾಚೂತಪ್ಪದೆ ಪಾಲಿಸಿದರೆ, ಡಾಕ್ಟರರ ಮತ್ತು ಔಷಧಾಲಯಗಳ ಅವಶ್ಯಕತೆ ಅಷ್ಟೊಂದು ಇಲ್ಲವೆಂದು ಇರುವೆಗಳಿಂದ ಕಲಿಯಬೇಕು.

ಇರುವೆಗಳು ಅಂಗಾಂಗ ಸ್ವಚ್ಛತೆಗಾಗಿ ಕಾಲಕಾಲಕ್ಕೆ ತುರಿಸಿಕೊಳ್ಳಬೇಕಾ ಗುವುದರಿಂದ ಬುದ್ಧ್ಯಾಪೂರ್ವಕ ಅದನ್ನು ಮಾಡದೇ ಯಾಂತ್ರಿಕವಾಗಿ ಮಾಡುತ್ತವೆಂದು ಅನಿಸುತ್ತದೆ. ಮೀಸೆಗಳನ್ನು ಕಳೆದುಕೊಂಡ ಕೆಲಸಗಾತಿಗೆ ಅಷ್ಟೇ ಉದ್ದಳತೆಯ ಕೂದಲೊಂದನ್ನು ಕೊಟ್ಟಾಗ, ಅದು ತನ್ನದೇ ಮೀಸೆ

ಯೆಂಬಂತೆ ದವಡೆಯಿಂದ ಕಚ್ಚಿ ಶುಭ್ರಗೊಳಿಸುವುದು ಮೋಜಾಗಿರುತ್ತದೆ. ಬ್ರಶ್ ಮಾಡುವ ಕಾರ್ಖಾನೆಯಲ್ಲಿ ಹಂದಿ ಕೂದಲು ಸ್ವಚ್ಛಗೊಳಿಸಲು ಈ ಇರುವೆ ಪರಿವಾರವನ್ನೇ ನೇಮಿಸಿಕೊಂಡರೆ, ಹೇಗಿರುತ್ತದೆ ಎನಿಸಿತು. ಮೀಸೆ ಇಲ್ಲವೇ ಬೇರಾವ ಅವಯವ ದೇಹದಿಂದ ಬೇರ್ಪಟ್ಟು ಗಾಯವಾದಾಗ ಅಲ್ಲಿ ನೀರಿನಂತಹ ದ್ರವದ ಚಿಕ್ಕ ಹನಿ ಹೊರಹೊಮ್ಮುತ್ತದೆ. ಅದಕ್ಕೆ ಗಾಳಿ ಸೋಂಕಿದಾಗ ಗಟ್ಟಿಯಾಗಿದ್ದರೂ ಅದು ಈ ಜೀವಿಯ ರಕ್ತವಿರಬಹುದೇ ಎಂಬ ಸಂದೇಹ ಮೂಡಿತು. ಒಂದು ಗಾಜಿನ ತುಂಡಿನ ಮೇಲೆ ಸ್ವಲ್ಪ ಅದನ್ನು ಸವರಿ ಸೂಕ್ಷ್ಮದರ್ಶಕದಿಂದ ನೋಡಿದಾಗ ಅದರಲ್ಲಿ ನಾಲ್ಕು ಪ್ರಕಾರದ ಶಕ್ತಿ ಗೋಲಕಗಳು ಕಂಡುಬಂದವು. ರಕ್ತ ಕೆಂಬಣ್ಣದ್ದೇ ಇರಬೇಕಾದ್ದಿಲ್ಲ. ಪಾರದರ್ಶಕವೂ ಇರಬಹುದೆಂದು ಅರಿವಾಯಿತು. ರಕ್ತವನ್ನು ಅಂಗಾಂಗಗಳಿಗೆ ಹರಿಸುವ ಹೃದಯ ಹೇಗಿರಬಹುದು ? ಎಂದು ಅರಿಯುವ ಮನಸ್ಸಾಯಿತು. ಅದು ಮುಷ್ಟಿಯ ಆಕಾರದ್ದು ಆಗಿರದೇ ಅದರಲ್ಲಿ ನಾಲ್ಕು ಭಾಗಗಳು ಇರದೇ ಶರೀರದ ಉದ್ದಕ್ಕೂ ಓಡುವ ಕೊಳವೆಯಂತಿತ್ತು. ಇದರೊಂದಿಗೆ ಹಲವಾರು ಶ್ವೇತವರ್ಣೀಯ ಕೊಳವೆಗಳು ಶರೀರದಲ್ಲಿಯ ಛಿದ್ರಗಳಿಗೆ ಜೋಡಿಸಿದ್ದರಿಂದ ಇವು ಶ್ವಾಸೋಚ್ಛ್ವಾಸಕ್ಕೆ ಸಂಬಂಧಪಟ್ಟವು ಎನಿಸಿತು. ಅಲ್ಲದೇ ಪುಪ್ಪುಸಗಳಂತಹ ಹವಾಚೀಲಗಳೂ ಇದ್ದವು.

ಹಲ್ಲಿ ಗೋಡೆ ಹತ್ತುವಂತೆ ಇರುವೆಗಳು ಗಾಜನ್ನು ಸುಲಭವಾಗಿ ಹತ್ತಲು ಹೇಗೆ ಸಾಧ್ಯ? ಎಂದು ಸೂಕ್ಷ್ಮವಾಗಿ ಪರೀಕ್ಷಿಸಿದಾಗ, ಪ್ರತಿಪಾದಕ್ಕೂ ಜೋಡಿ ಮುಳ್ಳಿನಾಕಾರದ ಖುರಗಳಲ್ಲದೇ ಜಿಗಟಾದ ಚರ್ಮದುಂಡೆಯೂ ಇತ್ತು. ಇದರೊಂದಿಗೆ ಕಾಲುಗಳ ಸ್ನಾಯುಗಳು ಶಕ್ತಿಯುತವಾಗಿದ್ದರಿಂದ ಅದು ತನ್ನ ತೂಕಕ್ಕಿಂತ ಮೂವತ್ತು ಪಾಲು ಭಾರದ ವಸ್ತುಗಳನ್ನು ಸುಲಭವಾಗಿ ಎತ್ತುತ್ತದೆ. ಮಾನವನಿಗೆ ಇಂತಹ ಸಾಮರ್ಥ್ಯವಿದ್ದರೆ ಅವನು ಪ್ರತಿವರ್ಷವೂ ಭಾರ ಎತ್ತುವುದರಲ್ಲಿ ಹೊಸ ಹೊಸ ದಾಖಲೆಗಳನ್ನು ಸ್ಥಾಪಿಸಬಹುದಾಗಿತ್ತು. ಇರುವೆಗಳು ಆರೂ ಕಾಲುಗಳನ್ನು ಸಂಯೋಜಿಸಿ ನಡೆದರೂ ಅಪಘಾತದಲ್ಲಿ ಒಂದು ಅಥವಾ ಎರಡು ಕಾಲುಗಳನ್ನು ಕಳೆದುಕೊಂಡರೂ, ಉಳಿದ ಕಾಲುಗಳನ್ನಷ್ಟೇ ಬಳಸಿ ನಡೆಯಲು, ಓಡಲು ಕಲಿತುಕೊಂಡಿತು.

ಕೇವಲ ಎರಡೇ ಕಾಲುಗಳು ಉಳಿದುಕೊಂಡಾಗ ಮಾತ್ರ ಅದು ಬಲು ಪ್ರಯಾಸದಿಂದ ಚಲಿಸಬೇಕಾಗುವುದು. ಅವುಗಳನ್ನು ನೋಡಿದಾಗ ಮುಂಗಾಲು ಕಟ್ಟಿಸಿಕೊಂಡ ಮಡಿವಾಳನ ಕತ್ತೆ, ಶ್ರಾವಣ ಮಾಸದಲ್ಲಿ ಒಂದು ಕಾಲು ಮುರಿಸಿಕೊಂಡ ನಾಯಿಯ ಓಡಾಟ ನೆನಪಿಗೆ ಬರುತ್ತದೆ. ಆದರೆ ಇಂಥ ಕೆಲಸಗಾತಿಯರು ಬೇಗ ಸಾವನ್ನಪ್ಪಿಕೊಂಡು ತಮ್ಮ ಅಸಹಾಯಕತೆಯನ್ನು ಕೊನೆಗಾಣಿಸಿಬಿಡುತ್ತವೆ.

ಇರುವೆಗೆ ಪ್ರತ್ಯೇಕ ಮೂಗು ಇಲ್ಲದ್ದರಿಂದ ಈ ಕಾರ್ಯವನ್ನು ಯಾವ ಅವಯವ ನಿರ್ವಹಿಸುತ್ತದೆಯೆಂದು ಪರೀಕ್ಷಿಸಿದಾಗ, ಮೀಸೆಗಳ ಹೊರತಾಗಿ ಬಾಯಿಸುತ್ತ ಕೈ-ಕಾಲುಗಳಲ್ಲಿ ಶರೀರದ ವಿವಿಧ ಭಾಗಗಳಲ್ಲಿ ಹರಡಿಕೊಂಡಿದ್ದ ಸೂಕ್ಷ್ಮ ಕೂದಲುಗಳಿಗೆ ವಾಸನೆ ಗ್ರಹಿಸುವ ಶಕ್ತಿಯಿದೆಯೆಂದು ಕಂಡುಬಂದಿತು. ಇದರ ರಚನೆ ಮೂಗಿನದಕ್ಕಿಂತ ತೀರ ಭಿನ್ನವಾಗಿರುವುದರಿಂದ ಮಾನವನ ಮತ್ತು ಇರುವೆಗಳ ಸುಗಂಧ–ದುರ್ಗಂಧಗಳ ವಿಶ್ಲೇಷಣೆ ಒಂದೇ ಆಗಿಲ್ಲವೆಂದು ಅರ್ಥವಾಯಿತು. ಕಿವಿಗಳ ಬದಲಾಗಿ ಮೈ ಕವಚದ ತುಂಬ ಎಲ್ಲ ಛಿದ್ರಗಳಿವೆ. ಅವುಗಳ ಆಳದಲ್ಲಿ ನರಗನ್ನು ಜೋಡಿಸಲಾಗಿದ್ದರಿಂದ ಅವಕ್ಕೆ ಹೊಂದಿದ್ದ ಪಟಲವೇ ಕೇಳುವ ಕೆಲಸ ಮಾಡುತ್ತಿದ್ದಿರಬೇಕು. ಬಹುಶಃ ಕೇಳಿ ಬರುವ ನಾದದಿಂದ, ನುಡಿಸುತ್ತಿರುವ ಮೃದಂಗದ ತೊಗಲಿನಂತೆ ಅದು ತರಂಗವನ್ನು ಹೊರಡಿಸಬೇಕು. ಇದರಿಂದ ಕೇಳುವ ಕ್ರಿಯೆ ನಡೆಯುತ್ತಿರಬೇಕು. ಯಾಕೆಂದರೆ, ಈ ಅವಯವಗಳ ಮೇಲೆ ಮೇಣ ಸವರಿದಾಗ ಅವು ಕಿವುಡಾದಂತೆ ವರ್ತಿಸುತ್ತವೆ. ಸಂಗೀತ ಆಲಿಸುವ ಮಾನವನ ಕಿವಿಗೂ, ಸದ್ದನ್ನು ಕೇಳುವ ಇರುವೆಗಳ ಕರ್ಣಗಳಿಗೂ ಹೋಲಿಕೆಯೇ ಇಲ್ಲ. ಇರುವೆಗಳು ನಾದವನ್ನು ಖಂಡಿತವಾಗಿ ಸಂಪರ್ಕ ಮಾಧ್ಯಮವಾಗಿ ಬಳಸುತ್ತಿದ್ದಿರಬೇಕು. ಯಾಕೆಂದರೆ, ಕೆಲಸಗಾರ್ತಿಯರು ಭೇಟಿಯಾದಾಗ, ರಾಣಿಯ ಬೇಕು ಬೇಡಗಳನ್ನು ಅರಿಯುವಾಗ, ದವಡೆಗಳನ್ನು ಕಟೆಯುವ, ಕಾಲನ್ನು ನೆಲಕ್ಕೆ ಕೆರೆಯುವ, ಕ್ರಿಯೆಗಳು ನಡೆದೇ ಇರುತ್ತವೆ. ಆದರೆ ನಮ್ಮ ಕಿವಿಗಳು ಅವನ್ನು ಆಲಿಸದಷ್ಟು ಕಿವುಡು! ಇದರಂತೆ ಮಾನವನ ನಾಲಿಗೆಯೂ ಮಂದವೇ. ಯಾಕೆಂದರೆ ಮೂವತ್ತೆರಡು ಪಾಲು ನೀರಿನಲ್ಲಿ ಒಂದು ಪಾಲಿ

ಗಿಂತ ಅಧಿಕ ಸಕ್ಕರೆ ಇದ್ದಾಗ ಮಾತ್ರ ಅದು ಗುರುತಿಸುವುದು. ಅದೇ ಇರುವೆಯು ನಾಲಿಗೆ ಸಾವಿರದಲ್ಲಿ ಒಂದು ಪಾಲು ಸಿಹಿ ಇದ್ದರೆ ಸುಲಭವಾಗಿ ಗುರುತಿಸಿ ಮುತ್ತಿಬಿಡುವುದು. ಹಸಿದಾಗ, ಇಲ್ಲವೇ ಆಹಾರದ ಅಭಾವ ವಿದ್ದಾಗ ಎರಡು ಸಾವಿರದಲ್ಲಿ ಒಂದೇ ಒಂದು ಭಾಗ ಸಕ್ಕರೆ ಇದ್ದರೂ ಗುರುತಿಸುವುದು. ಬಹುಶಃ ಇದೇ ಕಾರಣದಿಂದ ಚಹ–ಕಾಫಿ ಮಾಡಿದ ಪಾತ್ರೆಯನ್ನು ತುಂಬ ನೀರಲ್ಲಿ ಹಾಕಿ ಇಟ್ಟರೂ ಅದಕ್ಕೆ ಕೆಲಸಗಾತಿ ಇರುವೆಗಳು ಮುತ್ತಿಬಿಡುವವು. ಇದರಂತೆ ಒಣಹಾಕಿದ ಸ್ಟಾರ್ಚ್ (ಪಿಷ್ಟ) ಮಾಡಿದ ಬಟ್ಟೆಗೂ ಅವು ಎಡತಾಕುತ್ತಿರುತ್ತವೆ.

ಸೈನಿಕನ ಶರೀರದ ಹಿಂಭಾಗವನ್ನು ತೆರೆದು ನೋಡಿದಾಗ, ಅಲ್ಲೊಂದು ನಾಶೀಪುಡಿ ವರ್ಣದ ದ್ರವ ತುಂಬಿದ ಪಾರದರ್ಶಕ ಚೀಲ ಕಂಡುಬಂದಿತು. ಅದರ ಹಿಂಬದಿಗೆ, ಚುಚ್ಚುಮದ್ದಿನ ಸೂಜಿಯನ್ನು ಜೋಡಿಸಲಾಗಿತ್ತು. ಇದೊಂದು ಯುದ್ಧದ ಆಯುಧವಿರಬೇಕು ಅನಿಸಿತು. ಹರಿತವಾದ ಸೂಜಿಯಿಂದ ಚುಚ್ಚಿದಾಗ ಅದರಿಂದ ಕಾರಂಜಿಯಂತೆ ಮೈಮೇಲೆ ಸಿಡಿದ ದ್ರವ್ಯ, ಚರ್ಮವನ್ನು ಉರಿಯುವಂತೆ ಮಾಡಿತು. ಅದರ ವಾಸನೆ ಮತ್ತು ಉರಿಯುವಿಕೆಯಿಂದಾಗಿ ಅದು ಫಾರ್ಮಿಕ್ ಅಮ್ಲವೆನಿಸಿತು. ರಾಣಿಯ ಧಡದಲ್ಲಿ ಬೆಳೆಯುತ್ತಿದ್ದ ವಿವಿಧ ಹಂತಗಳ ಮೊಟ್ಟೆಗಳು ಕಂಡವು. ಕೇಸರಿ ಮಣಿಗಳನ್ನು ದಾರದಲ್ಲಿ ಪೋಣಿಸಿ, ಅವುಗಳ ಗೊಂಚಲುಗಳನ್ನು ಶರೀರದೊಳಗೆ ಪೋಣಿಸಿದ ಹಾಗಿತ್ತು. ಪಕ್ವವಾದ ಮೊಟ್ಟೆಗಳು ಹೊರಗೆ ಹಾಕಲು ಅನುಕೂಲವಾಗುವಂತೆ ಹಿಂಭಾಗದಲ್ಲಿದ್ದರೆ, ಬೆಳೆಯುತ್ತಿರುವವು ಮುಂಭಾಗದಲ್ಲಿ ಇದ್ದವು. ಅವೆಲ್ಲವೂ ಸೇರಿ ನೂರಕ್ಕಿಂತ ಹೆಚ್ಚು ಇಲ್ಲದ್ದರಿಂದ ರಕ್ತ ಗೋಲಕಗಳಂತೆ ಅವುಗಳ ಉತ್ಪಾದನೆ ಸತತವಾಗಿ ನಡೆಯುವುದೆಂದು ಖಚಿತವಾಯಿತು. ರಾಣಿಯ ಶರೀರದಲ್ಲಿ ಅಧಿಕ ಪ್ರಮಾಣದಲ್ಲಿ ಕೊಬ್ಬು ಸಂಚಯವಾಗಿತ್ತು. ಮೊಟ್ಟೆಗಳ ಬೆಳವಣಿಗೆಗೆ ಇದರ ಅವಶ್ಯಕತೆ ಹೆಚ್ಚಾಗಿರುವುದರಿಂದ ಕೊಬ್ಬಿರುವ ಆಹಾರ ರಾಣಿಗೆ ಮಾತ್ರ ಮೀಸಲು ಎಂದು ಕಾಣುತ್ತದೆ, ಇಲ್ಲವೇ ಪೂರೈಸಿದ ಆಹಾರದಿಂದಲೇ ಕೊಬ್ಬು ಸಿದ್ಧಪಡಿಸುವ ಸಾಮರ್ಥ್ಯ ಈ ರಾಣಿಗೆ ಇರಬಹುದೆ ?

ಹೆಚ್ಚಿನ ಬಿಡುವಿನ ಸಮಯವೆಲ್ಲ ಇರುವೆಗಳ ಪಾಲನೆ-ಪೋಷಣೆ, ನಿರೀಕ್ಷಣೆಯಲ್ಲಿ ಹೋಗಹತ್ತಿತು. ಅಲ್ಲದೇ ಬಂಧನದಲ್ಲಿ ವರ್ತಿಸಿದಂತೆಯೇ ಅವು ನಿಸರ್ಗದಲ್ಲಿಯೂ ವರ್ತಿಸುವವೇ ? ಎಂಬ ಸಂಶಯ ಬರಹತ್ತಿತು. ಅಂತೆಯೇ ಮನೆಯಲ್ಲಿ ಬೆಳೆಯಿಸಿದ ಗೂಡನ್ನು ತೋಟದಲ್ಲಿ ಇಟ್ಟಾಗ ಇರುವೆಗಳು ಹೇಗೆ ಹೊಂದಿಕೊಳ್ಳುವವೆಂದು ಪರೀಕ್ಷಿಸಲು, ಹೆಬ್ಬಾಗಿಲಿನ ಹೊರಗೇ ಇದ್ದ ದೊಡ್ಡ ದೊಡ್ಡ ಪೇರಲ ಗಿಡದ ಅಡಿಯಲ್ಲಿ ಇಡುವುದೆಂದು ನಿರ್ಧರಿಸಿದಾಗ, ನೆಮ್ಮದಿಯೆನಿಸಿತು. ಆ ರಾತ್ರಿ ಇರುವೆಗಳಿಗೆಲ್ಲ ಬುಂದಿ ಲಾಡುವಿನ ಮೃಷ್ಟಾನ್ನ ಭೋಜನ ಒದಗಿಸಿ ಸುಖನಿದ್ರೆಯಲ್ಲಿ ತೇಲುವಂತೆ ಮಾಡಲಾಯಿತು.

# 21. ಗುಲಾಮಗಿರಿಗಾಗಿ ಕಾಳಗ

ಸಾಕಿದ ಸ್ನೇಹಿತ-ಇರುವೆಗಳು ನಿಸರ್ಗದ ಮಡಿಲಲ್ಲಿ, ಯಾವ ನಿರ್ಬಂಧ ಗಳೂ ಇಲ್ಲದ್ದರಿಂದ ದಿಟ್ಟತನದಿಂದ ಜೀವಿಸಬಲ್ಲವು, ಎಂಬ ಆತ್ಮ ವಿಶ್ವಾಸ ದಿಂದ ಅವುಗಳನ್ನು ಬೀಳ್ಕೊಟ್ಟು ಹಿಂದಿರುಗಲಿದ್ದಾಗ. ಕಾರ್ಮಿಕರಲ್ಲಿ ಏನೋ ಕೋಲಾಹಲವೆದ್ದಿತು. ತಂತಮ್ಮ ಕೆಲಸಗಳನ್ನು ಬಿಟ್ಟು ಕಚ್ಚಲು ಸಿದ್ಧವಾದವ ರಂತೆ, ದವಡೆಗಳನ್ನು ತೆಗೆದಿಟ್ಟುಕೊಂಡೇ ಆತಂಕದಿಂದ ಓಡಾಡಹತ್ತಿದವು. ಶಿಶುಪಾಲನಾ ಕೇಂದ್ರಕ್ಕೆ ಧಾವಿಸಿ, ಪ್ರತಿಯೊಂದು ಕೆಲಸಗಾತಿಯೂ ಒಂದೊಂದು ಮರಿಯಾಗಲಿ, ಮೊಟ್ಟೆಯಾಗಲಿ ಕಚ್ಚಿಕೊಂಡು, ಗೂಡಿನಿಂದ ಪಲಾಯನ ಮಾಡಲಾರಂಭಿಸಿದವು. ಕೆಲವು ಕಲ್ಲಿನ ಬಂಡೆಗಳ ಅಡಿಯಲ್ಲಿ ಹೊಕ್ಕಿಕೊಂಡರೆ, ಇನ್ನು ಕೆಲವು ಎರೆಹುಳಗಳು ನಿರ್ಮಿಸಿದ ಕುಳಿಯಲ್ಲಿ ಸೇರಿ ಕೊಂಡವು. ಹಲವು, ದೂರದ ಹುಲ್ಲು ಮತ್ತಿತರ ಗಿಡಗಂಟೆಗಳನ್ನು ಹತ್ತಿ ಭಯ-ಉದ್ವಿಗ್ನತೆಗಳಿಂದ ನಡುಗುತ್ತ ಕುಳಿತವು. ಇನ್ನುಳಿದ ಇರುವೆಗಳು ಸೈನಿಕರೆಲ್ಲ ಕೋಟೆಯನ್ನು ಕಾಯುವವರಂತೆ, ಗೂಡಿನ ಸುತ್ತಲೂ ಪ್ರಥಮ ರಕ್ಷಕರಾಗಿ ಹಲ್ಲು ಮಸೆಯಲಾರಂಭಿಸಿದವು. ಅಸಂಖ್ಯ ಕೆಲಸಗಾತಿಯರು, ದ್ವಿತೀಯ ರಕ್ಷಕದಳವಾಗಿ ಕಾದಿದ್ದರು. ಇದೆಲ್ಲ ಬರಲಿರುವ, ಅಥವಾ ನಿರೀಕ್ಷಿಸಿದ ಗಂಡಾಂತರ ಎದುರುಗೊಳ್ಳುವ ಪೂರ್ವಸಿದ್ಧತೆ ಎಂದು ನೋಡಿದಾ ಕ್ಷಣ ತಿಳಿಯುವಂತಿತ್ತು. ಈ ಗಂಡಾಂತರದ ಬಗ್ಗೆ ವಿಜ್ಞಾನಿಮಾನವನ ಕಣ್ಣಿಗೆ ಗೋಚರಿಸದೇ ಇದ್ದದ್ದು ಇರುವೆಗಳ ಪರಿವಾರಕ್ಕೆ ಹೇಗೆ ತಿಳಿಯಿತು? ಎಂದು ವಿಸ್ಮಯ ಪಡುವಂತೆ ಆಯಿತು.

ಅನತಿದೂರದಲ್ಲಿದ್ದ ಇದೇ ಜಾತಿಗೆ ಸೇರಿದ ಇರುವೆಯ ಗೂಡಿನಿಂದ ಸುಸಜ್ಜಿತವಾದ ಸೈನ್ಯ. ಅದಕ್ಕೇ ಮೀಸಲಾಗಿದ್ದ ಪ್ರದೇಶದಲ್ಲಿ ಬೇರು ಬಿಡಲು ಯತ್ನಿಸುವ ಹೊಸ ಪಂಗಡವನ್ನು ಸದೆ ಬಡಿಯಲು ಕವಾಯತು ಮಾಡುತ್ತ ಹೊರಟಿತು. ಸೈನಿಕರನ್ನು ಹುರಿದುಂಬಿಸಲು ಕಹಳೆ-ನಗಾರಿಗಳಿರಲಿಲ್ಲ. ವೈರಿಗಳನ್ನು ಹೆದರಿಸುವ ತೋಪು-ತುಬಾಕಿಗಳಿರಲಿಲ್ಲ. ಇರಿಯಲು ಬರ್ಚಿ-ಕಠಾರಿಗಳೂ ಇರಲಿಲ್ಲ. ಬಲಾಢ್ಯವಾದ ವೈರಿ ಸೈನ್ಯ ಕಂಡಾಗಲೂ ಸಾಕಿದ ಇರುವೆಗಳ ಸೈನ್ಯ ತುಕಡಿಗಳು ಒಂದಿಷ್ಟೂ ಧೃತಿಗೆಡದೇ ಅದರ ಮೇಲೆ ಎರಗಿದವು. ಸೈನಿಕರು ಒಬ್ಬರ ಮೀಸೆ-ಇನ್ನೊಬ್ಬರು ತುಂಡರಿಸುವ ಯತ್ನದಲ್ಲಿ ದವಡೆಗಳಿಂದ ಕಚ್ಚಲಾರಂಭಿಸಿದವು. ದವಡೆಯಲ್ಲಿ ಅಸ್ತ್ರ ಹಿಡಿದ ಸಾಕಿದ ಇರುವೆ ಸೈನಿಕ, ತನ್ನ ಆಮ್ಲಾಯುಧ ಬಳಸಲಾರಂಭಿಸಿದ. ಶರೀರದ ಹಿಂಭಾಗವನ್ನು ಕಮಾನಿನಂತೆ ಮುಂದಕ್ಕೆ ಬಾಗಿಸಿ, ಫಾರ್ಮಿಕ್ ಆಸಿಡ್‌ದ ಕಾರಂಜಿಯನ್ನು ವೈರಿಯ ಬಾಯಿ, ಕಣ್ಣು, ಮೀಸೆಗಳ ಹರವಿದ. ಅದಕ್ಕೆ ಪ್ರತಿಯಾಗಿ, ಅವನೂ ತನ್ನ ಆಮ್ಲದ ಸುರಿಮಳೆಯನ್ನು ಕರೆದ. ಈ ಭೀಕರ ದ್ವಂದ್ವದಲ್ಲಿ, ವೈರಿ, ಮಿತ್ರರ ಸೈನಿಕರಿಬ್ಬರೂ ಮೃತಪಟ್ಟರು. ಕೆಲವು ಮೀಸೆ ಬೇರ್ಪಡಿಸುವುದರಲ್ಲಿ ಯಶಸ್ವಿಯಾದರೆ, ಇನ್ನೂ ಕೆಲವು ಕಾಲುಗಳನ್ನೇ ಕತ್ತರಿಸಿ ಹಾಕಿದವು. ಕೆಲಸಗಾತಿಯರು ಸೈನಿಕರ ಆಹುತಿ ತೆಗೆದುಕೊಳ್ಳುವುದು ಮೆಚ್ಚುವಂತಹದಾಗಿತ್ತು. ಮೂರು-ನಾಲ್ಕು ಕಾರ್ಮಿಕರು ವೈರಿಯ ದವಡೆಗೆ ನಿಲುಕದಷ್ಟು ದೂರ ಇದ್ದು, ಹೊಂಚು ಹಾಕಿದವು. ಕಬಡ್ಡಿ ಆಟದಲ್ಲಿಯಂತೆ ಒಂದು ಇರುವೆ ಮಿಂಚಿನ ವೇಗದಿಂದ, ನುಗ್ಗಿ ಸೈನಿಕನೊಬ್ಬನ ಕಾಲನ್ನು ಕಚ್ಚಿತು. ಈ ಕ್ಷಣಕ್ಕಾಗಿ ಕಾದಿದ್ದ ಇನ್ನಿತರ ಇರುವೆಗಳು ಅದರ ಕಾಲು, ಮೀಸೆಗಳನ್ನು ಬೇರ್ಪಡಿಸಿ, ನಂತರ ಹಿಂಭಾಗವನ್ನು, ಮುಂಭಾಗದಿಂದ ಬೇರ್ಪಡಿಸಿ, ನಂತರ ಹಿಂಭಾಗವನ್ನು ಮುಂಭಾಗದಿಂದ ಬೇರ್ಪಡಿಸಿ ಬಿಟ್ಟವು. ಸಾವು-ನೋವು, ನರಳಾಟಗಳು ಕಾಳಗದ ಭೀಕರತೆಯ ಪರಿಚಯ ಮಾಡಿಕೊಟ್ಟವು.

ಇರುವೆಗಳ ಯುದ್ಧದಲ್ಲಿ, ಗೆಲುವು ಯಾವ ಪಂಗಡಕ್ಕೆ ಸೇರುತ್ತದೆ ಎಂದು ಹೇಳುವುದು ಕಷ್ಟ ! ಸೋಲು ಖಂಡಿತವೆಂದು ಅರಿವಾದಾಗಲೂ, ಆ ಪಂಗಡ

ದವರು, ಮೋಸದಿಂದ ವಿರೋಧಿಗಳ ಕೊಲೆ-ಸುಲಿಗೆಗಳಲ್ಲಿ ಎಂದೂ ತೊಡ ಗುವುದಿಲ್ಲ. ಅಲ್ಲದೇ ಸ್ತ್ರೀ ಜನಾಂಗದ ಮೇಲೆ ಬಲಾತ್ಕಾರವನ್ನೂ ನಡೆಸುವು ದಿಲ್ಲ. ಆ ದೃಷ್ಟಿಯಲ್ಲಿ ಇರುವೆಗಳ ಕಾಳಗವನ್ನು ಮಹಾಭಾರತದ ಧರ್ಮ ಯುದ್ಧಕ್ಕೆ ಹೋಲಿಸಬಹುದು. ಸೋತದ್ದಕ್ಕಾಗಿ ಅವಮಾನಕಾರಿ ಒಪ್ಪಂದದ ಕರಾರುಗಳು, ಕಪ್ಪ-ಕಾಣಿಕೆ, ಕೊಡದಿದ್ದರೆ, ಕೊಲೆ-ಅನಾಚಾರ ಗಳು ಯಾವುವೂ ಇಲ್ಲ. ಸೋಲು ಖಂಡಿತವೆಂದು ಮನವರಿಕೆಯಾದಾಗ ಮಾತ್ರ ಮಿತ್ರ ಇರುವೆಗಳು ಪಲಾಯನ ಮಾಡಿದವು. ವೈರಿಸೈನ್ಯ ಅದನ್ನು ಹಿಂಬಾಲಿಸುವ ಬದಲಾಗಿ, ಗೂಡಿನೊಳಗೆ ಸೇರಿ, ಅಲ್ಲಿರುವ ಮೊಟ್ಟೆ-ಮರಿ ಗಳನ್ನು ತನ್ನವನ್ನಾಗಿ ಮಾಡಿಕೊಂಡು ಗೂಡಿಗೆ ಹಿಂದಿರುಗಲಾರಂಭಿಸಿದವು. ಇದಕ್ಕಾಗಿಯೇ ಕಾದಿದ್ದವೇನೋ ಎಂಬಂತಿದ್ದ ಪ್ರತಿಪಕ್ಷದ ಇರುವೆಗಳು, ವೈರಿಸೈನ್ಯದ ಹಿಂಭಾಗದ ಮೇಲೆ ಬಿದ್ದು, ಸಾಧ್ಯವಿದ್ದಷ್ಟು ಮೊಟ್ಟೆ-ಮರಿ ಗಳನ್ನು ತಿರುಗಿ ಪಡೆದು ತಮ್ಮ ಗೂಡಿನತ್ತ ಕಾಲು ಹಾಕಿದವು. ಮಕ್ಕಳು ಮರಿಗಳೊಂದಿಗೆ ಸುತ್ತ ಮುತ್ತಲು ಅವಿತುಕೊಂಡಿದ್ದ ಕೆಲಸಗಾತಿಯರೆಲ್ಲ ಒಂದೊಂದಾಗಿ ಹಿಂದಿರುಗಿದವು. ಸಾವು-ನೋವು, ಅಂಗವಿಕಲತೆಯ ಲೆಕ್ಕಾ ಚಾರ ಹಾಕಿ, ತಾವು ಈ ರಾಜ್ಯದಲ್ಲಿ ಇರುವುದು ಕ್ಷೇಮಕರವಲ್ಲವೆಂದು ತಮ್ಮದೇ ಹೊಸ ರಾಜ್ಯ ಕಟ್ಟುವ ತೀರ್ಮಾನ ಮಾಡಿಕೊಂಡವು. ಅಂತೆಯೇ ಸುರಕ್ಷಿತ ಸ್ಥಳ ಗೊತ್ತುಪಡಿಸುವುದಕ್ಕಾಗಿ ನಾಲ್ಕೂ ದಿಕ್ಕಿನಲ್ಲಿ ಓಡಾಡಿ, ಪರೀಕ್ಷಿಸಿ ಹಿಂದಿರುಗಿದವು. ಇಷ್ಟೆಲ್ಲ ಅವಾಂತರ ನಡೆದಾಗ ರಾಣಿಯ ಪಾತ್ರ ವೇನು ? ಎಲ್ಲಿದ್ದಾಳೆ ? ಎಂದು ಸೋಜಿಗ ಪಡುತ್ತಿದ್ದಂತೆ, ರಾಣಿಯ ನಿವಾಸವು, ವೈರಿಗಳಿಗೆ ಗೋಚರಿಸದಂತೆ ಅದರ ಪ್ರವೇಶ ದ್ವಾರವನ್ನು ಮುಚ್ಚಲು ಕಲ್ಲು-ಹರಳು ಇಟ್ಟು ಮಣ್ಣು ಮೆತ್ತಿದ್ದು ಲಕ್ಷಕ್ಕೆ ಬಂದಿತು. ಕೆಲಸಗಾತಿಯರ ಮುಂದಾಲೋಚನೆಯನ್ನು ಮೆಚ್ಚಿಕೊಳ್ಳಲೇ ಬೇಕಾಯಿತು.

ಹೊಸ ಇರುವೆಗೂಡು ಕಟ್ಟುವಾಗ, ವೈರಿ, ಸನಿಹದಲ್ಲಿ ಇರುವುದು ಲಕ್ಷದಲ್ಲಿ ಇಟ್ಟುಕೊಂಡಿರಬೇಕು. ಅಂತೆಯೇ ರಾಜವಾಡೆಯಂತೆ ಭವ್ಯವಾಗಿ ಕಾಣುವ ಕಟ್ಟಡದ ಬದಲಾಗಿ ಎಲ್ಲವೂ ನೆಲದ ಅಂತರಾಳದಲ್ಲಿ ಇರುವಂತೆ ಎಚ್ಚರಿಕೆ ವಹಿಸಿದವು. ಹತ್ತಾರು ಹೆಬ್ಬಾಗಿಲ ಬದಲಾಗಿ ಎರಡೇ ಕಿರಿ

ಬಾಗಿಲು ಇಟ್ಟು ಆಕಸ್ಮಿಕ, ಗಂಡಾಂತರ ಕಾಲದಲ್ಲಿ ತಕ್ಷಣ ಅವನ್ನು ಮುಚ್ಚಲು ಬೇಕಾದ ಹರಳುಗಳನ್ನು ಹತ್ತಿರದಲ್ಲಿಯೇ ಶೇಖರಿಸಿದವು. ನೆಲಮನೆಯ ಮೇಲ್ಭಾಗದ ಹುಲ್ಲು, ಸಸ್ಯಗಳ ಆವರಣ ಹಾಗೆಯೇ ಇಡಲು ಬಿಟ್ಟಿದ್ದರಿಂದ, ಅಲ್ಲೊಂದು ಇರುವೆಯ ರಾಜ್ಯವಿದೆ, ಎಂದು ಸಂಶಯ ಪಡಲು ಆಸ್ಪದವಿಲ್ಲ ದಂತಾಯಿತು. ರಾಣಿಯನ್ನು ಹೊಸ ಕಟ್ಟಡಕ್ಕೆ ಸಾಗಿಸುವಾಗ ಅತಿ ಭದ್ರ ವಾದ ಕಾವಲು ಇರಿಸಿ ಆಕೆ, ವೈರಿಗಳ ಪಾಲಾಗದಂತೆ ಎಚ್ಚರಿಕೆ ವಹಿಸಿದವು. ಹಿಂದಿನಂತೆ ಕಸಕಡ್ಡಿ, ತಿಪ್ಪೆಯರಾಶಿ ಹಾಕುವ ಬದಲಾಗಿ, ಅವನ್ನು ದೂರ ಒಯ್ದು ನಿಸರ್ಗದಲ್ಲಿ ಪಸರಿಸಿ ಹಾಕಲಾರಂಭಿಸಿದವು. ಇವನ್ನೆಲ್ಲ ನೋಡಿ ದಾಗ, ಇರುವೆಗಳು ಪರಿಸರವನ್ನು ಸರಿಯಾಗಿ ಅರಿತುಕೊಂಡು, ಹೊಂದಿ ಕೊಳ್ಳುವಷ್ಟು ಬುದ್ಧಿಮತ್ತೆಯನ್ನು ಹೊಂದಿವೆ ಎಂದು ತಿಳಿದುಕೊಳ್ಳುವಂತೆ ಆಯಿತು. ಮಾನವನಿಗಿದ್ದ ವಿಚಾರಶಕ್ತಿ ಅವಕ್ಕೆ ಇರಲಿಕ್ಕಿಲ್ಲ. ಆದರೆ ಕೇವಲ ಹುಟ್ಟುಗುಣಗಳಿಗೆ ಅನುಸಾರವಾಗಿಯೇ ಅವು ವರ್ತಿಸುತ್ತವೆ ಎಂಬು ದರಲ್ಲಿ ಹುರುಳಿಲ್ಲ.

ವೈರಿಗಳು ಯುದ್ಧ ಹೂಡಿ ಹೊಸಬರನ್ನು ಗಂಟು ಮೂಟೆ ಕಟ್ಟಿ ಪಲಾಯನ ಮಾಡುವಂತೆ ಮಾಡಿದ್ದೇನೋ ನಿಜ. ಆದರೆ ತಮ್ಮೊಂದಿಗೆ ಒಯ್ದ ಮಕ್ಕಳು-ಮರಿಗಳನ್ನು ಏನು ಮಾಡಿದವು ? ಅವುಗಳನ್ನು ತಿಂದು ತೇಗಿರಬಹುದೇ ? ಇಲ್ಲವೇ ತಮ್ಮವರನ್ನಾಗಿ ಮಾಡಿಕೊಂಡಿರಬಹುದೇ ? ಅಷ್ಟೊಂದು ಸಾವು-ನೋವು ಅನುಭವಿಸಿದ ಕೆಲ ದಿನಗಳಲ್ಲಿಯೇ ತಮ್ಮ ಗೃಹದ ವಿಸ್ತರಣೆಯಲ್ಲಿ ತೊಡಗಿದ್ದರಿಂದ ವೈರಿಗಳ ಪೀಳಿಗೆಯನ್ನು ತಮ್ಮದ ನ್ನಾಗಿ ಮಾಡಿಕೊಂಡು ಆ ಕೆಲಸಗಾತಿಯರ ನೆರವನ್ನು ವಿವಿಧ ರೀತಿಯಲ್ಲಿ ಬಳಸಲಾರಂಭಿಸಿದವು ಎಂಬುದು ಖಂಡಿತ. ಆದರೆ ಮೋಜಿನ ಸಂಗತಿ ಎಂದರೆ, ದೈಹಿಕ ರಚನೆಯಿಂದಾಗಲಿ, ಅವುಗಳನ್ನು ನಡೆಯಿಸಿಕೊಳ್ಳುವ ರೀತಿ ಯಿಂದಾಗಲಿ, ಸ್ವಂತ ಮಕ್ಕಳನ್ನು ಪರರ ಮಕ್ಕಳಿಂದ ಬೇರ್ಪಡಿಸುವುದಂ ಅವಶ್ಯ ಮಾತು ! ಬೆಳೆಯುತ್ತಿರುವ ಮರಿಗಳು ಯಾವುದೇ ರೀತಿಯಂ ತಾರತಮ್ಯ ತೋರಿಸದಿದ್ದುದರಿಂದ ಅವಕ್ಕೆ ತಾವು ಆ ಗೂಡಿಗೆ ಸೇರಿದವಲ್ಲ ಎಂಬ ಕಲ್ಪನೆಯೇ ಬರಲಿಕ್ಕಿಲ್ಲ ಹಾಗಾದಾಗ.

ಹಿಗ್ಗಿಸಬೇಕಾದಾಗ, ಇಲ್ಲವೇ ಕೆಲಸಗಾತಿಯರ ಕೊರತೆ ಅನಿಸಿದಲ್ಲಿ ಇಂತಹ ಕಾಳಗಗಳು ಸಾಮಾನ್ಯವಿದ್ದಿರಬಹುದೇ ? ಎಂಬ ಸಂಶಯಕ್ಕೆ ಕೂಡಲೇ ಉತ್ತರ ಸಿಗಲಿಲ್ಲ. ಆದರೆ ಒಂದೇ ವಾರದಲ್ಲಿ ಕಪ್ಪು ಇರುವೆಗಳು ಈ ಸಮಸ್ಯೆಯನ್ನು ಬಗೆಹರಿಸಿದವು.

ಕಾಡಿಗೆಯ ಬಣ್ಣ ತಳೆದ ಕಟ್ಟಿರುವೆಗಳು ಅವುಗಳ ಕಡಿತದ ತೀಕ್ಷ್ಣತೆಗೂ ಪ್ರಸಿದ್ಧಿ ಪಡೆದಿವೆ. ಪೊದೆಗಳಿಂದ ಹೊರಟ ಸಾಲುಗಳ ಮೇಲೆ ಆಲಕ್ಷದಿಂದ ಕಾಲು ಇಟ್ಟರೆ, ಹತ್ತಾರು ಇರುವೆಗಳು ಏಕಕಾಲಕ್ಕೆ ಕಚ್ಚಿ ಫಾರ್ಮಿಕ ಆಮ್ಲ ವನ್ನು ಶರೀರದಲ್ಲಿ ಸೇರಿಸುವುದರಿಂದ ಮೈ ಎಲ್ಲ ಉರಿಯಲಾರಂಭಿಸುವುದು ಇದರಿಂದಾಗಿ ಚಿಕ್ಕ-ಪುಟ್ಟ ಪಶು-ಪಕ್ಷಿಗಳೆಲ್ಲ ಇವುಗಳಿಂದ ದೂರವಿರಲು ಕಲಿತು ಕೊಂಡು ಬಂದಿವೆ. ಪಠಾಣರಂತೆ ಅವು ಉತ್ತಮ ಸೈನಿಕರಾಗಲು ಯೋಗ್ಯವೆ. ವಿನಃ ಗೃಹಕೃತ್ಯದ ಕೆಲಸ ಮಾಡುವುದಕ್ಕೆ ಅಲ್ಲ. ಅಂತೆಯೇ ಸದಾಕಾಲ ಅವು ಕೆಲಸಗಾತಿಯರನ್ನು, ಗುಲಾಮರನ್ನು ಹುಡುಕಿ ಹಿಡಿದು ತರವುದರ ಲ್ಲಿಯೇ ತೊಡಗಿರುತ್ತವೆ. ಇಂಥ ಇರುವೆಗಳ ಗೂಡೊಂದು ಆಮಟೇಕಾಯಿ ಮರದ ಆಶ್ರಯದಲ್ಲಿ ಇದ್ದುದರಿಂದ ಯಾವ ಪೋಲಿ ಹುಡುಗನೂ ಹತ್ತಿರ ಸುಳಿಯುವ ಧೈರ್ಯ ತೋರಿಸುತ್ತಿರಲಿಲ್ಲ. ಗೂಡಿನ ವಿವಿಧ ದ್ವಾರಗಳಿಂದ ಎರಡು–ಮೂರು ಸಾಲುಗಳು ಹೊರಗೆ ಹೋಗುತ್ತ ಒಳಗೆ ಬರುತ್ತಲೇ ಇರುತ್ತವೆ. ಆದರೆ ಒಂದು ಮುಂಜಾನೆ, ಸಾಲುಗಳ ಬದಲಾಗಿ ಕವಾಯತಿಗೆ ನಿಂತ ಸೈನಿಕರಂತೆ ಸೇರಿದ್ದರಿಂದ ಲಕ್ಷ ಅವರತ್ತ ಹರಿಯುವಂತಾಯಿತು. ಪ್ರತಿಯೊಬ್ಬ ಸೈನಿಕನೂ, ಹಸಿದ ಹುಲಿ ಎದುರಿಗೆ ಬರುತ್ತಿದ್ದ ಹುಲ್ಲೆಯ ಮೇಲೆ ಹಲ್ಲೆ ನಡೆಸಲು, ತವಕ ಪಟ್ಟಂತೆ, ಮನೋಭಾವ ತಳೆದಿದ್ದ. ಒಮ್ಮೆ ಸರದಾರಜಿಯಂತೆ ಮೀಸೆ ತೀಡಿಕೊಂಡರೆ, ಇನ್ನೊಮ್ಮೆ ಗುರ್ಖಾನಂತೆ ತನ್ನ ಆಯುಧವಾದ ದವಡೆ ಹರಿತವಾಗಿದೆಯೇ ಎಂದು ಪರೀಕ್ಷಿಸಿದ ಇನ್ನೊಬ್ಬಾತ ಆಕ್ರಮಣದಲ್ಲಿ ಕಾಲು-ಕೈ ಕೊಡಬಾರದೆಂದು ಅದಕ್ಕೂ ಸ್ವಲ್ಪ ತರಬೇತಿ ನೀಡುವ, ಆ ಇರುವೆ ಸೈನ್ಯ ನೋಡಿದಾಗ, ಎರಡನೆ ಜಾಗತಿಕ ಯುದ್ಧದ ಅಂತ್ಯದಲ್ಲಿ ಬರ್ಲಿನ್ ನಗರವನ್ನು ವಶಪಡಿಸಿಕೊಳ್ಳಲು ಸಿದ್ಧವಾಗಿದ್ದ ಮಿತ್ರ ರಾಷ್ಟ್ರಗಳ ಸೇನೆ ನೆನಪಿಗೆ ಬಂದಿತು.

ಇರುವೆಗಳಲ್ಲೂ ಗುಪ್ತಚಾರರ ಮೂಲಕವೇ ಬಲಾಬಲಗಳನ್ನು ನಿರ್ಧರಿಸಲಾಗುತ್ತಿರಬೇಕು. ಏಕೆಂದರೆ ಎರಡು ಮೂರು ಕಟ್ಟಿರುವೆಗಳು ಎದುರು ದಿಕ್ಕಿನಿಂದ ಧಾವಿಸಿ ಬಂದು ಮೂಸೆಯ ಭಾಷೆಯಿಂದ ಏನೇನೋ ಅರುಹಿದವು. ಸರಿ, ಆಕ್ರಮಣಕ್ಕೆ ಇದೇ ನಾಂದಿಯಾಯಿತು. ಇರುವೆಯ ಸೈನ್ಯದಲ್ಲಿ ಎಲ್ಲರೂ ಸೇನಾಧಿಪತಿಗಳೇ ! ಆದ್ದರಿಂದ ಆಜ್ಞೆಯ ಅವಶ್ಯಕತೆಯಿಲ್ಲ. ಆದರೆ ಸಕಲ ಸೈನ್ಯ ಒಮ್ಮತದಿಂದ ಹೇಗೆ ನಡೆದುಕೊಳ್ಳುತ್ತದೆ, ಎಂಬುದು ಇನ್ನೂ ಗುಟ್ಟಾಗಿಯೇ ಉಳಿದಿದೆ. ಸಣ್ಣ ಇರುವೆ ಗೂಡು ಸನಿಹವಾದಂತೆ, ಸೈನ್ಯ ನಾಲ್ಕು ವಿಭಾಗವಾಗಿ ವೈರಿಯ ಕೋಟೆಯನ್ನು ಸುತ್ತುವರಿಯುತ್ತಿರುವಂತೆ, ಈ ಅಶ್ವಮೇಧದ ಸುಳಿವು ಮೊದಲೇ ಗುಪ್ತಚಾರರಿಂದ ಅರಿತುಕೊಂಡಿದ್ದ ಸಣ್ಣ ಇರುವೆಗಳು ಸಕಲ ಸಿದ್ಧತೆಗಳನ್ನು ಪೂರೈಸಿಕೊಂಡಿದ್ದರಿಂದ, ಅವೇ ಮೊದಲು ಎರಗಿ ಬಿದ್ದವು. ದೈಹಿಕವಾಗಿಯೂ, ಸಂಖ್ಯೆಯಿಂದಲೂ ವೈರಿ, ತಮಗಿಂತ ನಾಲ್ಕುಪಟ್ಟು ಬಲಾಢ್ಯವಾಗಿದ್ದರೂ, ಯುದ್ಧ ತಂತ್ರಗಳನ್ನು ಚಾಣಾಕ್ಷತನದಿಂದ ತನ್ನ ಲಾಭಕ್ಕಾಗಿ ಬಳಸಿಕೊಳ್ಳಲಾರಂಭಿಸಿದವು. ಇಬ್ಬರು, ಮೂವರು ಸೈನಿಕರು, ಹಿಂಭಾಗದಿಂದ ಕಟ್ಟಿರುವೆಯ ಮೇಲೆ ಏರಿ ಹೋಗಿ, ಅದರ ಶಕ್ತಿಯುತವಾದ ದವಡೆಗಳನ್ನಾಗಲೀ, ಬಳಸಲು ಅವಕಾಶ ನೀಡದೇ ಕಾಲುಗಳನ್ನು ಕತ್ತರಿಸಿ ಹೆಳವನನ್ನಾಗಿ ಮಾಡಿ ಬಿಡುತ್ತಿದ್ದವು. ಕಟ್ಟಿರುವೆಗಳು ಸಿಕ್ಕ ಸಣ್ಣಿರುವೆಗಳ ಗೋಣನ್ನೇ ಮುರಿದು ಹಾಕಿ ಬಿಡುತ್ತಿದ್ದವು. ಈ ಭೀಕರ ಕಾಳಗದಲ್ಲಿ ಯಾರು ಜಯಶಾಲಿಯಾಗುತ್ತಾರೆಂದು ಹೇಳುವುದೂ ಕಷ್ಟವಾಗುತ್ತಿತ್ತು. ಆದರೆ ಎಲ್ಲಿಂದಲೋ ಇನ್ನೊಂದಿಷ್ಟು ಕಟ್ಟಿರುವೆಗಳು ಬಂದು ಯುದ್ಧದಲ್ಲಿ ಪಾಲ್ಗೊಂಡಿದ್ದರಿಂದ ಸಣ್ಣಿರುವೆ ಶರಣಾಗತವಾಗಿ ಕಾಲಿಗೆ ಬುದ್ಧಿ ಹೇಳಲೇಬೇಕಾಯಿತು. ನಂತರ ಬಂದ ಇರುವೆಗಳ ತಂಡ, ಕಾದಿಟ್ಟ ಸೈನ್ಯದ ತುಕಡಿಯೇ ಇಲ್ಲವೇ ಕಟ್ಟಿರುವೆಯ ವಿಚಿತ್ರ ಗೂಡಿನ ದಳವೇ ? ಎಂದು ತೀರ್ಮಾನಿಸಲಾಗಲ್ಲ.

ವಿಜಯಶಾಲಿಯಾದ ಸೈನ್ಯ ಸಣ್ಣಿರುವೆಯ ಗೂಡಿಗೆ ದಾಳಿಯಿಡಲು ಹೊರಟಿತು. ಆದರೆ ಇದಕ್ಕೂ ಪೂರ್ವದಲ್ಲಿಯೇ ಹೆಚ್ಚಿನ ಪ್ರವೇಶದ್ವಾರಗಳನ್ನೆಲ್ಲ ಕಲ್ಲು-ಮಣ್ಣಿನಿಂದ ಮುಚ್ಚಿಬಿಟ್ಟಿದ್ದರಿಂದ ಬೇರೊಂದು ಪ್ರವೇಶ

ದ್ವಾರ ರಚಿಸಿ, ಒಳಗೆ ಹೊಕ್ಕಬೇಕಾಯಿತು. ಅಲ್ಲಿ ಇದ್ದ ಆಯಾ, ದಾದಿ, ಸೂಲಗಿತ್ತಿಯರನ್ನು ಬಂಧಿಸಿ, ದವಡೆಗಳಲ್ಲಿ ಹಿಡಿದು, ತಮ್ಮ ಗೂಡಿಗೆ ಸಾಗಿಸಹತ್ತಿದರು. ಇದರ ಜೊತೆಗೆ ಮೊಟ್ಟೆ-ಮರಿಗಳನ್ನೂ ಒಯ್ಯಹತ್ತಿ ದರು. ಸಿಕ್ಕ ನಿಧಿ ಎಲ್ಲವನ್ನೂ ಒಂದೇ ಬಾರಿಗೆ ಒಯ್ಯಲಾಗದ್ದರಿಂದ, ಅವು ಹೋಗಿ ಬರುತ್ತಲೇ ಇದ್ದವು. ಯುದ್ಧದಲ್ಲಿ ಕಾಲು ಉಳುಕಿಸಿಕೊಂಡವ ರನ್ನು, ಕೈ ಮುರಿದುಕೊಂಡವರನ್ನು ತಕ್ಷಣ ಗುರುತಿಸಲು ಬರುತ್ತಿತ್ತು. ಕೆಲವು ಸೈನಿಕರಂತೂ ತಮ್ಮ ಯಶಸ್ಸಿನ ಪದಕವಾಗಿ ಸತ್ತ ಯೋಧನ ರುಂಡ ವನ್ನು ಕಾಲಿನಿಂದ ನೇತು ಬಿಟ್ಟಿದ್ದರು! ಸತ್ತ ಸೈನಿಕರ ಬಗ್ಗೆ ಯಾರೇ ಇತರರು ಅಪ್ಪಾಗಿ ಕಳವಳಪಟ್ಟಂತೆ ಇರಲಿಲ್ಲ. ಅವುಗಳಿಗೆ ಅಂತ್ಯಸಂಸ್ಕಾರ ಮಾಡುವುದಾಗಲೀ ಸಮಾಧಿ ಮಾಡುವುದಾಗಲಿ ತಮ್ಮ ಹೊಣೆಯೆಂದು ಅವು ಪರಿಗಣಿಸಿದಂತೆ ಕಾಣಲಿಲ್ಲ. ಅಷ್ಟೇ ಏಕೆ ಗಾಯಾಳುಗಳಿಗೆ ಚಿಕಿತ್ಸೆಯ ಔದಾರ್ಯವನ್ನೂ ತೋರಲಿಲ್ಲ. ರಣರಂಗದಲ್ಲಿ ಹೆಣಗಳ ರಾಶಿಯೇ ಸಂಚಯವಾಗಿತ್ತು. ಬದುಕುವ ಆಸೆಯೂ ಇಲ್ಲದೇ, ಸಾಯಲೂ ಆಗದೇ, ನರಳಾಡುವವರ ಸ್ಥಿತಿಯಂತೂ ಶೋಚನೀಯ. ಎಲ್ಲ ಕಡೆಯಿಂದಲೂ ಫೊರ್ಮಿಕ್ ಆಮ್ಲದ ವಾಸನೆ ಮೂಗಿಗೆ ಹೊಡೆಯುತ್ತಿರುತ್ತದೆ. ಸ್ವಜಾತಿಯ ವೈರತ್ವ, ಪರಜಾತಿಯದಕ್ಕಿಂತ ಕಠೋರವಾಗಿತ್ತು. ಪ್ರತಿಯೊಂದು ಇರುವೆ ಗೂಡಿಗೆ ತನ್ನದೇ ಆದ ರಾಜ್ಯ ವಿಸ್ತರಣೆ ಇರುತ್ತದೆ. ಈ ಹಕ್ಕು-ಬಾಧ್ಯತೆ ಗಳನ್ನು ಸಂರಕ್ಷಿಸಿಕೊಳ್ಳುವುದಕ್ಕಾಗಿ ಪ್ರಥಮ ಮಹಾಯುದ್ಧದಲ್ಲಿ, ಇಲ್ಲಿ ಪ್ಲಾಸಿಯ ಇರುವೆಗಳಲ್ಲಿ ನಡೆಯಿತು. ದ್ವಿತೀಯ ಮಹಾಯುದ್ಧಕ್ಕೆ ಸಬಲ ಕಾರಣಗಳಾವುವೂ ಇರದಿದ್ದ ಹೆಚ್ಚಿನ ನಿರೀಕ್ಷೆಯನ್ನು ಪ್ರಾರಂಭಿಸಿದಾಗ ಸತ್ಯ ಸಂಗತಿಗಳು ಬೆಳಕಿಗೆ ಬರಲಾರಂಭಿಸಿದವು. ಕಟ್ಟಿರುವೆಗಳು ಸಾಮ್ರಾಜ್ಯಶಾಹಿ ಆಂಗ್ಲರಿದ್ದಂತೆ. ಅವು ಬೇಕಾದಷ್ಟು ಯುದ್ಧಗಳನ್ನು ಹೂಡಿ ಗೆಲ್ಲಬಹುದು. ಆದರೆ ನಿತ್ಯದ ಗೃಹಕೃತ್ಯಗಳಿಗಾಗಿ ಕೆಲಸದಾಳುಗಳ ದೊಡ್ಡ ಸೈನ್ಯ ಅವಕ್ಕೆ ಬೇಕೆ ಬೇಕು. ಹಿಂದೆ ಕತ್ತಲೆಯ ಒಂದು ಆಂಗ್ಲ ಕುಟುಂಬವೊಂದರಲ್ಲಿ ನೂರರಿಂದ ನೂರಾಹತ್ತು ಸೇವಕರಿರುತ್ತಿದ್ದರೆಂದು ಇತಿಹಾಸ ಸಾರಿ ಹೇಳು ತ್ತದೆ. ಕಟ್ಟಿರುವೆಗಳಿಗೆ ಇಂಥ ಪಂಗಡ ಇಟ್ಟುಕೊಳ್ಳುವುದು ಅಭಿಮಾನ- ಗೌರವಗಳಿಗಿಂತ, ಅಸ್ತಿತ್ವದ, ಬದುಕಿನ ಸಮಸ್ಯೆ. ಆದರೆ ಅವುಗಳ ಸಮಾಜ

ದಲ್ಲಿ ಸಂಬಳಕ್ಕಾಗಿ ದುಡಿಮೆಯ ಆಳು ಸಿಗದಿದ್ದರಿಂದ, ಯುದ್ಧ ಹೂಡಿ, ಸೆರೆಯಾಳುಗಳನ್ನು ಹಿಡಿದು ತಂದು, ಗುಲಾಮರನ್ನಾಗಿ ಇರಿಸಿಕೊಳ್ಳಬೇಕಾಗುತ್ತದೆ. ಪ್ರಾಚೀನಕಾಲದಲ್ಲಿ ಈಜಿಪ್ತದ ರಾಜರು, ದುಡಿಸುವುದಕ್ಕಾಗಿಯೇ ಖರೀದಿಸುವ ಗುಲಾಮರು, ಕೇವಲ ಸುಖೋಪ-ಭೋಗಕ್ಕಾಗಿಯೇ ಅರಬರು ಕೊಳ್ಳುತ್ತಿದ್ದ ಹೆಣ್ಣು ಗುಲಾಮರು, ನಿತ್ಯಕೆಲಸಗಳಿಗಾಗಿ ಅಮೇರಿಕನ್ನರು ಕರೆತಂದ ನೀಗ್ರೋ ಗುಲಾಮರಿಗೂ ಇರುವೆ ಗುಲಾಮರಿಗೂ ಯಾವ ಹೋಲಿಕೆಯೂ ಇಲ್ಲ.

ಕರಿಯಿರುವೆಗಳು ಯುದ್ಧದಲ್ಲಿ ಬಂಧಿಸಿ ತಂದ ಇರುವೆಗಳನ್ನು ಮೊದಲು ಅಡಿಗೆ ಮನೆಗೆ ಸಾಗಿಸುತ್ತವೆ. ಅಲ್ಲಿ ಅವುಗಳಿಗೆ ತಿಂಡಿ, ಮಿಠಾಯಿಗಳನ್ನಿತ್ತು, ಸತ್ಕರಿಸಿ, ವಿರಮಿಸಲು ಬಿಡಲಾಗುತ್ತದೆ. ಮೊಟ್ಟೆ-ಮರಿಗಳನ್ನು ಶಿಶುವಿಹಾರಗಳಿಗೆ ಸಾಗಿಸಲಾಗುತ್ತದೆ. ಅಲ್ಲಿ ಅವುಗಳ ಸ್ವಚ್ಛತೆ, ಲಾಲನೆ-ಪಾಲನೆಗೆ ಪ್ರಾರಂಭವಾಗುತ್ತದೆ. ಕಟ್ಟಿರುವೆ ಮತ್ತು ಸಣ್ಣಿರುವೆಗಳ ಸಂತತಿಯ ಆರೈಕೆಯನ್ನು ಒಂದೇ ಬಗೆಯಲ್ಲಿ ಮಾಡಲಾಗುತ್ತದೆ. ಅದರಂತೆ ಸೆರೆ ಹಿಡಿದು ತಂದ ಕೆಲಸಗಾತಿಯರಿಗೆ ಯಾವ ತಾರತಮ್ಯ-ಪಕ್ಷಪಾತಗಳನ್ನು ತೋರಿಸದೇ ಗೂಡಿನ ಸದಸ್ಯರಂತೆಯೇ ನಡೆಸಿಕೊಳ್ಳಲಾಗುತ್ತದೆ. ಖೆಡ್ಡಾದಲ್ಲಿ ಸೆರೆಹಿಡಿದ ಕಾಡಾನೆಗಳನ್ನು, ಪಳಗಿಸಿದ ಆನೆಗಳು, ಹೊಸ ವಾತಾವರಣಕ್ಕೆ ಹೊಂದಿಕೊಳ್ಳಲು ತರಬೇತಿ ನೀಡುವಂತೆ, ಗೂಡಿನ ನುರಿತ ಕೆಲಸಗಾತಿಯರು ಆಗಂತುಕರಿಗೆ ಗೃಹಕೃತ್ಯದ ಪರಿಚಯ ಮಾಡಿಸಿಕೊಡುತ್ತಾರೆ. ಅವು ಬಲುಬೇಗ ಯಾರಿಗೆ ಚಹ, ಯಾರಿಗೆ ಚಪಾತಿ, ಯಾರಿಗೆ ಕಾಫಿ, ಯಾರಿಗೆ ಕಷಾಯ ಎಂಬ ವಿವರಗಳನ್ನು ಅರಿತು ಅದರ ಪ್ರಕಾರ ಚಾಚೂ ತಪ್ಪದೇ ಸೇವೆಗೆ ಸಿದ್ಧರಾಗಿ ಬಿಡುತ್ತವೆ. ಹೊಸ ಗೂಡಿನಲ್ಲಿ ವಿಪುಲವಾದ ಆಹಾರ ಮತ್ತು ಸಂರಕ್ಷಣೆಗಳು ಇರುವುದರಿಂದ ಗುಲಾಮವರ್ಗ ಪಲಾಯನ ಮಾಡುವ ಯತ್ನಕ್ಕೆ ಹೋಗುವುದಿಲ್ಲ. ಈ ಗುಲಾಮ ಕೆಲಸಗಾತಿಯರು ಇಲ್ಲದಿದ್ದರೆ, ಗೂಡಿನಲ್ಲಿ ವಿಪುಲ ಆಹಾರವಿದ್ದರೂ ಕಟ್ಟಿರುವೆಗಳು ಹಸಿವಿನಿಂದ ಸಾಯುತ್ತವೆ. ತಮ್ಮವರ ಗೂಡಿನ ಮೇಲೆ ಹಲ್ಲೆ ನಡೆಸಲು ಹೊರಟಿರುವ ಸೈನಿಕರ ಬೇಕು-ಬೇಡಗಳನ್ನು ಗುಲಾಮ ಇರುವೆಗಳೇ ಪೂರೈಸು

ವುದು ಮೋಜಲ್ಲವೇ ? ಹೊಸ ಗುಲಾಮರನ್ನು ಹೊತ್ತು ತಂದಾಗಲೂ, ಅವುಗಳನ್ನು ಸ್ವಾಗತಿಸಿ, ತರಬೇತಿ ಕೊಡಲೂ ಇವೇ ಮುಂದಾಗಬೇಕು. ತಮ್ಮ ಸೇವಕ ವರ್ಗವನ್ನು ಹೇಗೆ ನಡೆಯಿಸಿಕೊಳ್ಳಬೇಕು, ಎಂದು ಮಾನವನು ಈ ಇರುವೆಗಳಿಂದ ಕಲಿಯಬೇಕು.

# 22. ಗೋಶಾಲೆ

ಹೂವಿಲ್ಲದ ಗುಲಾಬಿ ಗಿಡವನ್ನು ಕೆಲಸಗಾತಿಯರು ಹತ್ತಿ ಇಳಿಯುವುದು ಕಣ್ಣಿಗೆ ಬಿತ್ತು. ಮುಳ್ಳಿರುವಲ್ಲಿ ಆಸೆಗಣ್ಣಿನಿಂದ ಹಿಂದೆ-ಮುಂದೆ ಓಡಾಡುತ್ತಿದ್ದವು. ನೋಡುತ್ತಿದ್ದಂತೆ ಒಂದೆರಡು ಮುಳ್ಳುಗಳು ಚಲಿಸಲಾರಂಭಿಸಿದವು! ಇದೆಂತಹ ಮಾಯಾವಿದ್ಯೆ ಎಂದು ವಿಸ್ಮಯ ಪಡುತ್ತಿದ್ದಂತೆ ಇನ್ನಷ್ಟು ಮುಳ್ಳುಗಳು ಓಡಲಾರಂಭಿಸಿದವು. ಸೂಕ್ಷ್ಮದರ್ಶನದಿಂದ ವೀಕ್ಷಿಸಿದಾಗ, ಅವೂ ಷಟ್‌ಪಾದಿಗಳೇ ಆಗಿದ್ದವು! ಆಫ್ರಿಕಾದ ಗೋವಿಗೆ ಇರುವ ಜೋಡಿ ಉದ್ದ ಕೋಡುಗಳು, ಇಜ್ಜೋಡಿ ರೆಕ್ಕೆಗಳನ್ನು ಹೊಂದಿ ಪುಟ್ಟ ದೆವ್ವದಂತೆ ಕಾಣುತ್ತಿದ್ದವು. ಸೊಂಡಿಲಿನಂತೆ ಉದ್ದವಾದ ಮೂತಿಯನ್ನು ಇನ್ನಷ್ಟು ಹಿಗ್ಗಿಸಿ ರೆಂಬೆಯೊಳಗಿನ ದೃವ್ಯಹೀರಲಾರಂಭಿಸಿದ್ದರಿಂದ ಇದೊಂದು ಸಸ್ಯತಗಣಿ, ಜಾತಿಗೆ ಸೇರಿದ್ದು ಅನಿಸಿತು. ಬಾಯಾರಿಕೆಯಿಂದಲೋ ರಕ್ತ ಹೀರುವ ಜಿಗಳೆಯಂತೆ ಏಕಪ್ರಕಾರವಾಗಿ ದೃವವನ್ನು ಹೀರಿಕೊಳ್ಳುತ್ತಲೇ ಇದ್ದುದರಿಂದ ಹೊಟ್ಟೆ. ಉಬ್ಬಿದ ಕಪ್ಪೆಯ ಹೊಟ್ಟೆಯನ್ನು ಹೋಲಲಾರಂಭಿಸಿತು. ಹೊಟ್ಟೆಯಲ್ಲಿ ಇನ್ನಷ್ಟು ರಸ ಹಿಡಿಸದಾದಾಗ ರಸ ಹೊರಗೆ ಸುರಿಯಿತು. ಇದಕ್ಕಾಗಿಯೇ ಕಾದುಕೊಂಡಿದ್ದ ಇರುವೆಗಳು ಅದು ಅಮೃತವೆಂಬಂತೆ ನೆಕ್ಕಲಾರಂಭಿಸಿದವು. ಸಸ್ಯತಗಣಿ, ಇನ್ನಷ್ಟು ರಸಹೀರಿ, ಮತ್ತಿಷ್ಟು ಅಮೃತವನ್ನು ಹೊರಹಾಕಲಾರಂಭಿಸಿತು. ಕಾರ್ಮಿಕ ಇರುವೆಗಳು ಒಂದಿಷ್ಟೂ ಬೇಸರಿಸದೇ ಹೊರಹಾಕಿದ ದೃವವನ್ನು ತಮ್ಮದನ್ನಾಗಿ ಮಾಡಿಕೊಳ್ಳುತ್ತಿದ್ದವು.

ಇವು ಇಷ್ಟೊಂದು ಆಸೆಯಿಂದ, ತಾಳ್ಮೆಯಿಂದ ಕಾದು, ಸೇವಿಸುತ್ತಿರುವ ಪೇಯ ಹೇಗಿರಬಹುದು ? ಎಂದು ಪರೀಕ್ಷಿಸಲು, ಒಂದು ಹನಿ ನಾಲಿಗೆಗೆ ಬಿಟ್ಟುಕೊಂಡಾಗ ಪಾನಕದಷ್ಟು ಸಿಹಿಯಾಗಿತ್ತು. ನೀರನ್ನು ಹೀರಿ ಕಾಸಿಲ್ಲದೇ ಇರುವೆಗಳಿಗೆ ಶರಬತ್ ಪೂರೈಸುವುದು ತಮಾಷೆ ಅನಿಸಿತು. ಬರುಬರುತ್ತ ವಿಲಂಬಿತವಾಗಿ ದ್ರವ ಹೊರಬರಲಾರಂಭಿಸಿದ್ದರಿಂದ ಇರುವೆಗಳು ಚಿತ್ತ ಶಾಂತತೆಯನ್ನು ಕಳೆದುಕೊಳ್ಳಲಾರಂಭಿಸಿದವು. ಸಸ್ಯಕೀಟದ ತೀರ ಸಮೀಪಕ್ಕೆ ಹೋಗಿ ಮೀಸೆಗಳಿಂದ ಬೆನ್ನು ಚಪ್ಪರಿಸಲಾರಂಭಿಸಿದವು. ಈ ಆತ್ಮೀಯ ಸ್ಪರ್ಶದಲ್ಲಿ ಅದಾವ ಚಮತ್ಕಾರವೋ ಏನೋ, ತಗಣೆ ಕೂಡಲೇ ಇರುವೆಗೆ ಪಾನಮಾಡಿಸಿತು. ಬೆನ್ನು ಚಪ್ಪರಿಸಿದಾಗೆಲ್ಲ ರಸಪಾನವನ್ನು ಪಡೆಯುತ್ತಿರುವುದು ಒಂದು ವಿಸ್ಮಯ. ಹಾಲು ಕೊಡಲು ನಿರಾಕರಿಸುವ ಗೋವಿಗೆ ನಾವು ಬೆನ್ನಿಗೆ ನೀರು ಸುರಿದು ಚಪ್ಪರಿಸುವ ದೃಶ್ಯ ನೆನಪಿಗೆ ಬಂದಿತು. ಈ ಕೀಟ, ಇರುವೆಗಳ ಗೋವು ಏಕಿರಬಾರದು ? ಎಂದು ಅನಿಸಿತು. ಗೋವು, ರಸ ನೀಡಿ ಬರಿದಾದರೂ ಇರುವೆಗಳಿಗೆ ತೃಪ್ತಿಯಾಗದ್ದರಿಂದ ಇನ್ನೊಂದು ರೆಂಬೆಗೆ ಪಯಣ ಬೆಳೆಸಿತು. ಏನಾಶ್ಚರ್ಯ ! ಇದಕ್ಕೂ ಮೊದಲು ಗುಲಾಬಿಯ ಮುಳ್ಳೆಂದು ಭಾವಿಸಿದ್ದು, ಅದೂ ಒಂದು ಇರುವೆಯ ಗೋವಾಗಿತ್ತು ! ಗಿಡದ ಮೇಲೆ ಎರಡು ಮೂರು ಸಲ ಕಣ್ಣು ಓಡಿಸಿದಾಗ ಅದೊಂದು ಗೋಶಾಲೆ ಎಂಬ ಜ್ಞಾನೋದಯವಾಯಿತು. ಕಾರೇವಾಡಿ, ಜರ್ಸಿ, ಜವಾರಿ, ನಾಟಿ, ಹೆಚ್ಚು ಹೆಡಸಿನ, ಬಂಜೆಯಾದ ಗೋವುಗಳೆಲ್ಲ ಅಲ್ಲಿದ್ದವು.

ಸೀತಾಫಲದ ಗಿಡದ ಮೇಲೆ ಜಾತ್ರೆ ನಡೆದಂತೆ ಕೆಲಸಗಾತಿಯರು ಹೋಗಿ ಬರುತ್ತಲೇ ಇದ್ದವು. ಅದರ ಎಲೆಗಳ ತಳಭಾಗದಲ್ಲಿ ಗೋವುಗಳ ಪೈರೇ ಕಟ್ಟಿ ಹಾಕಿದಂತೆ ಇತ್ತು. ಇವು ಹಿಂದಿನಂತೆ ಕೋಟುಧಾರಿಯಾಗಿ ವರ್ಣಮಯವಾಗಿರುವ ಬದಲಾಗಿ, ಶ್ವೇತಾಂಬರಿಯಾಗಿದ್ದು, ರೆಕ್ಕೆಗಳು ಕೂಡ ಪಾರದರ್ಶಕವಾಗಿದ್ದವು. ಇದಕ್ಕೂ ಹೆಚ್ಚಿನ ವಿಚಾರವೆಂದರೆ, ಗೋವಿನಂತೆ ಅವುಗಳಿಗೆ ಕೊಳವೆಯಾಕಾರದ ಸ್ತನಗಳಿದ್ದು ಅವುಗಳಿಂದಲೇ ಹಾಲು ಹರಿಯುತ್ತಿತ್ತು. ಇಲ್ಲಿ ಇರುವೆಗಳು ಒಂದನ್ನೇ ನಂಬಿ ಒಂದೇ ಸ್ಥಳ

ದಲ್ಲಿ ಕಾಯುತ್ತ ಕೂಡುವ ಬದಲಾಗಿ ಪಾತರಗಿತ್ತಿಗಳಂತೆ ಅಲ್ಲಿ ಇಲ್ಲಿ ಓಡಾಡಿ, ಯಾವುದರ ಹಾಲು ಸಿಕ್ಕರೆ ಅದನ್ನೇ ಕುಡಿದು ತೇಗುತ್ತಿದ್ದವು. ಇದರಿಂದ ಕೆಲಸಗಾತಿಯರೆಲ್ಲ ಎಲೆಯಿಂದ ಎಲೆಗೆ, ಮೇಲಿನಿಂದ ಕೆಳಗೆ ಗಸ್ತು ಹಾಕುವುದರಲ್ಲಿಯೇ ಹೆಚ್ಚಿನ ವೇಳೆ ಕಳೆಯಲಾರಂಭಿಸಿದ್ದವು. ಯುವಕರ ಚಿಕ್ಕ-ಪುಟ್ಟ ಕೀಟಲೆಗಳನ್ನು ಹುಡುಗಿಯರು ಸ್ವಾಗತಿಸುವಂತೆ, ಈ ಗೋವು ಗಳೂ ಇರುವೆಗಳ ಸಹವಾಸ ಸುಖವನ್ನು ಬರಮಾಡಿಕೊಳ್ಳುತ್ತವೆ, ಎಂದು ಅನಿಸಿತು. ಈ ಎಫಿಡ್ ಗೋವುಗಳನ್ನು ಮೊಟ್ಟೆಗಳಿಗಾಗಿ ನಾವು ಕುಕ್ಕುಟ ಸಂಸಾರ ಸಾಕುವಂತೆ ಆಶ್ರಯಿಸಿ, ಅವುಗಳು ಹೊರಗೆ ಹಾಕುವ ಪಾನೀಯ ಬಾಟ್ಲಿಗಳಲ್ಲಿ ತುಂಬಿ ಕೋಕೋ ಕೋಲಾ ಕಂಪನಿಯೊಂದಿಗೆ ಸ್ಪರ್ಧಿಸಿದರೆ ಹೇಗೆ ! ಎಂಬ ವಿಚಾರವೂ ಮಿಂಚಿ ಮಾಯವಾಯಿತು.

ಶ್ರಾದ್ಧದ ಊಟ ಮುಗಿಸಿ ಹಿಂದಿರುಗುವ ಬ್ರಾಹ್ಮಣರಂತೆ, ಹೊಟ್ಟೆ ಯುಬ್ಬಿಸಿಕೊಂಡ ಕೆಲಸಗಾತಿಯರು, ಕಾಲು ಜಾರಿ ನೆಲಕ್ಕೆ ಉರುಳದಂತೆ ಎಚ್ಚರವಹಿಸಿ, ಹೆಜ್ಜೆಯ ಮೇಲೆ ಹೆಜ್ಜೆಯಿಡುತ್ತ ಗಿಡದಿಂದ ಇಳಿಯಲಾರಂಭಿ ಸಿದವು. ಅವನ್ನು ಹಿಂಬಾಲಿಸಿದ ನಾಲ್ಕಾರು ಇರುವೆಗಳು ದೈನ್ಯತೆಯಿಂದ ಏನೋ ಕೇಳುವಂತೆ, ಬೇಡುವಂತೆ ಅವುಗಳ ಕಾಲು ಮೀಸೆಗಳನ್ನು ಸ್ಪರ್ಶಿಸ ಲಾರಂಭಿಸಿದವು. ಹಸಿದ ಮಗುವಿಗೆ ಹಾಲು ಉಣಿಸುವ ಮಾತೆಯಂತೆ, ರಸವನ್ನು ಶೇಖರಿಸಿದ ಇರುವೆ, ಕಾಂಗರೂವಿನಂತೆ ಹಿಂಗಾಲ ಮೇಲೆ ಕುಳಿತು, ಪ್ರತಿ ಸಹೋದರಿಗೂ ಒಂದು ಹನಿ ಪೇಯ ಕುಡಿಸಿ ಜಾರಲೆತ್ನಿಸಿದಾಗ, ಅವು ತೃಪ್ತಿಪಡದೇ ಇನ್ನಷ್ಟು ಬೇಡಿದವು, ಕಾಡಿದವು. ಅದರಿಂದ ಯಾವ ಪ್ರಯೋಜನವೂ ಆಗದೇ, ತಮ್ಮ ದಾರಿ ಹಿಡಿದು ಹೋದವು. ಹಾಲು ಹಿಂಡಿ ಹಿಂದಿರುಗುವ ಪ್ರತಿ ಕೆಲಸಗಾತಿಯಿಂದ ಇದೇ ರೀತಿಯ ಕರವಸೂಲ ಮಾಡುವುದರಿಂದ ಅಲ್ಪ ಸಮಯದಲ್ಲೆ ಅವುಗಳ ಭೋಜನ ಮುಗಿದು ಬಿಟ್ಟಿತು. ಮಧು ಸಂಚಯ ಕೈಕೊಂಡವುಗಳು ಮಾತ್ರ ಎಲ್ಲರ ಕಣ್ಣಿಗೂ ಮಾಯವಾಗಿಬಿಟ್ಟಿದ್ದವು. ಸಹೋದ್ಯೋಗಿಗಳ ಕೀಟಲೆಯಿಂದಲೋ, ಕಳ್ಳ-ಕಾಕ ಇರುವೆಗಳ ಭಯದಿಂದಲೋ ಶೀಘ್ರಗತಿಯಲ್ಲಿ ಗೂಡು ಸೇರುತ್ತಿರು ವುದು ಅನಂತರ ಗೋಚರಿಸಿತು. ಅಲ್ಲಿಯ ಹೆಬ್ಬಾಗಿಲು, ಕಾಲುದಾರಿ, ಕಳ್ಳ ದಾರಿಗಳನ್ನು ಹಿಂದೆ ಹಾಕಿ ಗೋದಾಮು ಸೇರಿತು.

ಈ ಇರುವೆಗಳ ಸಂಗ್ರಹಾಲಯ, ಬೇರೆ ಜಾತಿಯವುಗಳಿಗಿಂತ ತೀರ ಭಿನ್ನವಾಗಿತ್ತು. ಅಲ್ಲಿ ಡಬ್ಬಿ-ಭರಣಿಗಳಿಲ್ಲ, ಕಾಳುಕಡಿಗಳ ಚೂರಿನ ರಾಶಿಯಿಲ್ಲ. ಹತ್ತಾರು ನವಯುವತಿ ಇರುವೆಗಳು, ಹೊಟ್ಟೆಯುಬ್ಬಿಸಿಕೊಂಡು, ಚಲಿಸಲಾರದೇ ಜಡಭರಿತರಾಗಿ ನಿಂತಿದ್ದವು. ಸಂಗ್ರಾಹಕ ಇರುವೆಗಳು ಅಗುಬಗೆಯಿಂದ ಒಳಬಂದು ಈ "ಹೊಟ್ಟೆ ಡುಬ್ಬಕ್ಕ"ಗಳ ಬಾಯಿಗೆ ಬಾಯಿ ಹಚ್ಚಿ ಮಧುವನ್ನು ಅವುಗಳ ಹೊಟ್ಟೆಗೆ ಸೇರಿಸಿ ತಿರುಗಿ ತಮ್ಮ ಕೆಲಸಕ್ಕೆ ಹಿಂದಿರುಗಿದವು. ಹತ್ತಾರು ಇರುವೆಗಳು ಹೀಗೆ ಮಾಡಿದ್ದರಿಂದ ಅವುಗಳ ಹೊಟ್ಟೆ ಇನ್ನಷ್ಟು ಉಬ್ಬಿಕೊಂಡಿತು. ಹಿಂದಿನ ಇರುವೆಯರಸಿ ಭಾವೀ ಪೀಳಿಗೆಯನ್ನು ಧರಿಸಿ ಭವ್ಯವಾಗಿ ಕಂಡರೆ ಇವು ಜೀವಂತ ಅಮೃತವನ್ನು ತುಂಬಿಕೊಂಡ ಕುಂಭಗಳಾಗಿದ್ದವು! ಸಾಗರ, ನದಿಗಳನ್ನು ಹೊಟ್ಟೆಯಲ್ಲಿ ಧರಿಸುವ ಪ್ರಸಂಗಗಳು ಪುರಾಣದ ಕಥೆಗಳಷ್ಟೇ ಸೀಮಿತವೆಂದುಕೊಂಡವನಿಗೆ ಇಂತಹ ಒಂದು ವಿಚಿತ್ರವೂ ಜಗತ್ತಿನಲ್ಲಿ ಇರಬಹುದೆಂದು ಅನಿಸಿರಲಿಲ್ಲ. ಗೂಡಿನ ಕೆಲಸಗಾತಿಯರು ಹಸಿದಾಗೊಮ್ಮೆ ಗೋದಾಮಿಗೆ ಬಂದು, ಕೇವಲ ಸ್ಪರ್ಶದಿಂದಲೇ ರಸಪಾನದ ಅಭಿಲಾಷೆ ವ್ಯಕ್ತಪಡಿಸಿ, ಕುಂಭಿನಿಗಳು ದಯಪಾಲಿಸಿದ ಗುಟುಕನ್ನು ಸ್ವೀಕರಿಸಿ ಹೊರಟು ಹೋಗುತ್ತಿದ್ದವು. ಈ ದ್ರವವನ್ನು ಸಂಗ್ರಹಿಸಿದ ಇರುವೆಗಳು ಕೂಡ ತಮಗೆ ಬೇಕಾದ ರಸವನ್ನು ಈ ಬೃಹತ್ ಕುಂಭಿನಿ ಇರುವೆಗಳಿಂದಲೇ ಪಡೆಯುತ್ತಿದ್ದವು. ಇದಕ್ಕೂ ಹೆಚ್ಚಿನ ಮೋಜಿನ ಸಂಗತಿಯೆಂದರೆ, ಗೋದಾಮು ಇರುವೆಗೆ ಬೇಕಾದ ಆಹಾರವನ್ನು ಕೆಲಸಗಾತಿಯರು ಪಡೆದು, ತಿರುಗಿ ಅವಳಿಗೆ ಉಣಿಸಬೇಕಾಗುತ್ತದೆ. ಇದರಿಂದ ಸಿಹಿ ರಸ ಸಂಚಯವಾಗುವ ಸ್ಥಳ ಹೊಟ್ಟೆಯಿಂದ ಬೇರೆಯಾಗಿದೆ ಅನಿಸುತ್ತದೆ.

ಚಳಿಗಾಲದ ಪ್ರಾರಂಭದಲ್ಲಿ, ಕೆಲಸಗಾತಿಯರು, ಎಫಿಡ ಹಾಲನ್ನು ಹಿಂಡುವ ಬದಲಾಗಿ, ಎಫಿಡ ತಗಣಿಯ ಮರಿಗಳನ್ನು ತಮ್ಮವೇ ಎಂಬಂತೆ ದವಡೆಗಳಲ್ಲಿ ಕೊಂಡೊಯ್ದು ಗೂಡಿನಲ್ಲಿ ಸಂಗ್ರಹಿಸಲಾರಂಭಿಸಿದವು. ಇವುಗಳಿಂದ ಸಸ್ಯ ತಗಣಿಯ ಬದಲಾಗಿ ಇರುವೆಗಳು ಹೊರಬರುವಂತೆ ಮಾಡುವ ಮೋಡಿ-ಯಕ್ಷಿಣಿ ಏನಾದರೂ ಇದೆಯೇ ಎಂದು ಕುತೂಹಲ ಕೆರಳಿ ಮುಂದಿನ

ಪ್ರಗತಿಯನ್ನು ಪ್ರತಿದಿನ ವೀಕ್ಷಿಸುವಂತೆ ಮಾಡಿತು. ಗೂಡಿನಲ್ಲಿ ಎಫಿಡಾದ ಕೊಟ್ಟಿಗೆಯೆಂದು ತಯಾರಾಯಿತು. (ಗಾರೆ) ಕೆಲಸಗಾತಿಯರು ಮುಂದಾ ಲೋಚನೆಯಿಂದ ಈ ಗುಹಾಲಯುವನ್ನು ಎತ್ತರವಾದ ಬೇರಿನ ಸುತ್ತ ಅಗೆದಿ ದ್ದರು. ಹೊತ್ತು ತಂದ ಮೊಟ್ಟೆ ಮರಿಗಳನ್ನು ಈ ಬೇರಿನ ಮೇಲೆಯೇ ಶೇಖರಿಸಲಾಯಿತು. ಚಿಕ್ಕ-ಪುಟ್ಟ "ಇರುವೆಗಳ ದನಕರುಗಳು" (cow-ants) ಬೇರಿನೊಳಗಿನ ದ್ರುವವನ್ನು ಹೀರಿಕೊಂಡು, ಇರುವೆಗಳಿಗೆ ಅವುಗಳ ಪಾನವನ್ನು ಒದಗಿಸಲಾರಂಭಿಸಿದವು. ಇದರಿಂದ ಗೋವಿಗೆ ಆಹಾರದ ಮತ್ತು ಇರುವೆಗೆ ಪಾನೀಯದ ಪೂರೈಕೆ ಒಂದಿಷ್ಟೂ ಚ್ಯುತಿ ಇಲ್ಲದೇ ನಡೆಯು ಲಾರಂಭಿಸಿತು. ಮಾನವನಿಗೂ ಇಂತಹ ದನಕರುಗಳನ್ನು ಸಾಕಲು ಸಾಧ್ಯ ವಿದ್ದಿದ್ದರೆ ಎಷ್ಟು ಚೆನ್ನಾಗಿರಂತ್ತಿತ್ತು ! ಮೇವಿಗಾಗಿ ಹಣ ಸುರಿಯಬೇಕಾಗಿರ ಲಿಲ್ಲ. ಡೈರಿ ಕೆಲಸಗಾರರ ಸಂಪಿನ ತಾಪತ್ರಯವಿರುತ್ತಿರಲಿಲ್ಲ.

ಹಸುಗಳ್ಳರಿಗೆ ಇರುವೆಯ ಲೋಕದಲ್ಲಿಯೂ ಬರಗಾಲವಿಲ್ಲ. ನೊಣ-ಜೇನ್ನೊಣಗಳು ಸಿಹಿ-ತಿಂಡಿ ಆಸೆಯಿಂದ ಆಗಾಗ ಕೊಟ್ಟಿಗೆಯನ್ನು ಲೂಟಿ ಮಾಡುವುದು ಸ್ವಾಭಾವಿಕ. ಅದರಲ್ಲಿಯೂ ಚಳಿಗಾಲದಲ್ಲಿ ಸಂಗ್ರಹಿಸಿದ ಆಹಾರ ತೀರಿದಾಗ, ಹೊಸ ಆಹಾರ ಮುಗಿದಾಗ, ಹಸಿದ ಕೀಟಗಳು ಇರುವೆ ಗೂಡಿನ ಮೇಲೆ ದಾಳಿಮಾಡುತ್ತಿರುತ್ತವೆ. ಈ ಗಝನಿ ಮಹಮ್ಮದರ ದಾಳಿಯನ್ನು ತಡೆಗಟ್ಟಲು, ತಮ್ಮ ಗೋವುಗಳು ಹೊರ ಜಗತ್ತಿಗೆ ಕಾಣದಂತೆ ಕಲ್ಲು, ಮಣ್ಣು, ಕಸ-ಕಡ್ಡಿ, ಒಣ ಎಲೆಗಳನ್ನು ಬಳಸಿ, ಕೆಲಸಗಾತಿಯರು ಗೋಡೆಯನ್ನು ಕಟ್ಟುತ್ತಾರೆ. ಇದರಿಂದ ಗಾಳಿ-ಬೆಳಕು ಗೂಡಿನೊಳಗೆ ಬಾರದೇ ಇರುವೆಗಳಿಗೂ ಹೆಚ್ಚಿನ ಸಂರಕ್ಷಣೆ ಸಿಗುತ್ತದೆ. ಕೆಲವೇ ಬೇರುಗಳ ಮೇಲೆ ದನಗಳು ಮೇದು ಆಹಾರ ಹೀರಿ ಹೀರಿ ಸತ್ವಹೀನ ಮಾಡುವುದು ಸಹಜ. ಅಂತಹ ಸಮಯದಲ್ಲಿ ಹೊಸ ಇರುವೆಗಳು ಎಲೆಗಳನ್ನು ಹೊತ್ತು ತಂದು, ಅವುಗಳ ಮೇಲೆ ಗೋವುಗಳನ್ನು ಸ್ಥಳಾಂತರಿಸುತ್ತವೆ. ಒಂದೇ ಒಂದು ಪರ್ಣದ ಮೇಲೆ ನೂರಿನ್ನೂರು ಗೋವುಗಳನ್ನು ಸಾಕಬಹುದೆಂದರೆ ಅವುಗಳ ಆಳತೆಯು ಅಂದಾಜು ಬರುವಂತಿದೆ. ಚಳಿಯ ತೀವ್ರತೆ ಕಡಿಮೆ ಯಿದ್ದ ದಿನಗಳಲ್ಲಿ ಎಫಿಡ ಸಂಸಾರವನ್ನು ಬೆಚ್ಚಗಿಡಲು, ಅವನ್ನು ಹೊತ್ತು

ಇತರ ಇರುವೆಗಳು ಬಂಡೆಗಲ್ಲುಗಳ ಮೇಲೆ ಅಲೆಯುವದು ಸೋಜಿಗವನ್ನು ಉಂಟುಮಾಡುತ್ತದೆ.

ಚಳಿಗಾಲ ಕಳೆಯಿತೆಂದರೆ ಇರುವೆಗಳಿಗೂ ಅವುಗಳ ದನಕರುಗಳಿಗೂ ಒಂದು ಯುಗ ಕಳೆದಂತೆ. ವಸಂತ ಋತುವಿನಲ್ಲೂ ಮೇಯುವುದಕ್ಕಾಗಿ ಗೂಡಿನ ಹೊರಗೆ ಹೊತ್ತು ತಂದ ಗೋವುಗಳು ನೈಸರ್ಗಿಕ ಗೋವುಗಳಿಗಿಂತ ದಷ್ಟಪುಷ್ಟವಾಗಿದ್ದವು. ಇದಕ್ಕೆ ಇರುವೆಗಳ ಸಂಗೋಪನ ದಕ್ಷತೆಯೇ ಮುಖ್ಯ ಕಾರಣವೆಂದು ಬೇರೆ ಹೇಳಬೇಕಾಗಿಲ್ಲ. ಎಫಿಡ್‌ಗಳು ಸಂತಾನೋತ್ಪತ್ತಿಗೆ ಹೆಸರುವಾಸಿ ಪ್ರತಿ ಹೆರೆಗೆಯಲ್ಲೂ ಮಕ್ಕಳ ಉತ್ಪಾದನೆಯ ಯಂತ್ರದಂತೆ ನೂರಾರು ಮಕ್ಕಳಿಗೆ ಜನ್ಮಕೊಡುವ ಈ ಕೀಟ, ಒಂದು ವರ್ಷದಲ್ಲಿ ಇಪ್ಪತ್ತ ಒಂದು ತಲೆಮಾರುಗಳ ಇರುವೆ ಸೈನ್ಯ ತಯಾರಿಸಬಲ್ಲದು. ಚಳಿಗಾಲದಲ್ಲಿ, ಗಾಳಿ-ಚಳಿ, ಆಹಾರದ ಅಭಾವದಿಂದಾಗಿ ಅವು ಒಂದೆರಡು ತಲೆಮಾರುಗಳನ್ನು ಮಾತ್ರ ಅಸ್ತಿತ್ವದಲ್ಲಿ ತರುತ್ತವೆ. ಅದೇ ಅವಧಿಯಲ್ಲಿ ಇರುವೆ ಗೂಡಿನಲ್ಲಿ ಇರುವವು, ಸುಲಭವಾಗಿ ಐದಾರು ತಲೆಮಾರುಗಳನ್ನು ಹೊರಹಾಕುತ್ತವೆ. ಇವುಗಳ ಸಂತತಿ ಅತಿಯಾಗಿ ಬೆಳೆದು ಅವುಗಳನ್ನು ಸಾಕಿ ಸಲಹುವುದು ಕಷ್ಟ ದಾಯಕವಾಗಿ ಪರಿಣಮಿಸಿದಾಗ, ಒಂದು ಭಾಗವನ್ನು ಉಗ್ರಾಣಕ್ಕೆ ಸಾಗಿಸ ಲಾಗುತ್ತದೆ. ಪಾಶ್ಚಿಮಾತ್ಯರಲ್ಲಿ ಹಾಲು ಹಿಂಡುವ ದನಗಳು ಬೇರೆ, ಮಾಂಸ ನೀಡುವವು ಬೇರೆ. ಇದೇ ಪದ್ಧತಿಯನ್ನು ಇರುವೆಗಳು ಲಕ್ಷಾಂತರ ವರ್ಷ ಗಳಿಂದ ಪಾಲಿಸುತ್ತ ಬಂದದ್ದು ಸೋಜಿಗವಲ್ಲವೇ ? ಸಕ್ಕರೆ ಮತ್ತು ಸಸ್ಯ ಆಹಾರಗಳನ್ನೇ ಅಧಿಕವಾಗಿ ಬಳಸುವ ಇರುವೆಗಳಿಗೆ, ಮಾಂಸಾಹಾರ ತ್ಯಜ್ಯ ವಲ್ಲ. ಎಫಿಡ್‌ಗಳ ವಸತಿ ವಿಪರೀತವಾಗಿ ಬೆಳೆದಾಗ, ಇರುವೆಗಳು ಯಥೇಷ್ಟ ವಾಗಿ ಅವುಗಳ ಮೊಟ್ಟೆ-ಮರಿಗಳನ್ನು ತಿಂದು ತೇಗುತ್ತವೆ.

ವಿವಿಧ ಬಣ್ಣಗಳ ಎಲೆಗಳನ್ನು ತಳೆದ ಕ್ರೋಟನ್ ಗಿಡದ ಮೇಲೆ ಎಫಿಡ, ಇಲ್ಲವೇ ಬೇರಾವ ಇರುವೆ-ಗೋವುಗಳು ಇಲ್ಲದಿದ್ದರೂ ಕೆಲಸಗಾತಿ ಇರುವೆಗಳು ಏಕಪ್ರಕಾರವಾಗಿ ಹತ್ತಿ ಇಳಿಯುತ್ತಿದ್ದವು. ಲಕ್ಷಗೊಟ್ಟು ನೋಡಿದಾಗ, ಅದರ ಬೊಡ್ಡೆ, ಮತ್ತು ಪರ್ಣಗಳ ಮೇಣ ಕೀಟಗಳು ವಿಪುಲ

ವಾಗಿದ್ದವು. ಇವುಗಳಿಗೆ ರೆಕ್ಕೆಗಳಿರದ್ದರಿಂದ ಮತ್ತು ಸ್ತಬ್ಧವಾಗಿದ್ದರಿಂದ ಜೀವವಿದೆಯೋ ಎಂದು ಯೋಚಿಸುವಷ್ಟು ತೆಪ್ಪಗಿದ್ದವು. ಹೊರಮೈ ಎಲ್ಲ ಹಿಮದಂತಿದ್ದ ಬಿಳಿ ಮೇಣದಿಂದ ಬಳಿಸಲ್ಪಟ್ಟಿದ್ದರಿಂದ ಅವುಗಳು ಷಟ್‌ಪಾದಿಗಳೆಂದು ಸುಲಭವಾಗಿ ತಿಳಿಯುವಂತಿರಲಿಲ್ಲ. ಆಗೊಮ್ಮೆ, ಈಗೊಮ್ಮೆ, ಅಲ್ಲೊಂದು, ಇಲ್ಲೊಂದು, ಆಹಾರದ ಅಭಾವದಿಂದಲೋ ಜನವಸತಿ ವಿಪರೀತ ಹೆಚ್ಚಾಗಿದ್ದರಿಂದಲೋ, ಅತ್ಯಲ್ಪವಾಗಿ ಚಲಿಸಿ ಅಲ್ಲಿ ಸ್ಥಾಪಿತವಾಗುತ್ತಿದ್ದವು. ಕಾರ್ಮಿಕ ಇರುವೆಗಳೋ, ಅವು ವಿಸರ್ಜಿಸುವ ಸಿಹಿದ್ರವ್ಯಕ್ಕಾಗಿ ಕಾತರತೆಯಿಂದ ಕಾಯುತ್ತ ಗಸ್ತು ಹಾಕುತ್ತಿದ್ದವು. ಹತ್ತು ಪಟ್ಟು ದೊಡ್ಡದಾಗಿದ್ದ ಇರುವೆಗಳು ತುಳಿದು ಓಡಾಡಿದರೂ ಮೇಣ ಕೀಟಗಳು ಯಾವ ಪ್ರತಿಕ್ರಿಯೆಯನ್ನೂ ತೋರಿಸುತ್ತಿರಲಿಲ್ಲ. ಇದರಿಂದ ಅವಕ್ಕೆ ಯಾವುದೇ ರೀತಿಯ ಹಾನಿ ಆದಂತೆ ಅನಿಸಲಿಲ್ಲ. ಬಹುಶಃ ಕೆಲಸಗಾತಿ ಇರುವೆಗಳು ಅವಕ್ಕೆ ಒಂದಿಷ್ಟೂ ನೋವಾಗದಂತೆ ಓಡಾಡುವುದನ್ನು ರೂಢಿಸಿಕೊಂಡಿರಬೇಕು. ಕೆಲವೊಮ್ಮೆ ಕೆಲವು ದುಂಬಿ ಮತ್ತು ಪಾತರಗಿತ್ತಿಗಳು ಇರುವಲ್ಲಿ ಇರುವೆಗಳು ಸುಳಿದಾಡಿಕೊಂಡು ಇರುವುದು ಉಂಟು. ಬಹುಶಃ ಅವುಗಳೂ ಒಂದಿಲ್ಲೊಂದು ರೀತಿಯಲ್ಲಿ ಆಹಾರ ಒದಗಿಸುತ್ತಿರಬಹುದು.

ದಾಸಾಳಗಿಡದ ಮೇಲೆ, ಸಂಗ್ರಾಹಕ ಇರುವೆಗಳು ಬೊಡ್ಡೆಯಿಂದ ಎಲೆ ಚಿಗಿದುಕೊಂಡ ಸ್ಥಳದಲ್ಲಿ ಏನೋ ಹುಡುಕುವಂತೆ ಓಡಾಡುತ್ತಿದ್ದವು. ಇರುವೆಯನ್ನು ಆಕರ್ಷಿಸುವ ಯಾವ ಪದಾರ್ಥವೂ ಅಲ್ಲಿರಲಿಲ್ಲ. ತೀರ ಹತ್ತಿರದಿಂದ ಪರೀಕ್ಷಿಸಿದಾಗ ಅಲ್ಲೆರಡು ಉಬ್ಬುಗಳಿದ್ದವು. ಅವುಗಳಿಂದ ತೀರ ಅಲ್ಪ ರಸ ಬಂದಂತಿತ್ತು. ಇರುವೆಯೊಂದು ನಾಲಿಗೆಯನ್ನು ಹೊರ ಚಾಚಿ ಅದನ್ನು ನೆಕ್ಕಿತು. ನೂರು ಸಲ ನೆಕ್ಕಿದರೂ ಅದು ಒಂದು ಹನಿಗೆ ಇಳಿಯುತ್ತಿರಲಿಲ್ಲ. ಆದರೂ ಒಂದಿಷ್ಟೂ ಬೇಸರಿಸದೇ, ಪ್ರತಿ ಎಲೆಯ ಅಡಿಗೂ ಹೋಗಿ, ಸಿಕ್ಕಿದಷ್ಟು ಸ್ವೀಕರಿಸಿ, ಹೊಟ್ಟೆಯ ಭಾರ ಸ್ವಲ್ಪ ಹೆಚ್ಚು ಆದಾಗ, ಗೂಡಿನತ್ತ ಹೆಜ್ಜೆ ಹಾಕುತ್ತಿತ್ತು.

ಇನ್ನೊಂದು ಇರುವೆಗುಂಪು ಕಾಡು ಅತ್ತಿಯ ಮರವನ್ನು ಹತ್ತಿ ಇಳಿಯುತ್ತಿತ್ತು. ಆ ಎಲೆಗಳೆಲ್ಲ ಬೊಕ್ಕೆ ಎದ್ದಂತೆ ಊದಿಕೊಂಡಿದ್ದವು.

ದಾಸಾಳದ 'ಸ್ತನ'ದಿಂದ ಸಿಹಿ ಹಾಲು ಹೀರುವಂತೆ, ಈ ಗುಳ್ಳೆಗಳಿಂದ ಹೊರಸೂಸುವ ದ್ರವವನ್ನು ಕಲೆಹಾಕುತ್ತಿದ್ದವು. ಒಂದೆರಡು "ಬೊಕ್ಕೆ" ಗಳನ್ನು ಒಡೆದು ನೋಡಿದಾಗ ಅವುಗಳೊಳಗೆ ಇರುವೆ-ಗೋವಿನಂತಹ ಕೀಟ ವಾಸವಾಗಿರುವುದು ಕಂಡಿತು. ಬಹುಶಃ ಅವು ತಾವೇ ಈ ಬೊಕ್ಕೆಗಳಂತಹ ಗೂಡುಗಳನ್ನು ಮಾಡಿ ಅವುಗಳಲ್ಲಿ ವಾಸಿಸುತ್ತಿರಬೇಕು. ಮತ್ತು ಅವುಗಳ ರಸವಿಸರ್ಜನೆ, ಬೊಕ್ಕೆಗಳಿಂದ ತಟುಕುತ್ತಿರಬೇಕು.

ಕಾರ್ಮಿಕ ಇರುವೆಗಳು ಹೊತ್ತು ತಂದ ಸಿಹಿ ದ್ರವವನ್ನು ಹೊತ್ತು ನಿಂತ ಮಧುಕುಂಭಗಳಂತಿದ್ದ ಗೋದಾಮು ಕೀಟಗಳು ಗೂಡಿನ ಅತ್ಯಂತ ಬೆಲೆ ಬಾಳುವ ಸರಕು. ಆದ್ದರಿಂದ ಇವುಗಳ ಕಳವು ಆಗದಂತೆ ಸದಾಕಾಲ ಸಶಸ್ತ್ರ ಪಡೆಯ ಕಾವಲು ಇಡಲಾಗುತ್ತದೆ. ಆಕ್ರಮಣ ನಡೆದಾಗ ವೈರಿಗಳ ಕಣ್ಣಿಗೆ ಅವು ಬೀಳದಂತೆ ಸಕಲ ಪ್ರಯತ್ನವನ್ನು ಮಾಡಲಾಗುತ್ತದೆ. ಅವು ಗಳನ್ನು ಗುಪ್ತ ಕೊಠಡಿಯೊಳಗೆ ಸ್ಥಳಾಂತರಿಸಲಾಗುತ್ತದೆ. ಅವುಗಳ ಪ್ರವೇಶದ್ವಾರಗಳನ್ನು ಕಲ್ಲು, ಮಣ್ಣುಗಳಿಂದ ಮುಚ್ಚಲಾಗುತ್ತದೆ. ಇಷ್ಟಾದರೂ ಕೆಲವೊಮ್ಮೆ ವೈರಿಗಳ ಆಕ್ರಮಣದಿಂದ ಅವುಗಳನ್ನು ಸಂಪೂರ್ಣ ವಾಗಿ ಸಂರಕ್ಷಿಸಿಕೊಳ್ಳುವುದು ಅಸಾಧ್ಯವಾಗುತ್ತದೆ. ಇಂಥ ಒಂದು ಸಂದರ್ಭ ದಲ್ಲಿ ಒಂದು ಗೋದಾಮು-ಇರುವೆಯ ಹೊಟ್ಟೆ ಬಿರಿದು ಮಧುವೆಲ್ಲ ನೆಲಕ್ಕೆ ಉರುಳಿತು. ಪಾಪ ! ಕಾದ ಕೆಲಸಗಾತಿಯರಿಗೆ ನೋವಾಗಿದ್ದರೂ ಕೂಡಲೇ ಮರೆತು ರಣರಂಗದಲ್ಲಿಯೂ ಸಿಹಿ ಭೋಜನದ ಸುಖ ಅನುಭವಿಸಿದವು.

ಸಿಹಿರಸಕ್ಕಾಗಿ ವಿಪರೀತ ಆಸೆಪಡುವ ಇರುವೆಗಳೂ ಗೋದಾಮು ಇರುವೆ ಸತ್ತಾಗ ತಮ್ಮ ಎಲ್ಲ ಧೈರ್ಯ, ಸಾಹಸಗಳನ್ನು ಬಳಸಿ ಸ್ಥೈರ್ಯ ದಿಂದಿರುತ್ತವೆ. ಸದಾಕಾಲವೂ ಸ್ಥಾಯಿಯಾಗಿರುವ ಈ ಇರುವೆ, ಮೃತ ಪ್ರಾಯವಾದಾಗಲೂ ತನ್ನ ಕೆಲಸಗಾತಿಯರ ಗಮನಕ್ಕೆ ತಾರದೆ, ಯಾಂತ್ರಿಕ ವಾಗಿ ಅವಕ್ಕೆ ಸಲ್ಲುವ ಸೇವೆ ಸಲ್ಲಿಸುತ್ತಲೇ ಇರುತ್ತದೆ. ಆದರೆ ಕೊನೆಗೆ ಮೀಸೆ, ಕಾಲುಗಳು ಉದುರಿ ಬೀಳಲು ಆರಂಭಿಸಿದಾಗ ಕೆಲಸಗಾತಿಯರು ಪರಿತಪಿಸುತ್ತವೆ. ಅದರ ಉದರ ಮಧುವಿನಿಂದ ತುಂಬಿ ತುಳುಕುತ್ತಿದ್ದರೂ, ಅದಕ್ಕಾಗಿ ಇಷ್ಟೂ ಆಸೆಪಡದೇ, ಮೃತಜೀವಿಗೆ ಸಲ್ಲಬೇಕಾದ ಎಲ್ಲ ಗೌರವ–

ಸನ್ಮಾನಗಳೊಂದಿಗೆ ಸ್ಮಶಾನಕ್ಕೆ ಸಾಗಿಸಿ, ಮಣ್ಣು ಮಾಡುತ್ತವೆ. ಇರುವೆ ಈ ಹೃದಯವಂತಿಕೆ ಮಾನವನಲ್ಲಿ ಇದ್ದಿದ್ದರೆ,....ಎನಿಸಿತು. ಆತ್ಮಹತ್ಯೆ ಮಾಡಿಕೊಂಡವರ, ಬಸ್ಸು, ರೈಲ್ವೆ, ವಿಮಾನಗಳ ಅಪಘಾತಗಳಿಗೆ ಈಡಾದ ದುರ್ದೈವಿಗಳ, ಬೆಲೆಬಾಳುವ ವಸ್ತು-ಒಡವೆಗಳನ್ನು ಸುತ್ತಲಿರುವವರು ದೋಚಿಕೊಂಡು ಹೋಗುವುದು ಪ್ರತಿದಿನ ಕೇಳುವ ಕೂಗು. ಅಷ್ಟೇ ಏಕೆ, ಅಸಹಾಯಕರನ್ನು ಕುಡಿತದಿಂದ ಮತ್ತರಾದವರನ್ನು ಬರಿದುಮಾಡಿ ಕಳಿಸುವ ಹೊಸ ಪರಿಪಾಠವೂ ಇತ್ತೀಚೆಗೆ ಹೆಚ್ಚಾಗಿ ಬೆಳೆದಿದೆ. ಮಾನವನ ಸ್ವಾರ್ಥಕ್ಕೆ ಕೊನೆಮೊದಲಿಲ್ಲವೇ ?

## 23. ಹಸಿರು ಕ್ರಾಂತಿ

ಭಾಗೀರಥಿ ನದಿಯ ತೀರದಲ್ಲಿ ಕಂಡ ಒಂದು ಇರುವೆಯ ಗೂಡು, ಈ ಹಿಂದೆ ನೋಡಿದವುಗಳಿಗಿಂತ ಭಿನ್ನವಾಗಿತ್ತು. ಭೂಗರ್ಭದಲ್ಲಿ ಅಡಗಿದ ಈ ಗೂಡಿನ ಹೊರಗೆ ಇದ್ದ ವರ್ತುಲಾಕಾರದ ಬಯಲು, ರೋಮನ್ನರು ಮನರಂಜನೆಗಾಗಿ ಬಳಸುವ ಬಯಲು ರಂಗವನ್ನು ನೆನಪಿಗೆ ತರುವಂತಿತ್ತು. ಸುತ್ತಮುತ್ತಲೂ ಹಚ್ಚ ಹಸಿರಾದ ಹುಲ್ಲು, ಗಿಡಗಂಟೆಗಳು ನಡುವಿದ್ದ ಸ್ಥಳ ಬೋಳಾಗಿದ್ದರಿಂದ ದೂರದಿಂದಲೇ ಸ್ಫುಟವಾಗಿ ಕಾಣುತ್ತಿತ್ತು. ಇದು ಆಟ, ಪಾಟ, ವಿವಿಧ ವಿನೋದಾವಳಿಗಳನ್ನು ನಡೆಸಲು ನಿರ್ಮಿತವಾದ ಸ್ಪರ್ಧಾಗೃಹವೇ ? ಇಲ್ಲವೇ ಗೃಹ ನಿರ್ಮಾಣ ಕಾರ್ಯದಲ್ಲಿ ಅಗೆದ ಮಣ್ಣು ಹೊರತಂದು ಹರವಿದ್ದರಿಂದ ಉಂಟಾದ ಸಭಾಗೃಹವೇ ಎಂದು ಅರಿಯುವ ಕುತೂಹಲ ಉಟಾಯಿತು. ವಿವರವಾಗಿ ಪರೀಕ್ಷಿಸಿದಾಗ, ಗೂಡಿಗೆ ಅಂಟಿ ಕೊಂಡಿದ್ದ ಬಯಲಿನ ಅಂಚಿನಲ್ಲಿ ಸುತ್ತ ಮುತ್ತಲೂ ಎಲ್ಲೂ ಬೆಳೆಯದ ವಿಶಿಷ್ಟವಾದ ಹುಲ್ಲು ಹುಲುಸಾಗಿ ಬೆಳೆದಿತ್ತು. ಇಂತಹ ಹುಲ್ಲನ್ನು ಹಿಂದೆಯೂ ನೋಡಿದ್ದು ಜ್ಞಾಪಕಕ್ಕೆ ಬಂದಿತು. ಗುಟ್ಟು ರಟ್ಟು ಮಾಡುವ ಉದ್ದೇಶದಿಂದ ಹತ್ತಿರವೇ ಸ್ಥಾಪಿತನಾದದ್ದಾಯಿತು. ಆದರೆ ಇರುವೆ ಲೋಕ, ಘಟೋತ್ಕಚನಂತಿದ್ದ ಈ ಮಾನವನತ್ತ, ಲಕ್ಷ್ಯಹಾಕದೇ ತನ್ನ ಕೆಲಸದಲ್ಲಿ ಮೈಮರೆತಿತ್ತು.

ಎಲ್ಲ ರಸ್ತೆಗಳೂ ಅಂಗಳದೊಳಗಿದಂದಲೇ ಹಾದು ಹೋಗಿದ್ದವು. ಗೂಡಿನತ್ತ ರಾಜಮಾರ್ಗದಂತೆ ಅಗಲವಾಗಿ ಕಂಡರೂ, ಮುಂದೆ ಕಾಲುದಾರಿ

ಯಂತೆ ಕಿರಿದಾಗಿ ಹೊರಟಿತ್ತು, ಅನಂತರ ಕಣ್ಮರೆಯಾಗಿತ್ತು. ಆಹಾರ ಸಿಗುವಲ್ಲಿ ಕೆಲಸಗಾತಿಯರು ಹೋಗಿ ಬರುತ್ತಿರುವುದರಿಂದ ಅದೊಂದು 'ರಾಜಮಾರ್ಗ'ದಂತಾಗಿ ಬಿಡುವುದು ವಾಡಿಕೆ. ಮುಂದಾಳುಗಳು ಬಿಟ್ಟು ಹೋಗುವ ವಾಸನೆಯನ್ನೇ ಅನುಸರಿಸಿ ಹಿಂದಿನವು ಚಾಚೂ ತಪ್ಪದೇ ಹಿಂಬಾಲಿಸುವುದರಿಂದ ಇರುವೆಯು ಈ ಹೆದ್ದಾರಿಯನ್ನು ಅರಿಯುವುದು ಈ ಮಾನವನಿಗೆ ಕಷ್ಟದಾಯಕವಲ್ಲ. ಆದರೆ ಇದು ವಿಚಿತ್ರವೆನಿಸಿದ್ದರಿಂದ, ಕಾಡಿಗೆ ಹೊರಟ ಇರುವೆ ತಂಡದ ಹಿಂದೆ ಗೂಢಚರ್ಯೆಯ ಕೆಲಸಕ್ಕೆ ಹೋಗಬೇಕಾಯಿತು. ಈ ಇರುವೆಗಳು ಹಿಂದೆ ನೋಡಿದ ಬೇರೆಡೆಯವು ಗಳಿಗಿಂತ ಬೃಹದಾಕಾರದಲ್ಲಿದ್ದವು. ಪ್ರತಿಯೊಬ್ಬ ಕೆಲಸಗಾತಿಗೆ, ಸೈನಿಕರಿಗೇ ಮೀಸಲಾಗಿರಬೇಕಾದ ದವಡೆಗಳಿದ್ದವು. ಕೆಲಸಗಾತಿಯರಲ್ಲಿ ಉದ್ದ ಮತು ಗಿಡ್ಡ ಎಂದು ಅವುಗಳ ಅಳತೆಯಿಂದ ವಿಂಗಡಿಸಬಹುದಾಗಿತ್ತು. ಒರಿಗೈ ಯಿಂದ ಹೊರಟ ದುಡಿಮೆಗಾತಿಯರು ಕಾಲುದಾರಿ ಕೊನೆಗಾಣುವಲ್ಲಿಯ ವರೆಗೆ ತಂಡದಲ್ಲಿದ್ದು, ನಂತರ ಬೇರೆ ಬೇರೆ ದಾರಿ ಹಿಡಿದು ಹೊರಟವು. ಆಹಾರ ಸಂಶೋಧನೆಗಾಗಿ ಇರುವೆಗಳು ತೋರುವ ಪ್ರಯಾಸದ ಆಳ ಅರಿಯಲು ವಿಪರೀತ ತಾಳ್ಮೆ ಬೇಕು.

ಕಣ್ಣಲ್ಲಿ ಕಣ್ಣಿಟ್ಟು ನೋಡುತ್ತಿದ್ದವನ ಕಣ್ಣಿಗೇ ಮಣ್ಣೆರಚಿ, ಕೆಲಸ ಗಾತಿಯರೆಲ್ಲ ಎತ್ತೆತ್ತಲೋ ಚದುರಿಹೋದವು. ತರಗೆಲೆಗಳ ಒಳಸೇರಿ, ಹುಲ್ಲನ್ನು ಮರವೆಂಬತೆ ಹತ್ತಿ ಇಳಿದು, ಮುಂದೆ ಹೋಗಿ, ಹಿಂದೆ ಬಂದು, ತಮ್ಮ ಕಾಡಿನಲ್ಲಿ ಅಲೆಯುವುದೆಂದರೆ ಅವುಗಳಿಗೆ ವೇಳೆಯತ್ತ ಲಕ್ಷ್ಯವೇ ಇಲ್ಲ. ಹೊಟ್ಟೆಪಾಡಿಗೆ ಬಿಲ್ಲು-ಬಾಣ ಹೊತ್ತು ಕಾಡಿನಲ್ಲಿ ಅಲೆಯುವ ಆದಿವಾಸಿ ಗಳೂ ಈ ಇರುವೆಗಳ ಅನುಕರಣೆ ಮಾಡುತ್ತಿರಬಹುದು ಅನ್ನಿಸುತ್ತದೆ. ಈ ಗಿರಿವಾಸಿಗಳ ಚಟುವಟಿಕೆಗಳನ್ನು ನಿರೀಕ್ಷಿಸುವುದೂ ಒಂದು ಮಹಾಸಮಸ್ಯೆ ಯಾಗಿ ಬಿಡುತ್ತದೆ. ಈ ಕಾರ್ಮಿಕ ವರ್ಗವನ್ನು ಹಿಂಬಾಲಿಸುವುದು ಅಸಾಧ್ಯ ವಾಗಿ, ಅವು ಹತ್ತಿ ಇಳಿಯುವ ಹುಲ್ಲಿನತ್ತ ಏಕಚಿತ್ತದಿಂದ ವೀಕ್ಷಣೆ ನಡೆಸ ಬೇಕಾಯಿತು. ತೆಂಗಿನ ಕಾಯನ್ನು ಕೊಯ್ಯಲು ತೆಂಗಿನ ಮರವೇರಿದ ಚಪಲ 'ಪೌಡೇಕಾರ'ನಂತೆ, ಕೆಲಸಗಾತಿ ಹುಲ್ಲಿನ ತೆನೆಯನ್ನು ಮೀಸೆಯಿಂದ

ಸ್ಪರ್ಶಿಸಿ, ದವಡೆಗಳಿಂದ ಕಚ್ಚಿ ನೋಡಿ, ಕಾಳು ಬಲಿಯದಿದ್ದರೆ, ತಕ್ಷಣ ಇಳಿದು, ಇನ್ನೊಂದು ಹುಲ್ಲಿನ ಎಸಳನ್ನು ಏರುವುದು. ಪಕ್ವವಾದ ಕಾಳು ದೊರೆತರೆ, ಹುಲ್ಲನ್ನೇ ಕತ್ತರಿಯಂತೆ ಬಳಸಿ ಅದು ನೆಲಕ್ಕುರುಳದಂತೆ ಎಚ್ಚರಿಕೆ ಯಿಂದ ಮುಂಗಾಲಿನಿಂದ ಹಿಡಿದುಕೊಳ್ಳುವುದು. ಒಂದೆರಡು ಕಾಳುಗಳು ಜಾರಿಕೊಂಡರೂ ಅದಕ್ಕಾಗಿ ತಲೆಕೆಡಿಸಿಕೊಳ್ಳದೇ ಬೇರೆಯದನ್ನು ತನ್ನದ ನ್ನಾಗಿ ಮಾಡಿಕೊಳ್ಳುವುದು.

ತನಗಿಂತಲೂ ಭಾರವಾದ ಕಾಳುಗಳನ್ನು ದವಡೆಗಳಲ್ಲಿ ಕಚ್ಚಿ ಹಿಡಿದು, ಹುಲ್ಲಿನಿಂದ ಕೆಳಗೆ ಇಳಿಸುವುದು ಒಂದು ಮಹಾ ಸಾಹಸದ ಕೆಲಸ. ಇಂಥ ಕೆಲಸಗಳನ್ನು ಪರಸ್ಪರ ಸಹಕಾರದಿಂದ ಮಾಡುವುದು ಸಾಮಾನ್ಯವಾದರೂ, ಈ ಕೆಲಸಗಾತಿಯರು ಮಾತ್ರ ಸ್ವಸಹಾಯದಲ್ಲಿ ಹೆಚ್ಚಿನ ವಿಶ್ವಾಸ ಇಟ್ಟವರೆಂದು ತೋರುತ್ತದೆ. ಆದ್ದರಿಂದ ಕಾಲುಜಾರದಂತೆ ಎಚ್ಚರವಹಿಸಿ, ಹೆಜ್ಜೆಯ ಮೇಲೆ ಹೆಜ್ಜೆಯಿಟ್ಟು ನಿಧಾನವಾಗಿ ಇಳಿಯಲಾರಂಭಿಸುವವು. ಈ ಮುಂಜಾಗ್ರತೆಯಲ್ಲಿ ತನಗಿಂತ ತಾನು ಹೊತ್ತ ಕಾಳಿಗಾಗಿ ಹೆಚ್ಚಿನ ಲಕ್ಷ್ಯ ಪೂರೈಸಲಾಗುತ್ತದೆ ಎಂದು ನೋಡಿದವರಿಗೆ ಕೂಡಲೇ ಅನ್ನಿಸಿಬಿಡುತ್ತದೆ. ಇಳಿಯಲು ಆತಂಕವಾಗುವಂತಹ ಅಡೆ-ತಡೆಗಳು ಬಂದಾಗ, ರಸ್ತೆಯಲ್ಲಿಯ ಕೊರಕಲು ತಪ್ಪಿಸುವ ಕಾರಿನ ಚಾಲಕನಂತೆ, ಹಿಂದೆ ಹೋಗಿ ಬೇರೆ ಮಾರ್ಗ ದಿಂದ ಮುಂದುವರಿಯುತ್ತವೆ. ಹೋರಾಟ ಹಾದಿ ತೀರ ಗಂಡಾಂತರಕಾರಿ ಅನಿಸಿದರೆ, ತಿರುಗಿ ಹುಲ್ಲನ್ನೇರಿ ಅದರ ಬೇರೆ ಎಸಳನ್ನು ಬಳಸಿ ಇನ್ನೊಂದು ಪಕ್ಕದ ಹುಲ್ಲಿಗೆ ಹೋಗಿ ಅಲ್ಲಿಂದ ತೀರ ಜಾಗ್ರತೆಯಾಗಿ ಇಳಿಯುತ್ತವೆ.

ಕಾಳು ತರುವುದಕ್ಕಾಗಿ ಕೆಲಸಗಾತಿಯರು ಒಂಟಿಯಾಗಿಯೇ ಹೋಗು ವುದು ರೂಢಿಯಾದ್ದರಿಂದ ನಿರ್ದಿಷ್ಟವಾದ ಪಥವನ್ನು ಅವು ತುಳಿಯುವುದಿಲ್ಲ ಅಲ್ಲದೇ ಕಾಳುಗಳ ಶೋಧಕ್ಕಾಗಿ ಒಮ್ಮೊಮ್ಮೆ ಎರಡು ಮೂರು ಗಂಟೆಗಳ ವರೆಗೆ ಅಲೆಯಬೇಕಾದ ಪ್ರಸಂಗಗಳೂ ಬರುವುದರಿಂದ ಅದೇ ದಾರಿಯನ್ನು ಅನುಸರಿಸುವುದು ಅಸಾಧ್ಯ. ಆದರೂ ತನ್ನ ಗೂಡು ಇರುವ ದಿಕ್ಕಿನಲ್ಲಿಯೇ ಮರು ಪ್ರಯಾಣ ಬೆಳೆಸುವವು. ಕಾಡಿನಲ್ಲಿ ಮುರಿದು ಬಿದ್ದ ಒಣರೆಂಬೆ ರಾಶಿಯಾಗಿ ಬಿದ್ದ ಎಲೆಗಳೆಲ್ಲ ಇರುವೆಗೆ ಹೆಚ್ಚಿನ ಅಡೆ-ತಡೆಗಳಾಗಿ ಪರಿಣಮಿ

ಸುತ್ತಿರಬೇಕು. ಅಂತೆಯೇ ಎಲೆಯು ಒಳಗಿಂದಲೇ ಹಾದುಹೋದರೆ, ಅಡ್ಡಬಂದ ಟೊಂಗೆಗಳನ್ನು ಹತ್ತಿ ಇಳಿಯುವವು. ಹೀಗೆ ಮಾಡುವಾಗ ಬಾಯಲ್ಲಿದ್ದ ಕಾಳುಗಳು ಒಮ್ಮೊಮ್ಮೆ ಜಾರಿ ನೆಲಕ್ಕುರುಳುವುದುಂಟು. ಅಂತಹ ಪ್ರಸಂಗಗಳಲ್ಲಿ, ಅತಿ ಕಂಗಾಲಾಗಿ ಏಕಪ್ರಕಾರವಾಗಿ ಹುಡುಕಲಾರಂಭಿಸುತ್ತವೆ. ಇದಕ್ಕಾಗಿ ತೊಡಗಿಸಿದ ಕಾಲಾಂಶದ ವೇಳೆಯಲ್ಲಿ ಕಾಲಾಂಶದ ವೇಳೆಯಲ್ಲಿ ಇನ್ನೊಂದು ಪಾಲನ್ನು ಸಂಗ್ರಹಿಸಬಹುದಾಗಿದ್ದರೂ, ಹೊತ್ತು ತಂದವನ್ನು ದೊರಕಿಸಿದಾಗಲೇ ನೆಮ್ಮದಿ ಅವಕ್ಕೆ. ಹಿಂದಿನಗಿಂತ ಗಟ್ಟಿಯಾಗಿ ಕಚ್ಚಿ ಹಿಡಿದು, ಜಯಶಾಲಿಯ ಉನ್ಮಾದದಲ್ಲಿ ತತ್ತರ ವೆತ್ತರ ಕಾಲುಹಾಕುತ್ತ ಸಾಗುವವು. ಬಯಲಿಗೆ ಬಂದಾಗ ಮುಂದಿನ ದಾರಿ ಸುಗಮವಾದ್ದರಿಂದ ವೇಗವನ್ನು ಹೆಚ್ಚಿಸುವವು.

ಕೃಷಿಕ ಇರುವೆಗಳ ಗೂಡಿಗೆ ಹತ್ತಾರು ಮಹಾದ್ವಾರಗಳು; ನೂರಾರು ಉಪದ್ವಾರಗಳು. ಬೇರೆ ಬೇರೆ ದಿಕ್ಕುಗಳಿಂದ ಕಾಳು ಸಂಗ್ರಹಿಸುವಾಗ ಅದಕ್ಕೆ ಅನುಗುಣವಾಗಿ ಆಯಾ ದ್ವಾರಗಳನ್ನು ಬಳಸುತ್ತಿರಬೇಕು. ಬಳಿಯಲ್ಲಿ ದ್ವಾರಪಾಲಕರು ನಿಂತಿರುತ್ತಾರೆ. ಅವು ಕಾಳು ಹೊತ್ತು ತಂದ ಆಳುಗಳು ತಮ್ಮ ಗೂಡಿಗೆ ಸೇರಿದ್ದವು ಎಂದು ಖಚಿತಪಡಿಸಿಕೊಂಡೇ ಒಳಗೆ ಬಿಡುತ್ತವೆ. ತಂದ ಒಜ್ಜೆಯನ್ನು ಸಂಗ್ರಹಾಲಯಕ್ಕೆ ಸೇರಿಸಿ, ಆಳಿರುವೆ ಆಳದ ಕೊಠಡಿಯನ್ನು ಸೇರಿಕೊಳ್ಳುವುದು. ಅಲ್ಲಿ ತಿಂಡಿ-ತೀರ್ಥ ಸ್ವೀಕರಿಸಿ, ಮಿಸುಕಾಡದೇ ಕುಳಿತು ವಿಶ್ರಾಂತಿಯನ್ನು ಪಡೆಯಲಾರಂಭಿಸುವುದು. ಗೋದಾಮಿನಲ್ಲಿ ಕಲೆ ಹಾಕಿದ ಎಲ್ಲ ಕಾಳುಗಳೂ ಒಂದೇ ಜಾತಿಗೆ ಸೇರಿದ ಹುಲ್ಲಿನದ್ದಾಗಿದ್ದರಿದ ಕೆಲಸಗಾತಿಯರ ಸಸ್ಯಜ್ಞಾನಕ್ಕೆ ತಲೆದೂಗಲೇಬೇಕು. ಇಷ್ಟಾದರೂ ಕಾಳುಗಳನ್ನೆಲ್ಲ ಪರೀಕ್ಷಿಸಲು ಮೇಲ್ವಿಚಾರಕರ ಪಂಗಡ ಬಂದಿರುತ್ತದೆ. ಪ್ರತಿಯೊಂದು ಕಾಳನ್ನು ಮೀಸೆಗಳಿಂದ ಮುಟ್ಟಿ ನೋಡಿ, ದವಡೆಗಳಿಂದ ಅದುಮಿ ನೋಡಿ, ಎಲ್ಲ ರೀತಿಯಿಂದ ಸರಿಯಾಗಿದ್ದರೆ, ಅದನ್ನು ಬೇರೊಂದು ಕೋಣೆಗೆ ಸಾಗಿಸಲು ಅನುಮತಿ ಸಿಗುತ್ತದೆ. ನೆನೆದ, ಒಡೆದ, ಕಾಳುಗಳನ್ನು ಒಯ್ದು ಗೂಡಿನ ಹೊರಗಿದ್ದ ತಿಪ್ಪೆಗೆ ಎಸೆಯುತ್ತವೆ ಆಳಿರುವೆಗಳು.

ತಿಪ್ಪೆಗೆ ಎಸೆದ ಕಸಕಡ್ಡಿಗಳು ಕೊಳೆತು ಉತ್ತಮ ಗೊಬ್ಬರವಾಗಿ ಪರಿಣಮಿಸಿ, ಮೊಳಕೆಯೊಡೆದ ಕೆಲ ಕಾಳುಗಳು ಚಿಗುರಲಾರಂಭಿಸಿದ್ದವು. ಇವು ಗಿಡವಾಗಿ ಕಾಳು ತಳೆದು ನಿಂತಾಗ ದೂರದ ಕಾಡಿಗೆ ಹೋಗುವ ಬದಲಾಗಿ ಕೆಲಸಗಾತಿಯರು ಇಲ್ಲಿಂದಲೇ ಕಲೆಹಾಕುತ್ತಿರಬೇಕು. ಎಲ್ಲಕ್ಕೂ ಹೆಚ್ಚಾಗಿ ಅವು ಏಕಜಾತಿಗೆ ಸೇರಿದ ಕಾಳುಗಳಾದ್ದರಿಂದ ಹುಡುಕಬೇಕಾದ ತೊಂದರೆಯೇ ಇಲ್ಲ. ಇರುವೆಗಳ ಬೈಲು, ಈ ದೃಷ್ಟಿಯಿಂದ ಹೊಲವೆಂದು ಕರೆಯುಬಹುದಾದರೂ, ಅವು ಬುದ್ಧ್ಯಾಪೂರ್ವಕವಾಗಿಯೇ ಕೃಷಿಯಲ್ಲಿ ತೊಡಗಿ ಕಾಳು-ಕಡಿ ಉತ್ಪಾದಿಸುವಂತೆ ತೋರುವುದಿಲ್ಲ.

ಈ ಇರುವೆಗಳ ಗೂಡಿನಲ್ಲಿ ಗಿರಣಿ ಖೋಲಿಯೊಂದು ಪ್ರತ್ಯೇಕ ವಾಗಿತ್ತು. ಅಲ್ಲಿ ದೊಡ್ಡ ರುಂಡ, ಭಾರೀ ದವಡೆಗಳನ್ನು ಹೊತ್ತ ಇರುವೆ ಗಳಿದ್ದವು. ಹೋಲಿಕೆಯಲ್ಲಿ ಸೈನಿಕರಂತೆ ಇದ್ದರೂ ವೃತ್ತಿಯಿಂದ ತೀರ ಬೇರೆಯುವಾಗಿದ್ದವು. ಅವು ಜೀವಂತ ಅಕ್ಕಿ ಗಿರಣಿಗಳಾಗಿದ್ದವು. ಆಯ್ಕೆ ಯಾಗಿ ಬಂದ ಕಾಳುಗಳನ್ನು ದವಡೆಯಲ್ಲಿ ಕಚ್ಚಿ ಹಿಡಿದು, ಹೊರಗಿನ ತವಡ ನ್ನಷ್ಟೇ ಒಡೆಯುವವು. ಜೋರು ಹಾಕುವುದು ಅವುಗಳ ವೈಶಿಷ್ಟ್ಯ. ಒಮ್ಮೆ ಕಾಳಿನಲ್ಲಿ ಬಿರುಕು ಬಿಟ್ಟಿತೆಂದರೆ ಒಳಗಿನ ಧಾನ್ಯ ಒಂದೆಡೆ ರಾಶಿಹಾಕಿ, ತವಡನ್ನು ಗೂಡಿನ ಹೊರಗೆ ಸಾಗಿಸಲಾಗುತ್ತಿತ್ತು. ಒಂದರ ಹಿಂದೆ ಒಂದ ರಂತೆ ಕಾಳುಗಳನ್ನು ಸುರಿಯುವುದು. ಈ ಆಳಿರುವೆಗಳ ಕೆಲಸ; ಅವು ದವಡೆಗಳನ್ನು ಎಷ್ಟು ಉಪಯೋಗಿಸುತ್ತಿದ್ದಿರಬಹುದೆಂದು ಕಲ್ಪನೆ ಬರು ತ್ತದೆ. ಹಿರಿಯ ಇರುವೆಗಳ ದವಡೆ ಹಲ್ಲುಗಳೆಲ್ಲ ಬಳಕೆಯಿಂದಾಗಿ ಬೋಳಾಗಿ ಹೋಗಿರುತ್ತವೆ. ಈ ಹಲ್ಲುಗಳಿಗೆ ಸಾಣೆ ಹಿಡಿಯಂದು. ಕೃತಕ ಹಲ್ಲಿನಲ್ಲಿ ಅವಕ್ಕೆ ವಿಶ್ವಾಸವಿಲ್ಲ. ಹೀಗಾಗಿ ಇಂಥ ಇರುವೆಗಳು ಈ ಸೇವೆ ಯಿಂದ ನಿವೃತ್ತವಾಗಿ ಕೆಲಸಕ್ಕೆ ಬಾರದ ಗಂಡಿರುವೆಗಳನ್ನು ಹೊರಗೆ ದಬ್ಬುವು ದರಲ್ಲಿ ಅಥವಾ ರಾಣಿಯ ಚಿಕ್ಕ ಪುಟ್ಟ ಚಾಕರಿ ಮಾಡುವುದರಲ್ಲಿ ಶೇಷಾ ಯುಷ್ಯವನ್ನು ಸವೆಸುತ್ತವೆ.

ಈ ಇರುವೆಗಳು ಸಿದ್ಧಪಡಿಸಿದ ಅಕ್ಕಿ ಚೂರನ್ನು ಏನು ಮಾಡುತ್ತವೆ? ಅನ್ನ-ಸಾರು, ಒಲೆ-ಬೆಂಕಿ-ಪಾತ್ರೆಗಳೆಂದು ಅವು ತಲೆ ಕೆಡಿಸಿಕೊಳ್ಳುವ

ಗೋಜಿಗೆ ಹೋಗುವುದಿಲ್ಲ. ಆದರೆ ಹೊಟ್ಟೆ ಹೊರೆದುಕೊಳ್ಳುವುದಕ್ಕಾಗಿ ಹಸಿ ಅಕ್ಕಿಯನ್ನೂ ಮುಕ್ಕುವುದಿಲ್ಲ. ಇವೆರಡರ ನಡುವಿನ ದಾರಿಯನ್ನು ಬಳಸುತ್ತವೆ. ಅಕ್ಕಿಯನ್ನು ದವಡೆಗಳಲ್ಲಿ ಹಾಕಿ, ಸಣ್ಣಗೆ, ನುಣ್ಣಗೆ ಅರೆಯುವುದಕ್ಕಾಗಿ ತನ್ನ ಎಂಜಲನ್ನು ಉಪಯೋಗಿಸುತ್ತವೆ. ಆ ಎಂಜಲಿನಲ್ಲಿ ಅದೆಂತಹ ಮಾಯಾ ವಿದ್ಯೆ ಇದೆಯೋ! ಅರೆದಿಟ್ಟ ಹಿಟ್ಟು ಉದ್ದಿನ ಹಿಟ್ಟಿನಂತೆ ಉಬ್ಬುತ್ತದೆ. ಆದರೆ ಇದನ್ನು ಇಡ್ಲಿ, ದೋಸೆಗೆ ಹೋಲಿಸುವುದಕ್ಕಿಂತ ಐಯ್ಯಂಗಾರರ ರೊಟ್ಟಿ ಹೆಸರಿನಲ್ಲಿ ಮಾರುವ ಬ್ರೆಡ್ಡಿಗೆ ಹೋಲಿಸಬಹುದು. ಕೃಷಿಕ ಇರುವೆಗಳು ಇಂಥ ಇರುವೆ ರೊಟ್ಟಿ ತಿಂದು ಬದುಕುತ್ತವೆ ಎಂದು ಸಾಮಾನ್ಯವಾಗಿ ನಂಬುವುದು ಕಷ್ಟ. ಆದರೆ ಅವು ಇಷ್ಟೆಲ್ಲ ಕೊಂದರೆ ತೆಗೆದುಕೊಳ್ಳುವುದರಿಂದ ಅವಕ್ಕೆ ಉಳಿದ ಇರುವೆಗಳಿಗಿಂತ ಹೆಚ್ಚಿನ ಲಾಭವಿದೆಯೇ ? ಮಾನವನಂತೆ ಕೇವಲ ನಾಲಿಗೆ ಚಪಲ ತೀರಿಸಿಕೊಳ್ಳುವುದಕ್ಕೆ ಇಷ್ಟೊಂದು ಕಷ್ಟಪಡುತ್ತವೆಯೇ ಎಂದು ನಂಬುವುದು ಕಷ್ಟ.

ಇರುವೆಗಳು ಏಕಪ್ರಕಾರದ ಆಹಾರವನ್ನು ಅವಲಂಬಿಸಿದ್ದರೆ, ಮಾನವ ಲೋಕದಂತೆ ಅವುಗಳಲ್ಲೂ ತೀವ್ರ ಸ್ಪರ್ಧೆ ಏರ್ಪಡುತ್ತಿತ್ತು. ಎಲ್ಲಾ ಇರುವೆಗಳು ಸಸ್ಯತಗಣಿಯ 'ಮಧು'ವಿಗಾಗಿ ಪರದಾಡಿದರೆ, ಹೆಚ್ಚಿನವು ಹಸಿದೇ ಇರಬೇಕಾಗುತ್ತಿತ್ತು. ಬೂಂದಿಲಾಡು, ಬೇಸನ್ ಉಂಡಿ, ಜಾಮೂನು, ರಸಗುಲ್ಲಾಗಳು ಸಿಕ್ಕಾಗ ಮೃಷ್ಟಾನ್ನ ಭೋಜನ ಉಂಡರೂ, ಅವಿಲ್ಲದಾಗ ರವೆ, ಅಕ್ಕಿ ಹಿಟ್ಟು, ರಾಗಿ ಮುದ್ದೆ, ಒಣಮೀನು ಇವುಗಳೂ ನಡೆಯುತ್ತವೆ. ಬೇರೇನೂ ಸಿಗದಿದ್ದಾಗ, ತಿಂದು ಒಗೆದ ಮೀನಿನ ಎಲುವುಗಳು, ಮುಸುರೆಯಲ್ಲಿ ಬಿದ್ದ ಅನ್ನದ ಚೂರುಗಳನ್ನೂ ಅವು ಸ್ವೀಕರಿಸುವವು. ಇಷ್ಟೊಂದು ಹೊಂದಾಣಿಕೆಯನ್ನು ಅವು ರೂಢಿಸಿಕೊಂಡರೂ, ಆಗಾಗ ಅರೆಹೊಟ್ಟೆ, ಹಸಿವು, ಬರಗಾಲಗಳನ್ನು ಅವು ಎದುರಿಸಬೇಕಾಗಿ ಬರುತ್ತದೆ. ಆದರೆ ಇಂಥ ಸ್ಥಿತಿಗೆ ಅವು ಅಂಜುವುದಿಲ್ಲ. ಉಪವಾಸಗಳಲ್ಲಿ ಮಹಾತ್ಮಾ ಗಾಂಧಿಯವರನ್ನು ಮೀರಿಸುವ ವಿಕ್ರಮ ಅವುಗಳದ್ದು. ಉಪವಾಸವಿದ್ದ ದಿನಗಳಲ್ಲಿ ಸುಟಿಯಾಗಿ ಓಡಾಡಿ ಆಹಾರ ಶೋಧನೆ ನಡೆಸುತ್ತಲೇ ಇರುತ್ತವೆ. ಅದೃಷ್ಟವಶಾತ್ ಆಹಾರ ದೊರಕಿದರೆ, ತನಗೆ ದೊರೆತದ್ದರಲ್ಲಿಯೇ ಉಳಿದ ಸಂಗಾತಿಗಳೊಡನೆ ಪಾಲುಗೊಂಡು ತಿನ್ನುವುದರಲ್ಲಿ ವಿಶ್ವಾಸವಿಟ್ಟಿವೆ.

ಕೃಷಿಕ ಇರುವೆಗಳಿಗೆ ಆಗಾಗ ಉಪವಾಸ ಕೈಕೊಳ್ಳುವ ಪ್ರಸಂಗ ಬರುವುದೇ ಇಲ್ಲ. ಅವುಗಳ ವಾಸಸ್ಥಾನದ ಪರಿಸರದ ಕಾಡಿನಲ್ಲಿ ಕಾಡು ಹುಲ್ಲಿಗೆ ಬರಗಾಲವೇ ಇರುವುದಿಲ್ಲ. ಅವುಗಳ ಕಾಳುಗಳನ್ನು ಕಲೆಹಾಕುವು ದಕ್ಕೆ ಯಾರ ಆಕ್ಷೇಪಣೆಯೂ ಇರದು. ಗೂಡುಗಳು ವಿಸ್ತಾರವಾಗಿ ಹರಡಿ ಕೊಂಡಿರುವುದರಿಂದ ಸ್ಪರ್ಧೆಯಂತೂ ಇಲ್ಲವೇ ಇಲ್ಲ. ಕಾದಾಟ-ಹೋರಾಟ ಗಳು ಇಲ್ಲವೇ ಇಲ್ಲ. ಹವಾಮಾನ ಅನುಕೂಲವಿದ್ದಾಗ ಸಾಧ್ಯವಿದ್ದಷ್ಟು ಕಾಳುಗಳನ್ನು ಸಂಗ್ರಹಿಸುವವು. ಬೇರು ಬಿಟ್ಟ ಕಾಳುಗಳು ಅಂಕುರಿಸಿ, ಗಿಡವಾಗಿ, ತೆನೆ ತಳೆದು ನಿಂತದ್ದನ್ನು ಕಷ್ಟಕಾಲದಲ್ಲಿ ಮಾತ್ರ ಕೊಯ್ಯಲು ಪ್ರಾರಂಭಿಸುವವು. ಗೂಡಿನಲ್ಲಿ ಕಲೆಹಾಕಿದ ಎಲ್ಲ ಕಾಳುಗಳನ್ನು ಏಕಕಾಲ ದಲ್ಲಿ ಬಳಸದೇ, ಕೆಲವನ್ನು ಮಳೆಗಾಲ, ಚಳಿಗಾಲಕ್ಕಾಗಿ ಕಾದಿರಿಸುವವು. ಗೂಡಿನಲ್ಲಿಯ ಆರ್ದ್ರತೆಯಿಂದಾಗಿ, ಕಾಳುಗಳು ಚಿಗುರುವ ಸಾಧ್ಯತೆ ಇದ್ದು ದರಿಂದ ಅವುಗಳ ಅಂಕುರವನ್ನು ಕಡಿದು ಮುಂದೆ ಬೆಳೆಯದಂತೆ ಮುಂಜಾ ಗ್ರತೆ ವಹಿಸುತ್ತವೆ. ಇಷ್ಟೆ ಅಲ್ಲದೇ ದಿನಕ್ಕೊಂದು ರೀತಿಯಿಂದ, ಸಿಕ್ಕಿದ್ದನ್ನು ತಿನ್ನುವ ಬದಲಾಗಿ, ತನಗೆ ರುಚಿಸುವಂತಹ ರೊಟ್ಟಿಯನ್ನೇ ಸಿದ್ಧಪಡಿಸಿ ಮನಸ್ಸಿ ತಿಂದು ತೇಗಲು ಅವಕಾಶ ಮಾಡಿಕೊಂಡಿವೆ.

## 24. ಪರ್ಣ ಶಿಲ್ಪಿ

ಸಂಜೆಗೆ ಭಾಗೀರಥಿ ತೀರಕ್ಕೆ ವಿಹಾರಕ್ಕೆಂದು ಹೊರಟಾಗ ಅನತಿ ದೂರದ ಹಿತ್ತಲಿನಿಂದ ಮಗುವಿನ ಆರ್ತಧ್ವನಿಯ ಚೀತ್ಕಾರ ಏಕಪ್ರಕಾರವಾಗಿ ಕೇಳಿ ಬರುತ್ತಿತ್ತು. ಜನರೆಲ್ಲ ಅತ್ತ ಓಡಲಾರಂಭಿಸಿದ್ದರು. ಏನಾದರೂ ಅನಾಹುತ ನಡೆದಿರಬೇಕೆಂದು ಅವರನ್ನು ಹಿಂಬಾಲಿಸಿ ಹೋದಾಗ, ಅಲ್ಲಿ ಕಂಡ ದೃಶ್ಯದಿಂದ ಆ ಚಳಿಗಾಲದಲ್ಲಿಯೂ ಮೈ ಬೆವರಿತು. ಹತ್ತು-ಹನ್ನೆರಡು ವರ್ಷದ ಸಂತಾಲ ಆದಿವಾಸಿ ಹುಡುಗನೊಬ್ಬನ ಕೈಗಳನ್ನು ಹಲಸಿನ ಮರದ ಹಿಂದೆ ಒಯ್ದು ಕತ್ತದ ಹುರಿ ದಾರದಿಂದ ಬಿಗಿಯಾಗಿ ಕಟ್ಟಿದ್ದಾರೆ. ಬೆಲ್ಲದ ನೀರನ್ನು ಮೈಮೇಲೆಲ್ಲ ಸಿಂಪಡಿಸಿ, ಕಟ್ಟಿರುವೆಗಳನ್ನು ಹರಿಬಿಟ್ಟಿದ್ದಾರೆ. ಅವುಗಳ ನಿತ್ಯ ಜೀವನಕ್ಕೆ ಬಂದ ಅಡ್ಡಿ-ಆತಂಕಗಳಿಂದಲೋ, ಸಿಹಿ ತಿಂಡಿಯ ಆಸೆಯಿಂದಲೋ ಅಥವಾ ಮಾಂಸಖಂಡದ ರುಚಿ ಹತ್ತಿಯೋ ಅವು ಆ ಎಳೆ ಶರೀರವನ್ನು ಕಚ್ಚಿ, ಕಚ್ಚಿ, ಅದರಲ್ಲಿ ಫಾರ್ಮಿಕ್ ಆಮ್ಲವನ್ನು ಸೇರಿಸಿದ್ದರಿಂದ ಹುಡುಗನ ಮೈಯೆಲ್ಲ ಉಬ್ಬಿಬಿಟ್ಟಿತ್ತು. ಅರಬರಲ್ಲಷ್ಟೇ ಚಿತ್ರ ಹಿಂಸೆಯ ಶಿಕ್ಷಾ ಪ್ರಕಾರಗಳು ಸೀಮಿತವಾಗಿವೆಯೆಂದು ನಂಬಿದವನಿಗೆ ಆಘಾತವಾಗಿ ಇಂಥ ಶಿಕ್ಷೆಯನ್ನು ಎಳೆಯನಿಗೆ ಏಕೆ ಕೊಡಬೇಕಾಯಿತು ಎಂದು ವಿಚಾರಿಸಿದಾಗ, ಒಬ್ಬ ಹುಡುಗ ತಾನು ಅರಿತ ವಿವರಗಳನ್ನು ಪೂರೈಸಿದ.

ಹೆಚ್ಚಿನ ಬಂಗಾಲಿಗಳು ತಮ್ಮ ಮನೆಯ ಹಿತ್ತಲಲ್ಲಿ ಹೊಂಡ (ಪುಕುರ) ವನ್ನು ಇಟ್ಟುಕೊಂಡಿರುತ್ತಾರೆ. ತಮಗೆ ನಿತ್ಯ ಬಳಕೆಗೆ ಬೇಕಾಗುವ

ಯಾವತ್ತೂ ಮೀನನ್ನು ಅದರಲ್ಲಿ ಬೆಳೆಸುವುದು ವಾಡಿಕೆ. ಠಾಕೂರನದು ಹಳ್ಳಿಗೇ ಹಿರಿದಾದ ಹೊಂಡ. ಅದರಲ್ಲಿ ಬಾಯಲ್ಲಿ ನೀರೂರಿಸುವ ಕಟ್ಲಾ ಮೀನು ಬೆಳೆಸಿದ್ದ. ಹಳ್ಳಿಯ ಅಂಚಿನಲ್ಲಿ ವಾಸಿಸುವ ಸಂತಾಲ ಹುಡುಗನಿಗೆ ಠಾಕೂರನ ಮೀನಿನ ಮೇಲೆ ಆಸೆಯೂಯಿತು. ಹಿಂದಿನ ರಾತ್ರೆ ಕಗ್ಗತ್ತಲಿನಲ್ಲಿ ಗಾಳಹಾಕಿ, ಒಂದೆರಡು ಮೀನುಗಳೊಂದಿಗೆ ಕಾಲಿಗೆ ಬುದ್ಧಿ ಹೇಳಿದ. ಅವನಿಗಾಗದ ಕುಟುಂಬವೊಂದರಿಂದ ಈ ವಿಷಯವನ್ನು ಅರಿತ ಠಾಕೂರನು ಹುಡುಗನು ಪೇಟೆಗೆ ಹೊರಟಾಗ ಹಿಡಿಸಿ, ಅವನಿಗೆ ವಿವರಣೆಯನ್ನು ಕೊಡಲು ಕೂಡ ಅವಕಾಶ ನೀಡದೇ ಈ ಶಿಕ್ಷೆ ವಿಧಿಸಿಬಿಟ್ಟಿದ್ದ. ಅಬ್ಬಾ! ಬಂಗಾಲಿಗಳ ನ್ಯಾಯವಿಧಾನವೇ ಅನಿಸಿತು. ಇಷ್ಟೆಲ್ಲ ಇರುವೆಗಳು ಎಲ್ಲಿಂದ ಬಂದಿರಬಹುದು ಎಂದು ತಲೆ ಕೆರೆದುಕೊಂಡಾಗ, ಠಾಕೂರನ ಆಳೋರ್ವನು ದೊಡ್ಡದೊಂದು ಹಲಸಿನ ಟೊಂಗೆ ಹೊತ್ತು ಬರುತ್ತಿದ್ದುದರಿಂದ ಜನರೆಲ್ಲ ಹಿಮ್ಮೆಟ್ಟಿ ದಾರಿ ಮಾಡಿ ಕೊಟ್ಟರು. ಟೊಂಗೆಯ ಒಂದಂಚಿಗೆ ಇದ್ದ ಎಲೆಗಳ ಗೂಡಿಗೆ ಕೋಲಿನಿಂದ ಬಡಿದಾಗ, ಅದರಲ್ಲಿದ್ದ ಕೆಂಗಿರುವೆಗಳು ದವಡೆಗಳನ್ನು ಹಿಗ್ಗಿಸಿ ಹುಡುಗನ ಮೈಯೇರಿ ಕಚ್ಚಲಾರಂಭಿಸಿದಾಗ ಆತ ಒಂದೇ ಸವನೆ ಬೊಬ್ಬೆಯಿಡಲಾರಂಭಿಸಿದ.

ಮಾನವನು ತನ್ನ ಸಹಜೀವಿಯೊಂದಿಗೆ ಇಷ್ಟೊಂದು ಕ್ರೌರ್ಯದಿಂದ ವರ್ತಿಸಬೇಕೆ? ಅದೂ ಅರಿಯದ ಎಳೆಯನೊಬ್ಬನ ಸಣ್ಣ ತಪ್ಪಿಗೆ ಎಂಥ ಶಿಕ್ಷೆ! ನೆರೆದವರೆಲ್ಲ ಅಸಹಾಯಕ ಪ್ರೇಕ್ಷಕರಾಗಿ ನಿಲ್ಲಬೇಕೆ? ಏನು ಮಾಡುವುದು? ಎಂದು ಯೋಚಿಸಿದ ಕ್ಷಣದಲ್ಲಿ ದೂರದಲ್ಲಿ ಕೋಲಾಹಲ ಕೇಳಿ ಬಂದಿತು. ಸಾಂತಾಲ ಗಂಡು-ಹೆಣ್ಣುಗಳ ಪಡೆಯೊಂದು ದೊಣ್ಣೆ, ಕತ್ತಿ, ಲಾಠಿಗಳೊಂದಿಗೆ ಆಕ್ರೋಶದಿಂದ ಓಡಿ ಬರಲಾರಂಭಿಸಿದ್ದರು. ಈ ದೃಶ್ಯ ಮಾತ್ರದಿಂದಲೇ ಅಲ್ಲಿ ನೆರೆದವರು, ಠಾಕೂರರ ಪರಿವಾರದವರು, ಆಳುಗಳೆಲ್ಲ ಮಾಯವಾಗಿ ಬಿಟ್ಟರು. ಹೊಡೆಯಲು ಯಾರೂ ಸಿಗದ್ದರಿಂದ ಅಲ್ಲಿ ಸಿಕ್ಕ ಸಾಮಾನುಗಳನ್ನೇ ಬಡಿದು ಚೂರು ಮಾಡಿ, ಹುಡುಗನನ್ನು ಬಂಧಮುಕ್ತ ಮಾಡಿ ಹೊತ್ತುಕೊಂಡು ಸಾಂತಾಲರ ಗುಂಪು ಹಿಂದಿರುಗಿತು. ಕೋಪಗೊಂಡ ಸಾಂತಾಲ ಸಮೂಹವನ್ನು ಎದುರಿಸುವ ಧೈರ್ಯವಾಗ

ದಿದ್ದರೂ ಆ ಹುಡುಗನ ಯೋಗಕ್ಷೇಮದ ಬಗ್ಗೆ ಕಳವಳವೆನಿಸಿದ್ದರಿಂದ ಅವರ ವಸತಿಗೆ ಭೇಟಿ ಕೊಡುವ ಸಾಹಸ ಮಾಡಿದೆ.

ಅಶ್ವತ್ಥ ಮರದ ಕಟ್ಟೆಯ ಮೇಲೆ, ಹೆಣೆದ ತೆಂಗಿನ ಗರಿಯ ಮೇಲೆ ಹುಡುಗನನ್ನು ಮಲಗಿಸಿದ್ದರು. ನಾಲ್ಕಾರು ಹೆಂಗಳೆಯರು ಬಿಸಿ ಬೂದಿಯನ್ನು ಅವನ ಮೈಗೆ ತಿಕ್ಕುತ್ತಿದ್ದರು. ಇದರಿಂದ ನೋವು ಹೆಚ್ಚಾಗಿ ಅವನು ಕಿರುಚಿಕೊಳ್ಳುತ್ತಿದ್ದ. ಮಗುವಿನ ಹತ್ತಿರ ಸರಿದಾಗ, ಸಿಟ್ಟಾಗುವ ಬದಲಾಗಿ ಹುಡುಗನ ತಾಯಿ "ಬಾಬು, ನನ್ನ ಮರಿಗೆ ಆ ಮುಟ್ಠಾಳ ಏನು ಮಾಡಿಬಿಟ್ಟ ನೋಡಿ, ಹೇಗಾದರೂ ಈತನನ್ನು ಬದುಕಿಸಿಕೊಡಿ" ಎಂದು ಗೋಳೋ ಎಂದು ಅತ್ತುಬಿಟ್ಟಳು. ಬೂದಿ ಲೇಪ ನಿಲ್ಲಿಸಲು ಸೂಚಿಸಿ. ಒದ್ದೆ ಬಟ್ಟೆಯಿಂದ ಮೈಯೆಲ್ಲ ಮೃದುವಾಗಿ ಒರೆಸಲು ಹೇಳಿದಾಗ, ಹೆಚ್ಚಿನ ಆಮ್ಲದ ಅಂಶ ಇಲ್ಲವಾಯಿತು. ನಂತರ ಆಮ್ಲದ ತೀವ್ರತೆ ಕಳೆಯಲು ತಿಳಿಯಾದ ಸುಣ್ಣದ ನೀರನ್ನು ಸಿಂಪಡಿಸಲು ಹೇಳಿದ್ದರಿಂದ ನೋವಿನ ಚೀರಾಟ ಕಡಿಮೆಯಾಯಿತು. ಗೃಹಾಭಿಮುಖಿಯಾಗುತ್ತಿದ್ದಂತೆ, ರಾತ್ರಿ ಇನ್ನೊಮ್ಮೆ ಸುಣ್ಣದ ತಿಳಿನೀರಿನಿಂದ ಮೈ ಒರೆಸಿ, ಚೆನ್ನಾಗಿ ನಿದ್ರಿಸುತ್ತಾನೆ ಎಂದು ಹೇಳಲು ಮರೆಯಲಿಲ್ಲ.

ಮರುದಿನ ಮುಂಜಾನೆ ಹಾಸಿಗೆಯಲ್ಲಿ ಹೊರಳಾಡುತ್ತಿದ್ದಾಗಲೇ ಯಾರೋ ಬಾಗಿಲು ತಟ್ಟಿ 'ಬಾಬೂಜಿ, ಬಾಬೂಜಿ' ಎಂದು ಕರೆಯುವುದು ಕೇಳಿಸಿತು. ಇದೆಲ್ಲಿಯ ಗ್ರಹಚಾರವೆಂದು ಬಾಗಿಲು ತೆರೆದಾಗ, ಹಿಂದಿನ ದಿನದ ಮಗುವಿನ ತಂದೆ ಐದು ಬಾಳೆಹಣ್ಣುಗಳೊಂದಿಗೆ ಒಳಗೆ ಬಂದು, "ತಾವು ದೇವರಂತೆ ಬಂದು ಮಗುವನ್ನು ಬದುಕಿಸಿಕೊಟ್ಟಿರಿ. ಇವನ ಅಣ್ಣನೊಬ್ಬ ಇರುವೆಗೆ ತುತ್ತಾಗಿ ಮೃತಪಟ್ಟಿದ್ದಾನೆ. ಇವನೂ ಅದೇ ಹಾದಿ ಹಿಡಿಯುತ್ತಾನೆ ಎಂದುಕೊಂಡಿದ್ದೆವು. ನಿಮ್ಮ ಮುಂಜಾಗ್ರತೆಯಿಂದ ಹಾಗಾಗಲಿಲ್ಲ. ಈ ಋಣ ಹೇಗೆ ತೀರಿಸಲಿ?" ಎನ್ನುತ್ತಿದ್ದಂತೆ ಅವನ ಕಂಠ ಬಿಗಿದು ಕಣ್ಣು ತೇವವಾದವು. ಆತನಿಗೆ ಸ್ವಲ್ಪ ತಿಂಡಿ ಕೊಟ್ಟು ಕಳಿಸಿದ ನಂತರ, ಈ ಹೊಸ ಬಾಬುವಿನ 'ಹಿರಿಮೆ' ಸಾಕಷ್ಟು ಹರಡಿದಂತೆ ತೋರಿತು ಮಾಯಾ ವಿದ್ಯೆ-ಔಷಧೋಪಚಾರಗಳೆಲ್ಲ ಬಾಬುವಿಗೆ ತಿಳಿದಿವೆ, ಎಂಬ

ಸಮಾಚಾರ ಕೇಳಿ ಬಂದಿತು. ಜೇನ್ನೊಣದಿಂದ ಕಡಿಸಿಕೊಂಡು ಮುಖ ಉಬ್ಬಿಸಿಕೊಂಡವರು, ಕಣಜದ ಕಡಿತದಿಂದ ಕೈ ಬಾತುಕೊಂಡವರು, ಚೇಳಿನ ವಿಷದಿಂದ ನರಳುವವರೆಲ್ಲ ಚಿಕಿತ್ಸೆಗೆ ಬರಲಾರಂಭಿಸಿದರು. ಪ್ರಥಮ ಚಿಕಿತ್ಸೆಯ ಸುಲಭೋಪಾಯದಿಂದಲೇ ಹಲವರಿಗೆ ನೆಮ್ಮದಿ ಸಿಗುತ್ತಿದ್ದಿರ ಬೇಕು. ಕಲ್ಕತ್ತೆಯಿಂದ ಕೆಲ ಔಷಧಗಳನ್ನು ತಂದದ್ದಾಯಿತು. ಹಾವು ಕಡಿದವರೂ ಬರಲಾರಂಭಿಸಿದಾಗ ಗೊಂದಲವಾಯಿತು. ನಾನು ಔಷಧಿಯ ಡಾಕ್ಟರನಲ್ಲವೆಂದು ಎಷ್ಟು ಹೇಳಿದರೂ, ಕೈಗುಣ ಚೆನ್ನಾಗಿದೆ ಏನಾದರೂ ಮಾಡಿ, ಗುಣಪಡಿಸಿ ಎಂದು ದುಂಬಾಲು ಬೀಳುತ್ತಿದ್ದರು. ಬಹುಸಂಖ್ಯಾತ ಸರ್ಪಗಳು ವಿಷಕಾರಿಯಲ್ಲದ್ದರಿಂದ, ವಾಸಿಯಾದವರು ಕೈಗುಣದಿಂದಲೇ ಎಂದು ದೃಢವಾಗಿ ನಂಬಿ ಹಿಂದಿರುಗುತ್ತಿದ್ದರು !

ಮಂಜಿನಿಂದ ಮುಸುಕಿದ ಮುಂಜಾವಿನಲ್ಲಿ ಹೊಸದಾಗಿ ಹೊರಬಿದ್ದ ದಾಸವಾಳದ ಚಿಗುರೆಲೆಗಳು ಅದೇಕೆ ಮುದುಡಿಕೊಂಡಿವೆ? ಎಂದು ಪರೀಕ್ಷಿಸು ತ್ತಿದ್ದಾಗ, ಏನೋ ಕೈಮೇಲೆ ಹರಿದಾಡಿದಂತಾಯಿತು. ಬೇಟೆಗಾಗಿ ಅವಿತು ಕುಳಿತ ಮಾಮೂಲು ಜೇಡು ಇರಬಹುದೆಂದು ಅಲಕ್ಷಿಸಿದೆ. ಅರೆಕ್ಷಣದಲ್ಲಿ ಎದ್ದ ಉರಿ, ಜೇಡಿನ ಪ್ರಭಾವವಲ್ಲ ಎಂದು ಸಾರಿ ಹೇಳಿತು ! ವಿಷಕ್ರಿಮಿ ಕಚ್ಚಿತೇ ಎಂದು ಆತಂಕದಿಂದ ಮನೆಗೋಡಿ, ದೀಪದ ಬೆಳಕಿನಲ್ಲಿ ಭೂತ ಗನ್ನಡಿಯಿಂದ ನೋಡಿದಾಗ, ಸಾಂತಾಲ ಹುಡುಗನ ಮೈಮೇಲೆ ಬಿಟ್ಟ ಅದೇ ಕೆಗಿರುವೆ. ಪ್ರಾಯೋಗಿಕವಾಗಿ ಇನ್ನೊಮ್ಮೆ ಒಂದು ಇರುವೆಯಿಂದ ಕಚ್ಚಿಸಿಕೊಂಡಾಗ, ದವಡೆಯ ಹಿಡಿತವನ್ನು ಒಂದಿಷ್ಟೂ ಸಡಲಿಸದೇ ಗಟ್ಟಿ ಯಾಗಿಯೇ ಕಚ್ಚಿತ್ತು. ಚರ್ಮದಿಂದ ಬೇರ್ಪಡಿಸಲು ಯತ್ನಿಸಿದಾಗ, ಧಡದಿಂದ ರುಂಡವನ್ನು ಬೇರ್ಪಡಿಸಿದರೂ, ತನ್ನ ಹಿಡಿತ ಬಿಟ್ಟಿರಲಿಲ್ಲ. ಅಬ್ಬಾ ! ಏಕಮಾತ್ರ ಇರುವೆ ಇಷ್ಟೊಂದು ಸಾಹಸ ತೋರಿ ತೀವ್ರ ನೋವನ್ನು ಕೊಡುವಾಗ ಸಾವಿರಾರು ಇರುವೆಗಳು ಒಟ್ಟಾಗಿ ಏನೆಲ್ಲ ಮಾಡ ಬಲ್ಲವು! ಎಂದೆನಿಸಿತು. ಅವುಗಳ ಬಗ್ಗೆ ವಿವರವಾಗಿ ಅರಿಯುವ ಆಸೆಯಾ ದರೂ, ತಿರುಗಿ ಅವುಗಳ ಗೋಜಿಗೆ ಹೋಗುವ ಧೈರ್ಯ ಮಾತ್ರ ಆಗಲಿಲ್ಲ. ಕೇವಲ ಒಂದು ಕೂದಲು ಹಿಡಿದೆಳೆಯಲು ಸಾಧ್ಯವಾಗುವಂತಹ ಸೂಕ್ಷ್ಮ

ಚಿಮ್ಮಟೆಯಿಂದ ಕೈಗೆ ಕಚ್ಚಿಕೊಂಡ ಶಿರವನ್ನು ಬೇರ್ಪಡಿಸಬೇಕಾದರೆ ಸರ್ಜನರ ಚಾಣಾಕ್ಷತೆ, ಜಾಗರೂಕತೆಗಳನ್ನು ಬಳಸಬೇಕಾಯಿತು. ಕಡಿತ ದಿಂದ ಚರ್ಮದಲ್ಲಿ ಛಿದ್ರವನ್ನು ಮಾಡಿ, ಫಾರ್ಮಿಕ್ ಆಮ್ಲವನ್ನು ಶರೀರ ದಲ್ಲಿ ಸೇರಿಸಿದ ಬಿಂದುವಿನ ಸುತ್ತಲೂ ಊದಿಕೊಂಡಿತ್ತು. ನೋವು ಮೂರು ತಾಸು ಇದ್ದರೆ, ಊದಿದ್ದು ಮಾಯವಾಗಲು ಒಂದು ದಿನವೇ ಬೇಕಾಯಿತು.

ಮರುದಿನ ನಡು ಹಗಲಿನಲ್ಲಿ ದಾಸವಾಳ ಗಿಡದತ್ತ ಕಣ್ಣು ಹಾಯಿಸಿ ದಾಗ ಚಿಗುರೆಲೆಗಳ ಸುಂದರ ಗೂಡು ತಯಾರಾಗಿ ನಿಂತಿತ್ತು. ಇನ್ನೂ ಹಸಿರಾಗದ ಕೆಂಪು ಎಲೆಯನ್ನು ತ್ರಿಕೋನಾಕಾರವಾಗಿ ಬಾಗಿಸಿ, ಜೋಡಿಸಿ, ಬರಹೋಗಲು ಕೇವಲ ಒಂದು ಬಾಗಿಲು ಬಿಟ್ಟು ಉಳಿದೆಡೆಯೆಲ್ಲ ಕೋಟೆ ಯಂತೆ ಭದ್ರವಾಗಿ ಮುಚ್ಚಲಾಗಿತ್ತು. ಇರುವೆ ರೂಪದ ಕೆಲಸಗಾತಿಯ ರೆಲ್ಲ ಗೂಡಿನ ಸುತ್ತ ಮುತ್ತ ಓಡಾಡಿ ಎಲ್ಲಿಯಾದರೂ ದುರಸ್ತಿ ಬೇಕೇ, ಹಚ್ಚಿದ ಅಂಟು ಗಟ್ಟಿಯಾಗಿ ಕೂತಿದೆಯೇ? ಎಂದು ಪರೀಕ್ಷಿಸುತ್ತಿದ್ದವು. ಆಹಾರವನ್ನು ಕಲೆ ಹಾಕಲು ಹೋದ ಕೆಲಸಗಾತಿಯರು, ಹುಳಹುಪ್ಪಡಿ ಗಳನ್ನು ಬೇರೆ ಕೀಟಗಳ ಕೈಕಾಲುಗಳನ್ನು ಹೊತ್ತು ಗೂಡು ಸೇರಲಾರಂಭಿಸಿ ದವು. ಅಷ್ಟರಲ್ಲಿ ಭಜನಾ ಮಂಡಳಿಯನ್ನು ಹೋಲುವ ಇರುವೆಗಳ ಗುಂಪೇ ಟೊಂಗೆಯ ಮೇಲಿನಿಂದ ಗೂಡಿನತ್ತ ಹೊರಟಿತ್ತು. ನಟ್ಟ ನಡುವೆ ಇದ್ದ ಉಬ್ಬಿದ ಹೊಟ್ಟೆಯುವಳು ಇರುವೆಯರಸಿಯೆಂದು ತಕ್ಷಣ ಹೇಳಬಹುದಿತ್ತು. ಆದರೆ ಅಂಗರಕ್ಷಕರಲ್ಲಿ ಸೈನಿಕರೆಂದು ಕರೆಯಬಹುದಾದ ಒಂದು ಇರುವೆಯೂ ಇಲ್ಲದ್ದು ಸೋಜಿಗವನ್ನುಂಟು ಮಾಡಿತು. ಬಹುಶಃ ಪ್ರತಿಯೊಂದು ಕೆಲಸ ಗಾತಿ ತನ್ನ ಪ್ರಬಲವಾದ ಮತ್ತು ಹರಿತವಾದ ದವಡೆಗಳಿಂದ ಸೈನಿಕನ ಕೆಲಸ ಮಾಡುವುದರಿಂದ ಈ ಗುಂಪಿನಲ್ಲಿ ಪ್ರತ್ಯೇಕ ಅಂಗರಕ್ಷಕರ ದಳದ ಅವಶ್ಯಕತೆ ಇದ್ದಿರಲಿಕ್ಕಿಲ್ಲ ಎನಿಸಿತು.

ಹಿಂದಿನ ದಿನ ಕಟ್ಟಿದ ಗೂಡು ನಿರೀಕ್ಷಿಸುತ್ತಿರುವಾಗ ಇನ್ನೊಂದು ಚಿಗುರೆಲೆಗಳ ಗೂಡು ರೂಪುಗೊಳ್ಳುತ್ತಿದ್ದುದು ಲಕ್ಷ್ಯಕ್ಕೆ ಬಂದು, ಅವುಗಳ ವಿಧಾನವನ್ನು ಹತ್ತಿರದಿಂದ ಅಭ್ಯಸಿಸುವ ಅವಕಾಶ ಸಿಕ್ಕಿತು. ಗೂಡನ್ನು

ಕಟ್ಟಲು ನಿರ್ಧರಿಸಿದ ಮುಂದಾಳುಗಳು, ಅದಕ್ಕೆ ಅನುಗುಣವಾದ ಎಲೆಗಳ ಸಂಶೋಧನೆಗೆ ಹೊರಡುತ್ತವೆ. ಬಲಿತ ಎಲೆಗಳು ಬಿರುಸಾಗಿರುವುದರಿಂದ ಅವುಗಳನ್ನು ಮಣಿಸುವುದು ಅಷ್ಟೊಂದು ಸುಲಭ ಸಾಧ್ಯವಲ್ಲ. ಅಂತೆಯೇ ಮಖಮಲ್ಲಿನಂತಿರುವ ಚಿಗುರನ್ನೇ ಆರಿಸುವವು. ಆನಂತರ ಉಳಿದ ಕೆಲಸ ಗಾತಿಯರನ್ನೆಲ್ಲ ಕರೆದುತಂದು, ಎರಡು ಭಾಗವಾಗಿ ವಿಂಗಡಿಸಿ, ಒಂದೊಂದರ ಗುಂಪು ಒಂದೊಂದು ಎಲೆಯ ಅಂಚನ್ನು ದವಡೆಗಳಲ್ಲಿ ಕಚ್ಚಿ ಹಿಡಿದು ಪರ್ಣದ ದೇಟಿನತ್ತ ಎಳೆದೆಳೆದು ಬಾಗಿಸಲಾರಂಭಿಸುವವು. ಎಲೆ ಬಾಗುತ್ತಿದ್ದಂತೆ, ಗಟ್ಟಿಯಾಗಿ ನಿಲ್ಲಲು ಆಗದಾಗ ಎರಡು ದಿಕ್ಕಿನ ಇರುವೆಗಳು ಕಾಲುಗಳನ್ನು ಜೋಡಿಸಿ, ಒಂದನ್ನು ಇನ್ನೊಂದು ಇರುವೆ ಎಳೆಯಲಾರಂಭಿಸುವುದು. ಎಲೆಯ ಅಂಚು ವಿಪರೀತ ದೂರವಿದ್ದರೆ ನಡುವೆ ಒಂದು ಕೆಲಸಗಾತಿ ಸೇರಿ ಕೊಂಡು, ಎಡಗಾಲನ್ನು ಒಂದು ಗುಂಪಿಗೂ, ಬಲಗಾಲನ್ನು ಇನ್ನೊಂದು ಗುಂಪಿಗೂ ಕೊಟ್ಟು ತಾನು ಹವೆಯಲ್ಲಿ ತೇಲಾಡುವ ದೃಶ್ಯ ತೀರ ಕುತೂಹಲ ಕಾರಿ. ಅಂಚುಗಳು ಹತ್ತಿರ ಬರಲಾರಂಭಿಸಿದಂತೆ ಹೆಚ್ಚಿನ ಇರುವೆಗಳು ಜಾರಿಕೊಳ್ಳುವವು. ಇಂತಹ ಸಂದರ್ಭದಲ್ಲಿ ಬಾಗಿದ ಎಲೆ ತಿರುಗಿ ಸ್ವಸ್ಥಾನಕ್ಕೆ ಹಿಂದಿರುಗುವುದೂ ಉಂಟು. ಆದರೆ ಕೆಲಸಗಾತಿಯರು ಒಂದಿಷ್ಟೂ ಬೇಸ ರಿಸದೇ ತಮ್ಮ ಯತ್ನವನ್ನು ತಿರುಗಿ ಪ್ರಾರಂಭಿಸುವವು.

ಅಂಚುಗಳು ಒಂದರ ಮೇಲೊಂದು ಬಂದಾಗ ಅವು ಜಾರಿಕೊಳ್ಳದಂತೆ ಕೆಲ ಕೆಲಸಗಾತಿಯರು ಕಚ್ಚಿ ಹಿಡಿಯುವವು. ಇನ್ನೂ ಕೆಲವು ಇರುವೆಗಳು, ದವಡೆಗಳಲ್ಲಿ ತಮ್ಮ ಗುಂಪಿಗೆ ಸೇರಿದ ಒಂದೊಂದು ಮರಿಯನ್ನು ಕಚ್ಚಿ ಕೊಂಡು ಬಂದವು. ಈ ಮರಿಗಳ ಮೇಲೆ ಅತ್ಯಲ್ಪ ಒತ್ತಡ ಹಾಕಿದಾಗ, ರೇಷಿಮೆಯಂತಹ ಅಂಟನ್ನು ಹೊರಹಾಕಲಾರಂಭಿಸಿದವು. ಲಕೋಟೆಯನ್ನು ಮುಚ್ಚಲು ಅದರ ಅಂಚಿನ ಮೇಲೆ ಅಂಟಿನ ಬಾಟ್ಲಿ ಓಡಿಸುವಂತೆ, ಈ ಕೆಲಸ ಗಾತಿಯರು ಎಲೆಗಳ ಅಂಚಿನ ಮೇಲೆ ಮರಿಗಳನ್ನು ಹಿಂದೆ-ಮುಂದೆ ಸವರಿ, ರೇಷಿಮೆಅಂಟು ಎಲೆಗಳ ಅಂಚಿಗೆ ಸವರಿ, ಅವನ್ನು ಅಂಟಿಸಿಯೇ ಬಿಟ್ಟವು. ಮೋಜಿನ ಸಂಗತಿಯೆಂದರೆ, ಮಾನವ ತಯಾರಿಸಿದ ಅಂಟಿಗಿಂತ ಇರುವೆಯ ದೈವದತ್ತ ಅಂಟು ಬೇಗ ಗಟ್ಟಿಯಾಗಿಬಿಟ್ಟಿತು. ಕೆಲ ಇರುವೆ ಇಂಜನಿಯರು

ಗಳು ಸಿದ್ಧವಾದ ಗೂಡಿನೊಳಕ್ಕೆ ಹೊಕ್ಕು ಕಿಂಡಿ, ಬಿರುಕು, ಗಾಳಿ, ಬೆಳಕು ಬರುವ ಸ್ಥಾನಗಳನ್ನು ಗೊತ್ತು ಹಚ್ಚಿ ಅಲ್ಲಿ ಅಧಿಕವಾದ ಅಂಟನ್ನು ಸುರಿಸು ವಂತೆ ಮಾಡಿದವು. ಗೂಡು ಸರ್ವ ರೀತಿಯಿಂದಲೂ ಒಪ್ಪಿಗೆಯಾದಾಗ, ದುಡಿಮೆಯ ಆಳುಗಳೆಲ್ಲ ಒಳ-ಹೊರಗೆ ಓಡಾಡಿ ತಮ್ಮ ಸಾಹಸಕ್ಕೆ ಹೆಮ್ಮೆ ಪಟ್ಟವು.

ಈ ಎಲೆ ಗೂಡುಗಳ ರಚನೆ ಒಳಗಿನಿಂದ ಹೇಗಿರುತ್ತದೆ ಎಂದು ಪರೀಕ್ಷಿಸುವುದಕ್ಕಾಗಿ ರಬ್ಬರಿನ ಕೈಚೀಲ ಧರಿಸಿ, ಎರಡು ಚಿಮ್ಮಟೆಗಳಿಂದ ಎಲೆಗಳ ಅಂಚುಗಳನ್ನು ಬೇರ್ಪಡಿಸಿದಾಗ, ಏನೋ ಅನಾಹುತ ನಡೆದಂತೆ ಕೆಲ ಕೆಲಸ ಗಾತಿ ಇರುವೆಗಳು ತಮ್ಮ ಕೆಲಸಗಳನ್ನೆಲ್ಲ ಅಲ್ಲಿಗೇ ಬಿಟ್ಟು ರಾಣಿ ಮತ್ತು ಮಕ್ಕಳು-ಮರಿಗಳೊಂದಿಗೆ ಹೊರಗೋಡಿದವು. ಇನ್ನುಳಿದ ಕೆಲಸಗಾತಿಯರು ಕ್ಷಣಾರ್ಧದಲ್ಲಿ ಅಂಚುಗಳನ್ನು ಒಟ್ಟಿಗೆ ತಂದು ಜೋಡಿಸಿ ಬಿಡುತ್ತಿದ್ದವು. ಹತ್ತೆಂಟು ಸಲ ಬೇರ್ಪಡಿಸಿದರೂ ಅವು ತಿರುಗಿ ಜೋಡಿಸುವ ತಾಳ್ಮೆ ಪ್ರಶಂಸನೀಯ. ಎಲ್ಲ ಕೆಲಸವನ್ನು ಸರಕಾರವೇ ಮಾಡಬೇಕೆಂದು ಬಯಸುವ ನೆರೆಹಾವಳಿ ಪೀಡಿತರು, ನಿರಾಶ್ರಿತರು, ಇತರ ಸಾಮಾನ್ಯ ಪ್ರಜೆಗಳು ಸ್ವಸಹಾಯ ಪದ್ಧತಿಯನ್ನು ಈ ಇರುವೆಗಳಿಂದ ಕಲಿಯಬಹುದೇನೋ! ಗೂಡಿನೊಳಗೆ ಇರುವ ಒಂದೇ ಕೋಣೆಯಲ್ಲಿ ರಾಣಿಗೆ ಅಗ್ರಸ್ಥಾನ ಸಲ್ಲುತ್ತದೆ. ಮೂಲೆಯೊಂದನ್ನು ಬೆಳೆಯುವ ಮರಿಗಳಿಗೆ ಮೀಸಲಾಗಿಟ್ಟರೆ, ಇನ್ನೊಂದು ಮೂಲೆಯಲ್ಲಿ ಜೀರ್ಣಿಸಿಕೊಳ್ಳಲಾಗದ ಆಹಾರದ ತುಣುಕುಗಳನ್ನು ಶೇಖರಿಸ ಲಾಗಿತ್ತು. ಕೆಲಸಗಾತಿಯರೆಲ್ಲ ಸ್ಥಳವಿದ್ದಲ್ಲಿ ಕಿಕ್ಕಿರಿದು ತುಂಬಿದ್ದವು. ಜನ ಸಂಖ್ಯೆ ಬೆಳೆದಂತೆ, ಎಲೆಯೂ ಹಿಗ್ಗಿ ಗೂಡು ದೊಡ್ಡದಾಗುತ್ತಿತ್ತು. ಈ ಕುಶಲ ವಿಧಾನ ಒಪ್ಪಿಗೆ ಆಯಿತು.

ಗೂಡಿಗಾಗಿ ಬಳಸಿದ ಎಲೆ ಹಣ್ಣಾಗಿ ಉದುರುವ ಪ್ರಸಂಗ ಬಂದಾಗ ಈ ಇರುವೆಗಳು ಏನು ಮಾಡುತ್ತಿರಬಹುದು? ಎಂಬ ಸಮಸ್ಯೆ ಧುತ್! ಎಂದು ತಲೆ ಎತ್ತಿ ನಿಂತಾಗ ಅವುಗಳೇ ಅದನ್ನು ಬಗೆಹರಿಸಿದವು. ಹಸಿರೆಲೆ, ಹಳದಿಯಾಗಿ ನಾಶಿಪುಡಿ ವರ್ಣಕ್ಕೆ ತಿರುಗುತ್ತಿದ್ದಂತೆ ಕೆಲಸಗಾತಿಯರು ಹೊಸ ಗೂಡು ಕಟ್ಟಲಾರಂಭಿಸಿದವು. ಇವನ್ನು ಹೆಚ್ಚಾಗಿ ಅದೇ ಗಿಡದ

ಮೇಲೆಯೇ ಕಟ್ಟುವುದು ರೂಢಿ. ಗೂಡು ತಯಾರಾದ ಮೇಲೆ ಪ್ರವಾಸ ನಾಟಕ ಅಥವಾ ಸರ್ಕಸ್ ಕಂಪನಿಯವರಂತೆ ಎಲ್ಲ ಸರಂಜಾಮುಗಳೊಡನೆ ನವಗೃಹ ಪ್ರವೇಶ ಮಾಡಿದವು. ಕೆಲ ಪಂಗಡಗಳಲ್ಲಿ ಬಹಳಷ್ಟು ಎಲೆಗಳನ್ನು ಬಳಸಿ, ವಿಸ್ತಾರವಾದ ಗೂಡು ಕಟ್ಟುವ ಪದ್ಧತಿಯೂ ಇದೆ. ಅಂಥವುಗಳು ಜನವಸತಿ ಬೆಳೆದಂತೆ ಇನ್ನಷ್ಟು ಎಲೆಗಳನ್ನು ಜೋಡಿಸಿ ಗೂಡನ್ನು ವಿಸ್ತರಿಸುವುದುಂಟು. ಇಂತಹ ಗೂಡನ್ನು ಟೊಂಗೆಯ ಸುತ್ತಲೂ ರಚಿಸಿ, ರೇಷ್ಮೆ ಅಂಟಿನಿಂದ ಅದಕ್ಕೆ ಜೋಡಿಸುವುದರಿಂದ, ಎಲೆ ಉದುರಿದರೂ ಗೂಡು ನೆಲಕ್ಕೆ ಉರುಳುವ ಭಯವೇ ಇಲ್ಲ. ಹಲಸು, ಮಾವು, ನೇರಲ, ಸಿಗೇಕಾಯಿ ಮರದ ಮೇಲೆ ಇಂಥ ಹತ್ತಾರು ಗೂಡುಗಳು ಸಹಜವಾಗಿ ಗೋಚರಿಸುವವು.

ಈ ಕೆಂಪು ಇರುವೆಗಳು ಹಸಿವನ್ನು ನೀಗಿಸಿಕೊಳ್ಳಲು, ತಮ್ಮ ವಾಸದ ವೃಕ್ಷವನ್ನೆಲ್ಲ ಸಂಚರಿಸಿ, ಹುಳ-ಹುಪ್ಪಡಿಗಳ ಶಿಕಾರಿ ಮಾಡುವುದರಿಂದ ಅವುಗಳ ಮೇಲೆ ಇನ್ನಿತರ ಕೀಟಗಳು ಸಂಸಾರ ಹೂಡುವ ಗೋಜಿಗೆ ಹೋಗುವುದಿಲ್ಲ. ಆದ್ದರಿಂದ ಸ್ಥಾನೀಯ ಜನರು ತಮ್ಮ ಹಣ್ಣು-ಹಂಪಲುಗಳ ಗಿಡಮರಗಳು ಕೀಟ-ಬಾಧೆಯಿಂದ ಬಳಲಿದರೆ, ಕೆಂಪು ಇರುವೆಗಳ ಗೂಡುಗಳನ್ನು ತಂದು ಕಟ್ಟುತ್ತಾರೆ. ಇವುಗಳು ಜೀವಂತ ಕೀಟನಾಶಕಗಳಂತೆ ಕೆಲಸ ಮಾಡುತ್ತವೆ. ಒಂದು ದಿನ ಪರಿಚಯದ ಇರುವೆಗಳಿಂದ ಕಚ್ಚಿಸಿಕೊಂಡ ಆ ಸಾಂತಾಲಿ ಹುಡುಗನು ಕೆಂಪು ಇರುವೆಗಳ ದೊಡ್ಡ ಗೂಡಿಗೆ ಆಸೆಪಟ್ಟು ಹೆಮ್ಮರವನ್ನು ಏರುವ ಸಾಹಸ ಮಾಡಿದ. ಮೈಮೇಲೆ ಹರಿದಾಡುವ ಇರುವೆಗಳನ್ನು ಝಾಡಿಸಲು ಹತ್ತಿರದ ಟೊಂಗೆಯೊಂದನ್ನು ಮುರಿದು, ಚಾಮರದಂತೆ ಬಳಸಲು ಯತ್ನಿಸಿದ. ಆದರೆ ಅದರ ಮೇಲಿದ್ದ ಪುಟ್ಟ ಗೂಡಿನ ಇರುವೆಗಳೆಲ್ಲ ಮೈಯನ್ನು ಕಚ್ಚಲಾರಂಭಿಸಿದವು. ಇಷ್ಟಾದರೂ ಧೃತಿಗೆಡದೆ, ದೊಡ್ಡ ಗೂಡೊಂದನ್ನು ಕೈಯಲ್ಲಿ ಹಿಡಿದೇ ಕೆಳಗಿಳಿದ. ಅಂದು ಇರುವೆಗಳಿಂದಾಗಿ ಚೀರುತ್ತಿದ್ದವನಿಗೆ ಇಂದು ಇಷ್ಟೇಕೆ ಅವುಗಳ ಮೇಲೆ ಆಸೆ ಮೂಡಿತು ? ಎಂದು ವಿಚಾರಿಸಿದಾಗ "ಬಾಬೂಜಿ ಇಂಥ ದೊಡ್ಡ ಗೂಡಿನಲ್ಲಿ ಅಧಿಕ ಪ್ರಮಾಣದಲ್ಲಿ ಇರುವೆ.

ಮೊಟ್ಟೆಗಳಿರುತ್ತವೆ. ಅವುಗಳಿಂದ ಮಾಡಿದ 'ಭಾಜಾ' ಬಲು ರುಚಿ! ಎಂದು ಗೂಡನ್ನು ಹಿಗ್ಗಿಸಿ, ಅವುಗಳಲ್ಲಿರುವ ಹಳದಿ ಬಣ್ಣದ ಮುತ್ತಿನಂತಿದ್ದ ಮೊಟ್ಟೆಗಳನ್ನು ಜೊತೆಯಲ್ಲಿ ತಂದ ಮಡಕೆಗೆ ಸೇರಿಸಿದ. ಗೇಟಿನ ಹೊರಕ್ಕೆ ಹೋಗುತ್ತಿದ್ದಂತೆ, "ಬಾಬೂ, ನೀವೂ ತಿನ್ನುತ್ತೀರಾ? ಸ್ವಲ್ಪ ಭಾಜಾ ತಂದು ಕೊಡಲೇ?" ಎಂದು ಕೇಳಿದಾಗ ತಲೆಯಲ್ಲಾಡಿಸಿ ಅಸಮ್ಮತಿ ಸೂಚಿಸಿದ್ದೆ. ತನಗೆ ಕಚ್ಚಿದ ಇರುವೆಗಳ ಸಂತಾನದ ಹುರಿಚಟ್ನಿಯನ್ನು ಸೇಡಿನಿಂದಲೇ ಸೇವಿಸಿರಬೇಕು ಆ ಸಾಂತಾಲಿ!